ಮುಂಬೈ ವಿಶ್ವವಿದ್ಯಾಲಯದಿಂದ ಮನ್ನಣೆ ಪಡೆದುದು

# ಕವಿ ಕನಕದಾಸರು

೧೯೩೮

ಬರೆದವರು:—

ಕಟ್ಟಿ ಶೇಷಾಚಾರ್ಯರು

ಬಿ ಎ. ಎಲ್ಎಲ್. ಬಿ. ಬೆಳಗಾವಿ.

ಮೊನ್ನೆ ತಾನೆ ಎನ್ನನ್ನಗಲಿಹೋದ

ಹೆತ್ತಮ್ಮ ಶ್ರೀ **ಸುಂದರಾಬಾಯಿ**, ಹೆಂಡತಿ ಸೌ. **ಲಕ್ಷ್ಮೀಬಾಯಿ**

ಇವರೀರ್ವರ ನೆನಪಿಗಾಗಿ ಈ ಹೊತ್ತಿಗೆಯು

ಮುಡಿಪಾದುದು.

# ಸಾಧನ ಸಾಹಿತ್ಯ.

## ಕನ್ನಡ.

| | |
|---|---|
| ಮೋಹನತರಂಗಿಣಿ | ಕನಕದಾಸರು. |
| ನಳಚರಿತ್ರೆ | ,, |
| ಭಕ್ತಿಸಾರ | ,, |
| ಕಬ್ಬಿಗರ ಕಾವ | ಆಂಡಯ್ಯ |
| ಕರ್ನಾಟಕ ಮಹಾಭಾರತ (ಆದಿಪರ್ವ, ಸಭಾಪರ್ವ, ಆರಣ್ಯಪರ್ವ) | ಕುಮಾರವ್ಯಾಸ. |
| ಜೈಮಿನಿ ಭಾರತ | ಲಕ್ಷ್ಮೀಶ. |
| ಭರತೇಶವೈಭವ | ರತ್ನಾಕರವರ್ಣಿ. |
| ಚೆನ್ನಬಸವಪುರಾಣ | ವಿರೂಪಾಕ್ಷಪಂಡಿತ. |
| ತೊರವೆಯ ರಾಮಾಯಣ ( ಸುಂದರಕಾಂಡ ) | ಕುಮಾರ ವಾಲ್ಮೀಕಿ. |
| ಮೈರಾವಣನ ಕಾಳೆಗ | ,, |
| ಕರ್ನಾಟಕ ಕವಿಚರಿತೆ ( ಭಾಗ ೨ ) | ಆರ್. ನರಸಿಂಹಾಚಾರ್ಯರು. |
| ಕರ್ನಾಟಕ ಭಕ್ತವಿಜಯ (ಭಾಗ ೧) | ಬೇಲೂರ ಕೇಶವದಾಸರು. |
| ಕರ್ನಾಟಕ ಹರಿದಾಸ ಕೀರ್ತನತರಂಗಿಣಿ (ಭಾಗ ೧,೨,೩) | ಸುಬೋಧ ಪ್ರಕಟನಾಲಯ. |
| ವಿಜಯನಗರ ಸಾಮ್ರಾಜ್ಯಸಂಚಿಕೆ | ಅರುಣೋದಯ, ಬೆಳಗಾವಿ. |
| ಶ್ರೀವಾದಿರಾಜರ ಚರಿತ್ರೆ | ಕೃಷ್ಣ ಮುದ್ರಣಾಲಯ, ಉಡುಪಿ |
| ಕನಕದಾಸರ ಕೀರ್ತನೆ ( ಭಾಗ ೧ ) | ,, |
| ಕನಕಮಹಿಮಾದರ್ಶ | ಒಡವಿ ಭೀಮಾಚಾರ್ಯರು |

## ಸಂಸ್ಕೃತ.

| | |
|---|---|
| ಮಹಾಭಾರತಂ ( ಸಭಾಪರ್ವ, ವನಪರ್ವ ) | |
| ಭಾಗವತಂ ( ೧೦ ಸ್ಕಂಧ, ಉತ್ತರಾರ್ಧ ) | |
| ಹರಿವಂಶ ಪುರಾಣಂ ( ವಿಷ್ಣುಪರ್ವ ) | |
| ವಿಷ್ಣುಪುರಾಣಂ ( ಅಂಶ ೫, ಅಧ್ಯಾಯ ೨೬—೩೩ ) | |
| ಸ್ಕಾಂದಪುರಾಣಂ ( ಮಾಹೇಶ್ವರಖಂಡೇ ಕೇದಾರಖಂಡಂ. ಅ. ೨೦ - ೨೧ ) | |
| ಕುಮಾರಸಂಭವಂ ( ಸರ್ಗ ೨ - ೩ ) | ಕಾಳಿದಾಸ. |
| ನೈಷಧ ಚರಿತಂ | ಶ್ರೀಹರ್ಷ. |
| ರುಕ್ಮಿಣೀಶವಿಜಯಂ | ವಾದಿರಾಜ |
| ತೀರ್ಥಪ್ರಬಂಧಂ | ,, |
| ವ್ಯಾಸಯೋಗಿಚರಿತಂ | ಸೋಮನಾಥ |
| ಮರಾಠೀ ಜ್ಞಾನಕೋಶ | |

# ಅರಿಕೆ.

ದಾಸರ ಪದಗಳನ್ನು ಓದತೊಡಗಿದೆನು ಕನಕದಾಸರ ಪದಗಳೆಡೆಗೆ ಏಕೊ ಮನವೊಲಿಯಿತು. ಪ್ರಕಟವಾದ ಅವರ ಎಲ್ಲ ಪದಗಳನ್ನು ತರಿಸಿ ಪಠಿಸಿದೆನು. ಕವಿಚರಿತ್ರೆಕಾರರು ಕನಕದಾಸರ ವಿಷಯದಲ್ಲಿ ಬರೆದುದನ್ನು ಓದಿ ದಾಸರ ಮೋಹನತರಂಗಿಣಿ, ನಳಚರಿತ್ರೆ, ಮತ್ತು ಹರಿಭಕ್ತಿಸಾರ ಎಂಬ ಗ್ರಂಥಗಳನ್ನು ಅಭ್ಯಾಸಿಸಿದೆನು. ದಾಸರ ನರಸಿಂಹಸ್ತವ, ಮತ್ತು ರಾಮಧಾನ್ಯ ಚರಿತ್ರೆಗಳು ಅಚ್ಚಾಗಿರುವುದಿಲ್ಲ. ಅವುಗಳ ಕೈಬರೆಹದ ಪ್ರತಿಗಳ ವಿಷಯದಲ್ಲಿ ಬೆಂಗಳೂರ ಲಾಯಬ್ರರಿ, ಸಾಹಿತ್ಯ ಪರಿಷತ್ತಿನ ಕಚೇರಿ, ಮತ್ತು ಮೈಸೂರ ವಾಚನಾಲಯಗಳಿಗೆ ಬರೆದು ಕೇಳಿದನು. ಅಲ್ಲಿ ಅವುಗಳ ಸುಳಿವು ಹತ್ತಲಿಲ್ಲ. ಶ್ರೀಮಾನ್ ಆರ್. ನರಸಿಂಹಾಚಾರ್ಯರಿಗೆ, ಅವುಗಳ ಹಸ್ತಪ್ರತಿಗಳಿದ್ದರೆ ಕಳುಹುವ ಅನುಗ್ರಹವಾಗಬೇಕೆಂದು ಒಂದು ಓಲೆ ಬರೆದೆನು ಮಹಾನುಭಾವ ರಾದ ಆಚಾರ್ಯರು ತಾರೀಖು ೧೫-೧೦-೧೯೩೭ ಇಸ್ವಿಯ ದಿವಸ ನನಗೆ ಪತ್ರ ಬರೆದು ತಿಳಿಸಿದುದೇನಂದರೆ, “ನೀವು ಕನಕದಾಸರು ಮತ್ತು ಅವರ ಕೃತಿಗಳ ವಿಷಯದಲ್ಲಿ ಒಂದು ಹೊತ್ತಿಗೆಯನ್ನು ಬರೆಯುತ್ತಿರುವಿರೆಂಬುದನ್ನು ಕೇಳಿ ಸಂತೋಷವಾಯಿತು. ರಾಮಧಾನ್ಯಚರಿತ್ರೆ ನರಸಿಂಹಸ್ತವಗಳು ನನ್ನ ಹತ್ತರ ಇರುವುದಿಲ್ಲ. ಅವುಗಳನ್ನು ನನ್ನ ಗೆಳೆಯರಿಂದ ಕಡ ತೆಗೆದುಕೊಂಡಿದ್ದೆನು. ಕೆಲಸವಾದ ಕೂಡಲೆ ಅವುಗಳನ್ನು ತಿರುಗಿ ಕೊಟ್ಟುಬಿಟ್ಟೆನು. ಆ ಮಾತಿಗೆ ಇಂದು ಇಪ್ಪತ್ತು ವರ್ಷಗಳಾದುವು ಈ ಕಾಲಾವಧಿಯ ಮೂಲಕ ಆ ಹೊತ್ತಿಗೆಗಳನ್ನು ಒದಗಿಸಿಕೊಟ್ಟವರ ಹೆಸರನ್ನು ಜ್ಞಾಪಕಕ್ಕೆ ತರಲಾರೆನು. ಮದ್ರಾಸಿನೊಳಗಿನ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ ಲಾಯಬ್ರರಿಗೆ ಪತ್ರ ಬರೆದು ಪ್ರಯತ್ನಿಸಬಹುದು. ಇಲ್ಲವೆ, ಮದ್ರಾಸಿನ ವಿಶ್ವವಿದ್ಯಾಲಯದ ಸಂಶೋಧನ ಸಂಸ್ಥೆಯ ಕನ್ನಡ ವಿಭಾಗದ ಹಿರಿಯ ಅಧ್ಯಾಪಕರಾದ ಶ್ರೀಮಾನ್ ಎಚ್. ಚೆನ್ನಕೇಶವ ಅಯ್ಯಂಗಾರರಿಗೆ ಬರೆದುಕೊಳ್ಳಬಹುದು.” ಆಚಾರ್ಯರ ಹೇಳಿಕೆಯಂತೆ ಮದರಾಸಿಗೆ ಪತ್ರ ಬರೆದೆನು. ಅಲ್ಲಿಯೂ ಆ ಪ್ರತಿಗಳಿಲ್ಲವೆಂಬುದನ್ನು ಕೇಳಿ ವ್ಯಸನವಾಯಿತು. ಕೊನೆಗೆ ಕಾಗಿನೆಲ್ಲಿಗಾದರೂ ಹೋಗಿ ಆ ಎರಡು ಕಾವ್ಯಗಳ ಗೊತ್ತುಹಚ್ಚಬೇಕೆಂದು ಆದಿಕೇಶವನ ಸನ್ನಿಧಿಗೆ ಹೋದೆನು. ಅಲ್ಲಿಯಾದರೊ, ಕನಕದಾಸರು ಕಾವ್ಯಗಳನ್ನು ಬರೆದರೆಂಬ ಸುದ್ದಿಯೆ ಹೊಸತಾಗಿ ಕಂಡಿತು! ಉಪಾಯವಿಲ್ಲದೆ, ಕೈಕೊಂಡ

ಕಾರ್ಯವನ್ನು ಕೊನೆಗಣಿಸಬೇಕೆಂದು ಈ ಹೊತ್ತಿಗೆಯನ್ನು ಬರೆಯಲು ಅಣಿಯಾದೆನು. ನನ್ನೀ ಕೃತಿಗೆ ಕೊರತೆಯುಂಟಾಗಬಾರದೆಂದು ಆಚಾರ್ಯರು ರಾಮಧಾನ್ಯಚರಿತ್ರೆ ನರಸಿಂಹಸ್ತವಗಳ ವಿಷಯದಲ್ಲಿ ಬರೆದುದನ್ನೇ ಕೃತಜ್ಞತೆಪೂರ್ವಕ ಉದ್ಧರಿಸಿರುವೆನು. ನನಗೆ ಪತ್ರ ಬರೆದ ಮೇಲೆ ಸ್ವಲ್ಪೇ ಅವಧಿಯಲ್ಲಿ ಆಚಾರ್ಯರು ಕಾಲವಶರಾದರು. ಅವರ ಮರಣದಿಂದ ದಾಸರ ಆ ಎರಡು ಕಾವ್ಯಗಳ ಸಂಬಂಧವಾಗಿ ಮಾತಾಡಬಲ್ಲ ಮನುಷ್ಯನೂ ಲಯವಾದಂತಾಗಿದೆ. ಕನ್ನಡಿಗರು ಈ ವಿಷಯದಲ್ಲಿ ಪ್ರಯತ್ನಿಸಿ, ಆ ಕಾವ್ಯಗಳನ್ನು ಬೆಳಕಿಗೆ ತರದೆ ಹೋದರೆ, ಅವು ಹುಳಹುಪ್ಪಡಿಗಳ ಬಾಯಿಗೆ ಶಿಲುಕಿ ನಾಮಶೇಷವಾಗುವ ಸಂಭವವಿದೆ!

ನಮ್ಮ ದಾಸರ ಸೊಗಸಾದ ಬಾಳು ಕಟ್ಟುಕತೆಗಳಲ್ಲಿ ಹುಗಿದು ಅದರ ಮೇಲೆ ಪವಾಡದ ಪೊದೆ ಬೆಳೆದು ನಿಂತಿದೆ. ಆ ಕಂಟಿಯನ್ನು ಕಡಿದು ಹುಗಿದುದನ್ನು ಅಗೆದು ತೆಗೆಯುವದೇ ಸಂಶೋಧಕರ ಕಾರ್ಯ. ನಮ್ಮೊಳಗಣ ಖೂಳ ಕಲ್ಪನೆಗಳಿಗೆ ಇತಿಹಾಸಸಂಶೋಧನವೆ ಮದ್ದು ಆ ದೃಷ್ಟಿಯಿಂದಲೆ ನನ್ನೀಕೃತಿಯನ್ನು ಪರಿಕಿಸಬೇಕೆಂದು ಓದುಗರಲ್ಲಿ ಬಿನ್ನಹ.

ಮುಂಬಯಿ ವಿಶ್ವವಿದ್ಯಾನಿಲಯದವರು ಈ ಹೊತ್ತಿಗೆಗೆ ತಗಲುವ ವೆಚ್ಚದ ಬಹು ಭಾರವನ್ನು ಇಳುಹಿದುದಕ್ಕಾಗಿ ನಾನು ಅವರಿಗೆ ತುಂಬ ಋಣಿಯಾಗಿದ್ದೇನೆ.

ಹಾವೇರಿಯ ಹಾಯ್‌ಸ್ಕೂಲಿನ ಹಿರಿಯ ಮತ್ತು ಕಿರಿಯ ಅಧ್ಯಾಪಕರಾದ ಶ್ರೀ. ಬೆಂಗೇರಿ ಹುಚ್ಚರಾಯರು ಎಂ ಏ, ಕರಜಿಗಿ ಶಿವರಾಯರು ಬಿ ಏ. ಇವರೀರ್ವರೂ ನನ್ನೊಡನೆ ಕಾಗಿನೆಲ್ಲಿಗೆ ಬಂದು, ಅಲ್ಲಿಯ ಶಿಲಾಲೇಖಗಳನ್ನು ಓದಿ, ಅವುಗಳ ಪ್ರತಿಗಳನ್ನು ತಮ್ಮ 'ಅಯ್ಯನವರ ಬಳಗ'ದ ಪರವಾಗಿ ಕಳುಹಿದುದರಿಂದ, ಅವರಿಗೂ ಅವರ ಬಳಗದವರಿಗೂ ನಾನು ಕೃತಜ್ಞನಾಗಿರುವೆನು. ಶ್ರೀಮಹಾವೀರ ಮುದ್ರಣಾಲಯದ ಒಡೆಯರಾದ ಚವುಗುಲೆ ಸಾತಪ್ಪನವರು ಯಾವತ್ತೂ ಅನುಕೂಲತೆಗಳನ್ನು ಒದಗಿಸಿಕೊಟ್ಟು ಈ ಹೊತ್ತಿಗೆಯು ಹೊರಡುವುದರಲ್ಲಿ ಸಂಪೂರ್ಣವಾಗಿ ಸಹಾಯ ಮಾಡಿದುದರಿಂದ ಅವರ ಉಪಕಾರವನ್ನೂ ನಾನು ಮರೆಯಲಾರೆನು.

ಅನಂತಶಯನ ಬೀದಿ
ಬೆಳಗಾವಿ.
೧೪—೭—೧೯೩೮.

ಕಟ್ಟಿ ಶೇಷಾಚಾರ್ಯ.

---

# ಮುನ್ನುಡಿ.

“ ಬಹುರತ್ನಾಹಿ ವಸುಂಧರಾ ” ಎಂದು ಮಹಾಕವಿ ಕಾಲಿದಾಸನು ಅಂದಿರುವನು. “ ರತ್ನ ” ಶಬ್ದವನ್ನು “ ಶ್ರೇಷ್ಠ ವಸ್ತು ” ವೆಂಬರ್ಥದಲ್ಲಿ ಉಪಯೋಗಿಸಿರುವನೆಂದು ವ್ಯಾಖ್ಯಾನಕಾರರೆಲ್ಲರು ಒಮ್ಮತದಿಂದ ಒಪ್ಪಿರುವರು. ಜಗತ್ತಿನೊಳಗೆ ಶ್ರೇಷ್ಠ ವಸ್ತುಗಳ ಆಗರವು ಭರತ ಭೂಮಿಯೆಂದು ಬಹುಕಾಲದಿಂದ ಪ್ರಸಿದ್ಧಿಯಿರುವದು. ಧಾರ್ಮಿಕ ವಿಷಯದಲ್ಲಿ ಭರತ ಭೂಮಿಯನ್ನು ಕೈಹಿಡಿಯುವಂಥ ನಾಡು ಜಗತ್ತಿನಲ್ಲಿ ಇಲ್ಲವೆಂದೇ ಧೈರ್ಯದಿಂದ ಹೇಳಬಹುದು. ಪ್ರಸಿದ್ಧ ಆಂಗ್ಲ ಗ್ರಂಥಕಾರನಾದ ಎಚ್. ಜಿ. ವೆಲ್ಸನು ಆರಿಸಿಕೊಂಡ ಆರು ಧಾರ್ಮಿಕ ಮಹಾಪುರುಷರಲ್ಲಿ ಭಗವಾನ್ ಬುದ್ಧ ಮತ್ತು ಸಾಮ್ರಾಟ್ ಅಶೋಕ ಇವರೀರ್ವರು ಭಾರತೀಯರು. ಭಾರತವು ಧಾರ್ಮಿಕ ವಿಷಯದಲ್ಲಿ ಜಗತ್ತಿನ ವಸ್ತುಸಂಗ್ರಹಾಲಯವಾಗಿದೆಯೆಂದು ಧಿಟ್ಟತನದಿಂದ ಹೇಳಬಹುದು. ಇತಿಹಾಸದ ಯುಗವು ಪ್ರಾರಂಭವಾಗುವದಕ್ಕೂ ಮೊದಲಿನಿಂದ ಇಲ್ಲಿಯವರೆಗೆ ಧರ್ಮ ತತ್ವಜ್ಞಾನ ಮೊದಲಾದ ಗಹನ ವಿಷಯಗಳ ತೊಡಕನ್ನು ಬಿಡಿಸಬಲ್ಲ ಮಹನೀಯರನ್ನು ಒದಗಿಸಿಕೊಟ್ಟು ಮಾನವಜನಾಂಗದಲ್ಲಿ ವಿಚಾರ ಕ್ರಾಂತಿಯನ್ನುಂಟುಮಾಡಿದ ಶ್ರೇಯಸ್ಸನ್ನು ಈ ನಮ್ಮ ದೇಶವು ಪಡೆಯಬಲ್ಲದು. ಇದು ಪ್ರತಿಯೊಬ್ಬ ಭಾರತೀಯನು ಅಭಿಮಾನ ಪಡತಕ್ಕ ವಿಷಯ. ಈ ನಮ್ಮ ಹಿಂದ ಮಾತೆಯು ಹಿಂದೂ, ಬೌದ್ಧ, ಜೈನ ಮೊದಲಾದ ಧರ್ಮಗಳಿಗೆ ಹೆತ್ತ ತಾಯಿಯಾಗಿದ್ದರೂ, ಯಹುದೀ, ಪಾರ್ಸೀ, ಕ್ರಿಶ್ಚನ್, ಮಹಮ್ಮದೀಯ ಮೊದಲಾದವುಗಳನ್ನು ಹೆತ್ತ ತಾಯಿಯ ಪ್ರೇಮದಿಂದ ಸಾವಿರಾರು ವರ್ಷಗಳಿಂದ ಸಲುಹುತ್ತ ಬಂದಿರುವಳು. ಇದು ಹಿಂದೂ ಸಂಸ್ಕೃತಿಯ ಹೆಚ್ಚಳದ ಗುರುತು.

ಹಿಂದುಸ್ತಾನದಲ್ಲಿ ನಾನಾ ಧರ್ಮಗಳಿರುವಂತೆ, ಧರ್ಮಗಳಲ್ಲಿ ನಾನಾ ಪಂಥಗಳಿರುವವು. ಹಿಂದೂ ಧರ್ಮದಲ್ಲಿಯಂತೂ ಅನೇಕವಾಗಿರುವವು. ಅವುಗಳಲ್ಲಿ ಈಶ್ವರನನ್ನು ಸಾತ್ವಿಕ ಪ್ರೇಮದಿಂದ ಅತ್ಯಂತ ಭಕ್ತಿಯಿಂದ ಭಜಿಸಿ ಸದ್ಗತಿಯನ್ನು ಪಡೆಯಲು ಬೋಧಿಸುವ ಭಕ್ತಿಪಂಥವೊಂದು. ಇದು ಶೈವರಲ್ಲಿಯೂ ವೈಷ್ಣವರಲ್ಲಿಯೂ ಅತಿ ಪ್ರಾಚೀನ ಕಾಲದಿಂದ ಬಳಿಕೆ

ಯಲ್ಲಿರುವದು. ವೈಷ್ಣವರು ಇದಕ್ಕೆ ಭಾಗವತ ಧರ್ಮವೆಂದು ಅನ್ನುವ ವಾಡಿಕೆಯುಂಟು. ಕೆಲವು ಕ್ರೈಸ್ತ ಧರ್ಮೋಪದೇಶಕರು ಭಕ್ತಿಪಂಥವನ್ನು ಕ್ರೈಸ್ತ ಮತಾನುಯಾಯಿಗಳೇ ಹಿಂದೂ ಜನರಿಗೆ ಕಲಿಸಿದರೆಂದು ಹೇಳುವ ಮಾತು ನಿರಾಧಾರವಾದುದು. ಕ್ರಿಸ್ತ ಧರ್ಮವು ಹುಟ್ಟುವದಕ್ಕೂ ಮೊದಲು ಬರೆದ ಹಿಂದೂ ಧರ್ಮದ ಪವಿತ್ರ ಗ್ರಂಥಗಳಲ್ಲಿ ಭಕ್ತಿಪಂಥವು ಪ್ರಚಾರದಲ್ಲಿದ್ದ ಬಗ್ಗೆ ಆಧಾರಗಳು ದೊರೆಯುವವು. ಈ ಪಂಥದ ಪರಿಪೂರ್ಣಾವಸ್ಥೆಯನ್ನು ಶಿವಭಕ್ತರಾದ "ನಾಯ್ನಾರ"ರ ಮತ್ತು ವಿಷ್ಣುಭಕ್ತರಾದ "ಆಳ್ವಾರ"ರ ತಮಿಳು ಕೃತಿಗಳಲ್ಲಿ ಕಾಣಬಹುದು. ಇವರ ಕಾಲವು ಕ್ರಿಸ್ತಶಕದ ಎಂಟು ನೂರಕ್ಕೂ ಹಿಂದಿನದು. ಬಸವಾದಿ ಪ್ರಮುಖರು ಕರ್ಣಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಈ ಪಂಥಕ್ಕೆ ಪುಷ್ಟಿಯನ್ನು ಕೊಟ್ಟರು. ಅತಿ ಪ್ರಾಚೀನ ಕಾಲದಿಂದ ಇಲ್ಲಿಯ ವರೆಗೆ ಭಕ್ತಿಮಾರ್ಗದ ಪ್ರವಾಹವು ಭರತಖಂಡದ ಎಲ್ಲ ಭಾಗಗಳಲ್ಲಿ ಅವ್ಯಾಹತವಾಗಿ ಹರಿಯುತ್ತಿರುವುದು ಅರಿಯದಾದ ಮಾತಲ್ಲ. ಮಹಾರಾಷ್ಟ್ರದ ತುಕಾರಾಮನಂಥ ಸಂತರ ಹೆಸರನ್ನೂ ಉತ್ತರ ಹಿಂದುಸ್ತಾನದ ತುಲಸೀದಾಸ ಕಬೀರದಾಸರಂಥವರ ಹೆಸರುಗಳನ್ನೂ ಉದಾಹರಿಸಬಹುದು.

ಕನಕದಾಸರು ಉಚ್ಚತರಗತಿಯ ಭಕ್ತರು, ಭಾಗವತರು, ಮೇಲಾಗಿ ಕವಿಗಳು. ಹಲಕೆಲವು ಕವಿಗಳಂತೆ ತಮ್ಮ ಕವಿತ್ವಶಕ್ತಿಯನ್ನಾಗಲಿ ಪಾಂಡಿತ್ಯವನ್ನಾಗಲಿ ತೋರಿಸಲು ಕೃತಿಗಳನ್ನು ಬರೆದವರಲ್ಲ. ಪರಮಾತ್ಮನಲ್ಲಿರುವ ಅವರ ನಿಷ್ಠೆಯೇ ಉಕ್ಕೇರಿ ಶರೀರವನ್ನು ತನ್ಮಯವಾಗಿ ಮಾಡಿ ಈ ಕೃತಿಗಳ ರೂಪದಿಂದ ಹೊರಬಿದ್ದಿರುವುದು. ಆದುದರಿಂದಲೇ ಇವರ ಕವಿತ್ವವು ನೈಸರ್ಗಿಕವಾದುದು. ಅಂತೇ ಅದಕ್ಕೆ ಉಚ್ಚಸ್ಥಾನ. ಇವರ ಭಕ್ತಿಜ್ಞಾನ ವೈರಾಗ್ಯಪರವಾದ ಪದಗಳು ಕನ್ನಡ ನುಡಿಗೆ ಭೂಷಣಪ್ರದವಾಗಿರುವವು. ಕನಕದಾಸರು ಸುಮಾರು ಕ್ರಿ. ಶ. ೧೫೫೦ ರಲ್ಲಿ ಇದ್ದಿರಬಹುದೆಂದು ಕವಿಚರಿತೆಕಾರರು ಅಭಿಪ್ರಾಯಪಡುವರು. ವಿಜಯನಗರ ಸಾಮ್ರಾಜ್ಯದ ವೈಭವವು ಪರಮಾವಧಿಗೆ ಮುಟ್ಟಿದುದು ಕೃಷ್ಣದೇವರಾಯನ ಕಾಲದಲ್ಲಿ. ಆ ಕಾಲಕ್ಕೆ ಭಾಗವತಧರ್ಮದ ಪ್ರಭಾವವನ್ನು ಬೆಳಿಸಿದವರು ವ್ಯಾಸರಾಯ ಮುನಿಗಳು. ಇವರು ದಾಸಕೂಟದ ಅಗ್ರಣಿಗಳು. ಸೋದೆಯ ಮಠದ

ವಾದಿರಾಜರು ವ್ಯಾಸರಾಯ ಮುನಿಗಳ ಶಿಷ್ಯರು. ಕನಕದಾಸರಿಗೆ ಇವರೇ ಗುರುಗಳು. ಕನಕದಾಸರು ಧಾರವಾಡ ಜಿಲ್ಲೆಗೆ ಸೇರಿದ ಬಂಕಾಪೂರದ ಬಳಿಯಲ್ಲಿರುವ ಬಾಡವೆಂಬ ಗ್ರಾಮದವರೆಂದು ಪ್ರತೀತಿಯಿದೆ. ಇಂಥ ಭಗವದ್ಭಕ್ತರ ಮತ್ತು ಕವಿಗಳ ಬಗ್ಗೆ ಸಾಧ್ಯವಿದ್ದಷ್ಟು ಸಂಗತಿಗಳನ್ನು ಸಂಗ್ರಹಿಸಿ ಕನ್ನಡಿಗರ ಮುಂದೆ ಇಟ್ಟ, ನನ್ನ ಮಿತ್ರರಾದ ಶ್ರೀಮಾನ್ ಕಟ್ಟಿ ಶೇಷಾಚಾರ್ಯರನ್ನು ನಾನು ಮನಃಪೂರ್ವಕವಾಗಿ ಅಭಿನಂದಿಸುವೆನು. ಮಹಾಪುರುಷರ ಚರಿತ್ರೆಗೆ ಸಂಬಂಧಿಸಿದ ವಿಷಯಗಳನ್ನು ಸಂಗ್ರಹಿಸುವುದೂ, ದೊರೆತಷ್ಟನ್ನು ಹೃದಯಂಗಮವಾಗಿ ಜನರ ಮುಂದಿಡುವುದೂ, ಹಗುರಾದ ಕೆಲಸವಲ್ಲ. ಪರಿಶ್ರಮವನ್ನು ಮಾಡಿದವರಿಗೇನೇ ಇದರ ಮಹತ್ವವು ಗೊತ್ತಾಗುವುದು. ಶ್ರೀಮಾನ್ ಕಟ್ಟಿಯವರು ಕನಕದಾಸರು, ಅವರ ಕಾಲ, ಅವರ ಗ್ರಂಥಗಳು, ಅವರ ಸಂಪ್ರದಾಯ, ಅವರ ಕವಿತ್ವಶಕ್ತಿ ಅವರ ಕಾಲದ ಪರಿಸ್ಥಿತಿ ಇತ್ಯಾದಿ ಮಹತ್ವದ ವಿಷಯಗಳನ್ನೆಲ್ಲ ಕೂಲಂಕಷವಾಗಿ ಇದರಲ್ಲಿ ಚರ್ಚಿಸಿ, "ಕವಿಕನಕದಾಸರೆಂ"ಬೀ ಅಂದವಾದ ಪುಷ್ಪವನ್ನು ಕನ್ನಡ ಮಾತೆಯ ಅಡಿಗೆ ಅರ್ಪಿಸಿರುವರು. ಕನ್ನಡಿಗರು ಇವರಿಗೆ ಹೆಚ್ಚು ಹೆಚ್ಚು ಪ್ರೋತ್ಸಾಹನ ಕೊಟ್ಟು ಇವರಿಂದ ಹೆಚ್ಚು ಹೆಚ್ಚು ಭಾಷಾಸೇವೆಯಾಗುವಂತೆ ಏರ್ಪಡಿಸಲೆಂಬುದೇ ನನ್ನ ಇಚ್ಛೆ.

ಶಿ. ಚ. ನಂದಿಮಠ
ಎಮ್. ಎ. ಪಿ. ಎಚ್. ಡಿ. ( ಲಂಡನ )
ಪ್ರಿನ್ಸಿಪಾಲ, ಲಿಂಗರಾಜ ಕಾಲೇಜ. ಬೆಳಗಾವಿ.

# ಸಾಧನ ಸಾಹಿತ್ಯ.

## ಇಂಗ್ಲಿಷ.

Forgotten Empire — Sewell
Aruvidu Dynasty — Heras
History of Kanarese Literature — E. P. Rice.
Historical Introduction to Vyasayogi-Charitam — B. Venkoba Rao
A Short History of Sri Vyasaraya Swami Math — V. Gopal Krishna Rao
Ramanuja, His Life And Times — S. Krishna Swami Aiyangar.

## ಪಡಿಯಚ್ಚುಗಳು.

* ಕಾಗಿನೆಲೆಯ ಆದಿಕೇಶವ.
* ,, ನರಸಿಂಹ.
* ,, ನರಸಿಂಹಾದಿಕೇಶವರ ಗುಡಿಗಳು.
* ಸೋದೆಯ ತ್ರಿವಿಕ್ರಮ.
* ,, ತ್ರಿವಿಕ್ರಮನ ಗುಡಿ.
* ,, ವಾದಿರಾಜರ ವೃಂದಾವನ.
* ,, ವೃಂದಾವನದೊಳಗಿನ ವಾದಿರಾಜರ ಮೂರ್ತಿ.
* ಉಡುಪಿಯ ಕನಕನ ಕಿಂಡಿ.
ವಿಜಯನಗರದ ನವವೃಂದಾವನಗಳು.
,, ವ್ಯಾಸರಾಯರ ಮಠ
ಕೃಷ್ಣದೇವರಾಯ ತಿರುಮಲಾದೇವಿ ಚಿನ್ನಾದೇವಿಯರು. ತಿರುಪತಿ.
ವೆಂಕಟಪತಿದೇವರಾಯ ,,

---

* ಈ ಪಡಿಯಚ್ಚುಗಳ ಹಕ್ಕು ಕಾಯ್ದಿಡಲಾಗಿದೆ.

# ಪರಿವಿಡಿ.




ಪುಟ.

ಅರಿಕೆ ೫

ಮುನ್ನುಡಿ ೭

ಪರಿವಿಡಿ ೧೧-೧೨

ಕನಕದಾಸರ ಕಾಲದ ಸಿಂಹಾವಲೋಕನ.

೧ ಕನಕದಾಸರ ಕಾಲ ನಿರ್ಣಯ. ೧

೨ ಕನಕದಾಸರ ಕಾಲದೊಳಗಿನ ಭಾಗವತಧರ್ಮವಿಸ್ತಾರ ೯

೩ ದಾಸರಕಾಲದ ಕರ್ನಾಟಕ ೧೫

೪ ರಾಮಾನುಜಮತ ಮತ್ತು ಶ್ರೀವೈಷ್ಣವ ದೈವತಗಳು ೨೬

೫ ಕಾಗಿನೆಲೆ ೩೧

೬ ವ್ಯಾಸರಾಯರೂ ವಿಜಯನಗರದ ಅರಸರೂ ೩೬

೭ ವ್ಯಾಸರಾಯರೂ ದಾಸಕೂಟವೂ ೪೪

ಕನಕದಾಸರ ಕಾವ್ಯಗಳು.

೧. ೧ ಮೋಹನತರಂಗಿಣಿ ೫೩

೨ ತರಂಗಿಣಿಯು ಮಹಾಕಾವ್ಯ ೫೮

೩ ಸ್ಕಂದಪುರಾಣದೊಳಗಿನ ಕತೆ ೬೪

೪ ಮಹಾಭಾರತದೊಳಗಿರುವ ಕತೆ ೬೬

೫ ಭಾಗವತದೊಳಗಿರುವ ಕತೆ ೬೭

೬ ವಿಷ್ಣುಪುರಾಣದೊಳಗಿನ ಕತೆ ೭೦

೭ ಹರಿವಂಶದೊಳಗಿನ ಕತೆ ೭೩

೮ ಮೋಹನತರಂಗಿಣಿಯೊಳಗಿರುವ ಕತೆ ೭೭

೯ ತರಂಗಿಣಿಯನ್ನು ಕೇಳಿದ ವ್ಯಕ್ತಿ ೮೧

೧೦ ಮೋಹನತರಂಗಿಣಿಯನ್ನು ರಚಿಸಿದ ಸ್ಥಳ ೮೪

೧೧ ರುಕ್ಮಿಣೀಶವಿಜಯ ಮತ್ತು ಮೋಹನತರಂಗಿಣಿ ೮೭

೧೨ ತರಂಗಿಣಿ ಹಾಗೂ ಭರತೇಶವೈಭವ ೮೯

೨. ೧೩ ರಾಮಧಾನ್ಯ ಚರಿತ್ರೆ ೯೧
೩. ೧೪ ನಳಚರಿತ್ರೆ ೯೪
೧೫ ನಳಚರಿತ್ರೆ ನಲೋಪಾಖ್ಯಾನಗಳು ೯೬
೧೬ ನಳಚರಿತ್ರೆ ನೈಷಧಚರಿತೆಗಳು ೧೦೩
೧೭ ದಮಯಂತಿಯ ಸ್ವಯಂವರದ ವರ್ಣನೆ ೧೧೪
೪. ೧೮ ಭಕ್ತಿಸಾರ ೧೧೭

**ಕನಕದಾಸರ ವಿವಿಧ ವೈಶಿಷ್ಟ್ಯಗಳು.**

೧ ಕನಕದಾಸರ ಸಂಪ್ರದಾಯ ೧೨೭
೨ ಕನಕದಾಸರ ಸಮನ್ವಯವಾದ ೧೩೩
೩ ಕನಕದಾಸರ ರಸೋತ್ಪಾದನಶಕ್ತಿ ೧೩೮
೪ ಕನಕದಾಸರ ಶಬ್ದಚಿತ್ರಗಳು ೧೫೦
೫ ಕನಕದಾಸರ ಕಾವ್ಯವ್ಯಾಸಂಗ ೧೫೬
೬ ಕನಕದಾಸರ ಕಾಲದ ಚಪ್ಪನ್ನದೇಶಗಳು ೧೭೩
೭ ಕನಕದಾಸರ ಕಾಲದ ಜನಜೀವನ ೧೭೯
೮ ಕೊನೆಯ ಮಾತು ೨೦೨

**ಕನಕದಾಸರ ಪದಗಳು.** ೨೧೧

ಪರಿಶಿಷ್ಟ ಅ, ಆ, ಇ, ಈ, ಉ, ಊ ೨೪೧
ಶಬ್ದಾರ್ಥ ೨೫೧
ಅನುಕ್ರಮಣಿಕೆ ೨೫೪—೨೫೮

---



ಕಾಗಿನೆಲೆಯ ಆದಿಕೇಶವರಾಯ.

( ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ. )

# ಕನಕದಾಸರ ಕಾಲದ ಸಿಂಹಾವಲೋಕನ.

ರಸಪೂರಿತ ಸುಪ್ರಬಂಧವಿಲಕ್ಷಣ । ವೆಸೆವಂತೆ ಪೇಳ್ದ ಪೆಸಿದನು ।
ಹಸನಾದುದೆಂದು ಯೋಗ್ಯರು ತಲೆದೂಗಲು । ಉಸಿರುವೆ ಹರಿಕೃಪೆಯಿಂದೆ ॥

ರಸಿಕರ ಕರ್ಣಯುಗ್ಮವ ಪೊಕ್ಕುಮುದದಿ ಹೃ । ದ್ಬಿಸಜವನಲರಿಸಿ ಮೈಗೆ ॥
ಎಸೆವ ಪುಳಕವೊಸಗೆಯನಿತ್ತು ಶಿರವ ತೂ । ಗಿಸುವುದೀವಚನದ ರಚನೆ ॥

ತಪ್ಪು ಸಾಸಿರವಿರಲು ವುಳಿದೊಂದು ಗುಣಬರೆ । ಯೊಪ್ಪಿಕೊಂಬುದು ಬಲ್ಲವರು ॥
ಕಪ್ಪುಕಿಂಚಿತ್ತಿರೆ ಕಳೆದಿಸಿದಮೃತವ । ಚಪ್ಪರಿದೀಂಟದಿರ್ಪರೆ ॥

ನುಡಿತಪ್ಪಿದೊಡೆ ತಿರ್ದುವುದೆನ್ನಯ ಸಂ । ಗಡಿಗರು ಸಲೆ ಬಲ್ಲವರು ॥

ಕನಕದಾಸ.

# ೧ ಕನಕದಾಸರ ಕಾಲ ನಿರ್ಣಯ.

ಕನಕದಾಸರ ಹೆಸರಿನ ಪರಿಚಯವಿಲ್ಲದ ಕನ್ನಡಿಗನೇ ವಿರಳ. ಆದರೂ ಅವರ ಕಾಲವನ್ನು ಗೊತ್ತುಪಡಿಸುವುದು ಹಗುರಾದ ಕೆಲಸವಲ್ಲ. ದಾಸರ ವಿಷಯವಾಗಿ ತಾಮ್ರಪಟಗಳಲ್ಲಿ, ಶಿಲಾಶಾಸನಗಳಲ್ಲಿ, ಏನೂ ದೊರೆಯುವುದಿಲ್ಲ. ಆ ಕಾಲದ ಗ್ರಂಥಗಳಲ್ಲಿ, ಅವರ ಹೆಸರಿನ ಸದ್ದು ಕೇಳಬರುವುದಿಲ್ಲ. ದಾಸರಾದರೊ, ತಮ್ಮ ಕಾವ್ಯಗಳೊಳಗೆ ತಮ್ಮ ಕಾಲದ ಸಂಬಂಧದಲ್ಲಿ ಪ್ರತ್ಯಕ್ಷವಾಗಿ ಏನೂ ಬರೆದಿರುವುದಿಲ್ಲ. ಆದರೂ, ಮೋಹನತರಂಗಿಣಿಯೆಂಬ ಕಾವ್ಯದಲ್ಲಿ, ದಾಸರು ತಮ್ಮ ಇಬ್ಬರು ಗುರುಗಳ ನಾಮನಿರ್ದೇಶ ಮಾಡಿದುದುಂಟು. ಅವರೆಂದರೆ, ರಾಮಾನುಜಮತಾನುವರ್ತಿಗಳಾದ 'ತಾತಾಚಾರ್ಯರು', ಹಾಗೂ 'ತ್ರಿವಿಕ್ರಮದಾಸರು'. ಈ ನಾಮನಿರ್ದೇಶದಿಂದಲೆ, ಅವರೀರ್ವರ ರೂಪವು ಗೊತ್ತಾಗುವುದಿಲ್ಲ. ರಾಮಾನುಜಮತೀಯರಾದ ತಾತಾಚಾರ್ಯರೆಂಬ ಗುರುಗಳು, ದಾಸರ ಕಾಲದಿಂದ ಈ ಹೊತ್ತಿಗೆ ಅನೇಕರಾಗಿ ಹೋಗಿರುವರು. ದಾಸರ ಪೀಳಿಗೆಯಲ್ಲಿ 'ತ್ರಿವಿಕ್ರಮದಾಸ' ಎಂಬ ಹೆಸರು ಅಡಕವಾದುದು ಕಂಡುಬರುವುದಿಲ್ಲ. ಮಂಜು ಮುಸುಕಿದ ಈ ಹೆಸರುಗಳ ಮೇಲೆ, ನಿಶ್ಚಿತವಾದ ದಾಸರ ಕಾಲದ ಬೆಳಕು ಬೀಳುವವರೆಗೆ, ಅವುಗಳ ನಿಚ್ಚಳ ರೂಪವು ಗೊತ್ತಾಗಲಾರದು

೧. ಕನಕದಾಸರ ಮೋಹನತರಂಗಿಣಿ, ನಳಚರಿತ್ರೆಗಳೆಂಬ ಕಾವ್ಯಗಳಲ್ಲಿ, ಆ ಕಾಲದ ಜನಜೀವನದ ಚಿತ್ರವು, ತುಂಬಿಕೊಂಡಿರುವುದು. ಮೋಹನತರಂಗಿಣಿಯೊಳಗೆ, ದಂಡಯಾತ್ರೆಯ ಒಂದು ಸಂದರ್ಭದಲ್ಲಿ, ದಾಸರು "ಪೆಟಲಂಬಿನವರ" ಪಥಕವನ್ನು ಹೇಳಿದುದುಂಟು. ಆದುದರಿಂದ, ಅವರ ಕಾಲದಲ್ಲಿ, ದಕ್ಷಿಣ ದೇಶದವರ ಸೈನ್ಯಗಳೊಳಗೆ ತುಬಾಕಿಯ ಪಥಕಗಳು

ಏರ್ಪಟ್ಟಿದ್ದುವೆಂದು ಅನ್ನಬಹುದು. ಕೃಷ್ಣದೇವರಾಯ ಮತ್ತು ಆಲ್ಲಿಆದಿಲ ಶಹರ ನಡುವೆ ಎಸಗಿದ ರಾಯಚೂರ ಕಾಳಗದಲ್ಲಿ, ವಿಜಯನಗರದ ಸೈನ್ಯದೊಳಗೆ, ಪೆಟಲಂಬಿನ ಪಥಕವು ಮೊದಲು ಪ್ರವೇಶ ಪಡೆದಿತೆಂದು ನ್ಯೂನಿ ರಘುನು ಬರೆಯುತ್ತಾನೆ. ರಾಯಚೂರ ಯುದ್ಧವು ೧೫೨೦ ರಲ್ಲಿ ಆಯಿತು. ನ್ಯೂನಿರಘುನು ತನ್ನ ವೃತ್ತಾಂತದಲ್ಲಿ ರಾಯಚೂರ ಕಾಳಗವನ್ನು ಸಾದ್ಯಂತವಾಗಿ ವಿವರಿಸಿರುವನು. ತುಬಾಕಿಯ ಉಪಯೋಗದ ವಿಷಯದಲ್ಲಿ ಅವನು ಅನ್ನುವುದು,

"CHRISTOVAO DE FIGUEIREDO went close to the trench before the walls, keeping himself as much concealed as possible, and seeing how fearlessly the Moors exposed themselves on the wall, began, with the musqueteers whom he had brought, to open fire on them in such a way that he slew many, the Moors being careless and free from fear who up to then had never seen men killed with firearms nor with such other weapons. So they began to forsake the wall ( at this point ), and the king's troops found an opportunity of coming in safety to it, and they began to destroy much of the masonry; and so many people collected on this side that all the camp was put in commotion, saying that CHRISTOVAO DE FIGUEIREDO had entered the city with his Portuguese."

ಕೃಷ್ಣದೇವರಾಯನ ಆಜ್ಞೆಯ ಮೇರೆಗೆ, "ಕ್ರಿಸ್ಟೋವೊ-ಡಿ-ಫಿಗ್ಯುರೆಡೋನು, ಆಳ್ವೇರಿಯ ಮುಂದಿರುವ ಅಗಳದ ಸಮೀಪದಲ್ಲಿ ಹೋಗಿ ಅಡಗಿಕೊಂಡನು. ಕೋಟೆಯ ಗೋಡೆಯ ಮೇಲೆ, ಹೆದರಿಕೆಯಿಲ್ಲದ ಮುಸಲ್ಮಾ

ನರು ಅಲೆದಾಡುತ್ತಿರುವುದನ್ನು ಕಂಡು, ಅವನು, ತನ್ನ ಸಂಗಡ ಬಂದ ತುಬಾಕಿಯವರ ಕೂಡ, ಗುಂಡು ಎಸೆಯಲಾರಂಭಿಸಿದನು. ತುರುಕರು ಭಯವಿಲ್ಲದೆ, ನಿರಾತಂಕರಾಗಿ ನೆಲಿಸಿದ್ದುದರಿಂದ ಅನೇಕರು ಗುಂಡಿನ ಹೊಡೆತಕ್ಕೆ ಬಲಿ ಬಿದ್ದರು. ಅಂದಿನ ವರೆಗೆ, ತುಬಾಕಿಯಿಂದ ಸಾಯುವುದು, ಮುಸಲ್ಮಾನರಿಗೆ ಗೊತ್ತಿರಲಿಲ್ಲ. ತುಬಾಕಿಯಂತಹ ಮತ್ತಾವ ಮದ್ದಿನ ಆಯುಧವೂ ಅವರಿಗೆ ಪರಿಚಿತವಿರಲಿಲ್ಲ. ಆದುದರಿಂದ, ಅವರು ಗೋಡೆಯನ್ನು ತೊರೆದು ಓಡಲಾರಂಭಿಸಿದರು. ರಾಯನ ದಂಡಿನವರಿಗೆ ಆಳ್ವೇರಿಯ ಸಮೀಪದಲ್ಲಿ ಬರಲು ಅನುವು ದೊರೆಯಿತು. ಅವರು ಗೋಡೆಯ ಬಹು ಭಾಗವನ್ನು ಕೆಡವಿದರು. ಸೈನಿಕರೆಲ್ಲರೂ ಅಲ್ಲಿಯೇ ಕಲೆತರು. ಅಷ್ಟರೊಳಗೆ, ಕ್ರಿಸ್ಟೋವೊ-ಡಿ-ಫಿಗ್ಯುರೆಡೋನು ಪೋರ್ತುಗೀಜ ಸೈನಿಕರ ಸಂಗಡ, ಪಟ್ಟಣವನ್ನು ಒಳನುಗ್ಗಿದನೆಂದು ಸೈನ್ಯದೊಳಗೆ ಕೋಲಾಹಲವೆದ್ದಿತು. ”

ತುಬಾಕಿಯ ಉಪಯುಕ್ತತೆಯನ್ನು ಮನಗಂಡು ಕೃಷ್ಣದೇವರಾಯನೂ ಮುಸಲ್ಮಾನರೂ ತಮ್ಮ ಸೈನ್ಯದಲ್ಲಿ ಪೆಟಲಂಬಿನ ಪಥಕಗಳನ್ನು ಅಡಕ ಮಾಡಿರಬಹುದು. ಕನಕದಾಸರ ಕಾಲದಲ್ಲಿ ಅಂತಹ ಪಥಕಗಳು ರೂಢವಾಗಿದ್ದುವು. ಆದುದರಿಂದ, ಮೋಹನತರಂಗಿಣಿ ಕಾವ್ಯದ ಕಾಲವು ರಾಯಚೂರ ಯುದ್ಧದ ನಂತರ ಇರಬೇಕೆಂದು ಅನ್ನಲಿಕ್ಕೆ ಅಡ್ಡಿಯಿಲ್ಲ.

೨. ಮೋಹನತರಂಗಿಣಿಯಲ್ಲಿ ಕೃಷ್ಣಚರಿತ್ರೆಯು ವರ್ಣಿತವಾಗಿದೆ. ಅದರೊಳಗಣ ಕಥಾವಸ್ತುವನ್ನು ಕನಕದಾಸರು, ಹರಿವಂಶ ವಿಷ್ಣುಪುರಾಣ ಭಾರತ ಭಾಗವತಾದಿ ಗ್ರಂಥಗಳಿಂದ ಒದಗಿಸಿಕೊಂಡಿರುವರು. ತರಂಗಿಣಿಯಲ್ಲಿ ರತಿಪ್ರದ್ಯುಮ್ನರ ಗೃಹಪ್ರವೇಶವು, “ಮಾಘ ಶುದ್ಧ ಪಂಚಮಿ ಬೃಹಸ್ಪತಿ ವಾರದಲ್ಲಿ” ಆಯಿತೆಂದು ದಾಸರು ಹೇಳಿರುವರು.

ಕೇಶವ ಮುದವೆತ್ತು ಬೆಸಗೊಳೆ ನಿಖಿಲಜೋ । ತೀಷರೊಳಧಿಕ ಶಾಸ್ತ್ರಿಗಳು ॥
ಭಾಸುರವೆತ್ತ ಪ್ರದ್ಯುಮ್ನ ಸದ್ಗೃಹದ ಪ್ರ । ವೇಶಕೆ ದಿನನೋಡಿರೆಂದ ॥
ತಿಥಿ ವಾರ ನಕ್ಷತ್ರ ಯೋಗ ಕರಣ ಗ್ರಹ । ಗತಿ ನೆಲೆಗಳ ನೆರೆಗುಣಿಸಿ ॥
ಮಿತಿಮಾಡಿದರು ಮಾಘ ಸಿತ ಪಂಚಮಿ ಬೃಹ । ಸ್ಪತಿವಾರದೊಳಗೊಳ್ಳಿತೆಂದು॥

ಈ ರತಿಪ್ರದ್ಯುಮ್ನರಿಗೆ ಅನಿರುದ್ಧನೆಂಬ ಮಗನು ಹುಟ್ಟಿದನು. ಅನಿರುದ್ಧನ ಹುಟ್ಟಿದ ದಿನವನ್ನು ದಾಸರು ವರ್ಣಿಸಿರುವರು.

ಆನಂದ ಸಂವತ್ಸರ ಮಾಘ ಶುದ್ಧ ನ | ವೀನ ಪಂಚಮಿಯಾದಿವಾರ ||
ಭಾನುವುದಯದ ಸ್ವಾತಿಯ ನಕ್ಷತ್ರದೆ | ತಾನುದಿಸಿದ ಗಂಡುಮಗನು ||

ಭಾಗವತ ಹರಿವಂಶ ವಿಷ್ಣುಪುರಾಣ ಮುಂತಾದ ಗ್ರಂಥಗಳಲ್ಲಿ ಈ ವಿಷಯದೊಳಗೆ ತಿಥಿವಾರಗಳ ಸಂದರ್ಭವೇ ಇರುವುದಿಲ್ಲ. ಪುರಾತನ ಗ್ರಂಥಗಳೊಳಗೆ ಜನ್ಮ ಮುಂತಾದ ವಿಷಯಗಳಲ್ಲಿ ತಿಥಿನಕ್ಷತ್ರಗಳನ್ನು ಬರೆಯುವ ರೂಢಿಯಿದೆ. ಆದರೆ ವಾರವನ್ನು ಕೊಡುವ ಪದ್ಧತಿಯು ತೀರ ವಿರಳ.

ರತಿಪ್ರದ್ಯುಮ್ನರನ್ನು ಮನೆದುಂಬಿಸಿಕೊಂಡುದು ಹಾಗೂ ಅನಿರುದ್ಧನು ಹುಟ್ಟಿದುದು ಮಾಘ ಶುದ್ಧ ಪಂಚಮಿಯ ದಿವಸ. ಈ ಪಂಚಮಿಗೆ 'ರತಿ ಪಂಚಮಿ' ಎಂದು ಕರೆಯಲಾಗುತ್ತದೆ. ಆ ದಿವಸ ರತಿಕಾಮರ ಪೂಜೆಗೈಯುವುದು ಉಕ್ತವಾಗಿದೆ. ಪ್ರದ್ಯುಮ್ನನು ಕಾಮನ ಅವತಾರ. ಪ್ರತಿವರ್ಷ ಪರಿವರ್ತಿಸುವ ಈ ತಿಥಿಗೆ ದಾಸರು ವಾರದ ಜೊತೆಯನ್ನು ತಳಕುಹಾಕಿರುವುದೇಕೆ? ಅನಿರುದ್ಧನ ಜನನದ ಸಂದರ್ಭದಲ್ಲಂತೂ ದಾಸರು, ಸಂವತ್ಸರ, ಮಾಸ, ಪಕ್ಷ, ತಿಥಿ, ವಾರ, ನಕ್ಷತ್ರಗಳನ್ನು ಬರೆದು, ರತಿಪಂಚಮಿಯ ಸುತ್ತಲು ಬಿಗಿಯಾಗಿ ಚೌಕಟ್ಟಿನ ಕಳಾಸ ಹಾಕಿರುವರು. ಅದರಲ್ಲೇನಾದರೂ ಅರ್ಥವಿರಬಹುದೋ? ಮೇಲಿನ ಎಲ್ಲ ಸಾಮುಗ್ರಿಗಳನ್ನು ಕಲೆಹಾಕಿ ಅವುಗಳ ಲೆಕ್ಕ ತೆಗೆದರೆ, ಆ ರತಿಪಂಚಮಿಯು ಶಾಲಿವಾಹನ ಶಕದ ೧೪೭೬ ನೆಯ ವರ್ಷದಲ್ಲಿ ಬಂದ ರತಿಪಂಚಮಿಯು ಸಂವತ್ಸರ, ಮಾಸ, ಪಕ್ಷ, ವಾರ, ನಕ್ಷತ್ರಗಳಿಗೆ ಕೂಡುವುದು. ಸಮಯೋಚಿತವಾಗಿ ತೋಚಿದುದರಿಂದ, ದಾಸರು ತಮ್ಮಕಾವ್ಯದ ಕಾಲವನ್ನು ಸೂಚಿಸಲು, ಅದನ್ನು ಬರೆದರೆಂದು ಧಾರಾಳವಾಗಿ ಹೇಳಬಹುದು. ಅದರ ಹಿಂದಿನ ರತಿಪಂಚಮಿಯು ಬ್ರಹಸ್ಪತಿ ವಾರದಲ್ಲಿ ಬೀಳುತ್ತದೆ. ಚಾಣಾಕ್ಷರಾದ ಕನಕದಾಸರು ರತಿಪ್ರದ್ಯುಮ್ನರ ಗೃಹಪ್ರವೇಶವನ್ನು ರತಿಪಂಚಮಿಯ ದಿವಸ ಹೇಳಿ, ಮರುವರುಷದಲ್ಲಿಯೆ ಅದೇ ತಿಥಿಯಲ್ಲಿ ಅವರೀರ್ವರಿಗೆ ಅನಿರುದ್ಧನು ಹುಟ್ಟಿದನೆಂದು, ಒಳ್ಳೆ ಹದಗಾರಿಕೆಯಿಂದ ಬರೆದಿರುವರು! ಶಾಲಿವಾಹನ ಶಕ ೧೪೭೬ನೆಯ ವರ್ಷವೆಂದರೆ ೧೫೫೩-೫೪ನೆಯ ಇಸ್ವಿಯು.

ಶ್ರೀವ್ಯಾಸರಾಯರು ವ್ಯಾಸಸಮುದ್ರವನ್ನು ಕಟ್ಟಿಸುತ್ತಿರುವಾಗ್ಗೆ, ಕನಕದಾಸರು ಅವರ ಪ್ರಥಮ ಸಂದರ್ಶನವನ್ನು ಹೊಂದಿ, ಮಂತ್ರೋಪದೇಶವನ್ನು

ಪಡೆದರೆಂದು ಹೇಳುತ್ತಾರೆ. ರಾಯರಿಗೆ ವ್ಯಾಸಸಮುದ್ರದ ಉಂಬಳಿಯು ದೊರೆತುದು ೧೫೩೫-೩೬ ಇಸ್ವಿಯಲ್ಲಿ. ಕೂಡಲೆ ಅವರು ವ್ಯಾಸಸಮುದ್ರವನ್ನು ಕಟ್ಟಲಾರಂಭಿಸಿದರು. ಮತ್ತೊಂದು ಕತೆಯಿಂದ ತಿಳಿಯುವುದೇನಂದರೆ, ಕನಕದಾಸರು ತೀರ ಮುಪ್ಪಿನವರಾಗಿ ತಮ್ಮ ವಯಸ್ಸಿನ ೯೮ನೆಯ ವರ್ಷದಲ್ಲಿ ತೀರಿಕೊಂಡರು. ಮೇಲಣ ಎರಡೂ ವಿಷಯಗಳು ನಿಜವೆಂದು ತಿಳಿದು, ರಾಯರ ಪ್ರಥಮಸಂದರ್ಶನದ ಸಮಯದಲ್ಲಿ ದಾಸರಿಗೆ ೧೭-೧೮ ವರ್ಷಗಳಾಗಿದ್ದುವೆಂದು ಇಟ್ಟುಕೊಂಡರೆ, ಕನಕದಾಸರ ಕಾಲವು ಸುಮಾರಾಗಿ ೧೫೦೮ ರಿಂದ ೧೬೦೬ ನೆಯ ಇಸ್ವಿಯ ವರೆಗೆಂದು ಹೇಳಬಹುದು.

ತಾತಾಚಾರ್ಯರು ಹಾಗೂ ತ್ರಿವಿಕ್ರಮದಾಸರು ಎಂಬ ಎರಡು ಹೆಸರುಗಳನ್ನು ಕನಕದಾಸರು ನಿರ್ದೇಶಿಸಿರುವರಷ್ಟೆ. ಮೋಹನತರಂಗಿಣಿಯನ್ನು ಬರೆದ ಕಾಲವು ಗೊತ್ತಾದ ಮೇಲೆ, ಆ ಕಾಲದ ಇತಿಹಾಸವನ್ನೋದಿದರೆ, ಆ ಎರಡೂ ಹೆಸರುಗಳ ವ್ಯಕ್ತಿಗಳು ಆರೆಂಬುವುದು ಗೊತ್ತಾಗುವಂತಿದೆ.

೩. ರಾಮಾನುಜ ಗುರುಗಳಾದ ತಾತಾಚಾರ್ಯರೆಂದರೆ, ತಿರುಮಲೈ ತಾತಾಚಾರ್ಯರು. ಇವರು ವಿಜಯನಗರದಲ್ಲಿ ಕೃಷ್ಣದೇವರಾಯನ ಆಸ್ಥಾನ ಪಂಡಿತರು. ಇವರಿಗೆ ಕೃಷ್ಣದೇವರಾಯನ ಜಾಮಾತನಾದ 'ಅಳಿಯ' ರಾಮರಾಯನು ಎಷ್ಟೋ ಸಾರೆ ಸನ್ಮಾನಿಸಿದುದುಂಟು. ತಾತಾಚಾರ್ಯರು ರಾಮರಾಯನ ಗುರುಗಳು! ಆರುವೀಡು ಮನೆತನದ ವಿಜಯನಗರದ ನರಪತಿಗಳ ಮೇಲೆ ಇವರ ವರ್ಚಸ್ಸು ವಿಶೇಷವಾಗಿದ್ದಿತು. ತಿರುಮಲೈ ತಾತಾಚಾರ್ಯರ ಮಕ್ಕಳಾದ ಕುಮಾರ ತಾತಾಚಾರ್ಯರು ವೆಂಕಟಪತಿದೇವರಾಯನ ರಾಜಗುರುಗಳಾಗಿದ್ದರು.

೪. ತ್ರಿವಿಕ್ರಮದಾಸರೆಂದರೆ ಸೋದೆಯ ಮಠದ ಶ್ರೀವಾದಿರಾಜರು. ರಾಜರು ಮೊದಲಿನಿಂದ ತ್ರಿವಿಕ್ರಮನ ಆರಾಧನೆಯಲ್ಲಿ ನಿರತರಾಗಿದ್ದರು. "ವಾದಿರಾಜರು ಋಜುಪದಸ್ಥದೇವತೆಗಳು. ಅವರು ತೊಂಬತ್ತೆಂಟನೆಯ ಬ್ರಹ್ಮಕಲ್ಪಸಾಧನೆಯಲ್ಲಿರುವರು. ಈಗಿರುವ ವಾಯುವು ಬ್ರಹ್ಮಪದವಿಗೇರಿದ ಕೂಡಲೆ ರಾಜರು ವಾಯುಪದಕ್ಕೆ ಬರುವರು. ವಾಯುಪದಾರ್ಹ ಋಜುವಿನ ಹೆಸರು ಲಾತವ್ಯ. ತ್ರಿವಿಕ್ರಮೋಪಾಸನೆಯು ಋಜುಪದಸ್ಥರಿಗೆ ಉಕ್ತವಾಗಿರುವುದು," ಎಂದು ರಾಜರ ಮಠದ ಸಾಂಪ್ರದಾಯಿಗಳು ಅನ್ನುವದುಂಟು.

ರಾಜರೆ, ಸೋದೆಯಲ್ಲಿ ತ್ರಿವಿಕ್ರಮದೇವರನ್ನು ಪ್ರತಿಷ್ಠಿಸಿದರು. ತಮ್ಮ ತೀರ್ಥಪ್ರಬಂಧವೆಂಬ ಗ್ರಂಥದೊಳಗೆ ಈ ವಿಷಯದಲ್ಲಿ ಅವರನ್ನುವುದು,

**ತ್ರಿವಿಕ್ರಮಂ ರಮ್ಯಗದಾರಿಶಂಖಸರೋಜವಮಾಲಾಧರಮಿಂದುವರ್ಣಂ।**
**ಮನೋಹರಾಂಗಂ ಯತಿವಾದಿರಾಜಪ್ರತಿಷ್ಠಿತಂ ನೌಮಿ ಸದಾ ಪ್ರಸನ್ನಂ ॥**

ಕೆಲ ಕಾಲದ ಮೇಲೆ ವಿಜಯನಗರದ ನರಪತಿಯಾದ ವೆಂಕಟಪತಿದೇವರಾಯನ ಮಾಂಡಲಿಕನಾದ ಸೋದೆಯ ಅರಸಪ್ಪನಾಯಕನೇ ಮುಂತಾದ ಅನೇಕ ಜನರಿಂದ ದತ್ತಿಗಳನ್ನು ಗಳಿಸಿ, ತ್ರಿವಿಕ್ರಮದೇವರ ಪೂಜೆಅರ್ಚೆ ರಥೋತ್ಸವಗಳು ಲೋಪವಿಲ್ಲದೆ ಅವ್ಯಾಹತವಾಗಿ ನಡೆಯುವಂತೆ, ರಾಜರೆ ವ್ಯವಸ್ಥೆ ಪಡಿಸಿದರು. ಅವರಿಂದ ಪ್ರಾರಂಭವಾದ ತ್ರಿವಿಕ್ರಮನ ರಥೋತ್ಸವವು, ಈ ಹೊತ್ತಿಗೂ, ಫಾ. ಶು. ನವಮಿಯಿಂದ ಪೌರ್ಣಿಮೆಯ ವರೆಗೆ, ನಡೆಯುತ್ತ ಬಂದಿದೆ. ಕೊನೆಗೆ ರಾಜರು ಸೋದೆಯೊಳಗೆ ತ್ರಿವಿಕ್ರಮನ ಸನ್ನಿಧಿಯಲ್ಲಿಯೆ ಶಾ. ಶ. ೧೫೪೨ ನೆಯ ಶಾರ್ವರಿ ಸಂವತ್ಸರ ಫಾ. ಬ. ತ್ರಿತೀಯೆ ಬುಧವಾರದಲ್ಲಿ ವೃಂದಾವನವನ್ನು ಸೇರಿದರು.

ಸೋದೆಯ ಒಂದು ಶಿಲಾಲೇಖದಲ್ಲಿ ಇರುವುದೇನಂದರೆ, "ಶಾ. ಶ. ೧೫೧೫ ರಲ್ಲು ಶ್ರೀಮದ್ವಾದಿರಾಜತೀರ್ಥಂಗಳವರು, ತಮಗೆ ಪ್ರಸನ್ನರಾಗಿ ಕಾಶಿದೇಶದಿಂದ ಬಂದ ಶ್ರೀತ್ರಿವಿಕ್ರಮದೇವರಿಗೆ ದೇವಸ್ಥಾನವನ್ನು ಕಟ್ಟಿಸಿ, ಅಲ್ಲಿ ಸ್ವಾಮಿಯ ಪ್ರತಿಷ್ಠೆಯನ್ನು ಮಾಡಿದರು." ಅದೇ ಶಾಸನದ ಕೊನೆಯಲ್ಲಿ, "ಶಾ. ಶ. ೧೫೦೪ ಚಿತ್ರಭಾನು ಸಂವತ್ಸರದ ವೈಶಾಖ ಶುದ್ಧ ೧೫ ಯ ಬುಧವಾರದಲ್ಲು ಶ್ರೀತ್ರಿವಿಕ್ರಮ ದೇವರ ಪ್ರತಿಷ್ಠೆ ಮಾಡಿದ ಮುಹೂರ್ತ" ಎಂದಿದೆ. ಇದರಿಂದ, ರಾಜರು ತೀರ್ಥಪ್ರಬಂಧವನ್ನು ಶಾ. ಶ. ೧೫೦೪ ನೆಯ ವರ್ಷದ ತರುವಾಯ ಬರೆದರೆಂದು ತಿಳಿವಳಿಕೆಯಾಗುವ ಸಂಭವವಿದೆ. ಆದರೆ, ಅದೇ ತೀರ್ಥಪ್ರಬಂಧದಲ್ಲಿ, ವಿಜಯನಗರದ ಬಗ್ಗೆ ರಾಜರು ಅಂದುದು,

**ಮಾಲಾಭಿಸ್ಸಮಲಂಕೃತಾಸಿ ವಿಮಲಾ ಲೋಲೋಲ್ಲಸಲ್ಲೋಚನಾ ।**
**ಶೂಲೇನ ತ್ರಿದಲೇನ ದೈತ್ಯಕಲನೇ ಕಾಲಾಯಿತೇನ ದ್ವಿಷಃ ॥**
**ಫಾಲೇ ಪಾದತಲಂ ನಿಧಾಯ ಬಲಿನಂ ಯೋನ್ಮೂಲಯಂತೀ ಖಲಂ ।**
**ಬಾಲಾ ಮೇ ಬಲದಾಸ್ತು ಲೋಲವಲಯಾ ಶ್ರೀಬಾಲಹಂಪಾಲಯಾ॥**

"ದೈತ್ಯರನ್ನು ತ್ರಿಶೂಲದಿಂದ ನಾಶಗೊಳಿಸುವುದು," "ಹಣೆಯ ಮೇಲೆ ಹೆಜ್ಜೆಯನ್ನಿಕ್ಕಿ ಖಳರನ್ನು ಬೇರು ಸಹಿತ ಕಿತ್ತಿಹಾಕುವುದು," ಎಂಬ ಹಂಪೆಗೆ ಸಂಬಂಧಿಸಿರುವ ರಾಜರ ಭಾಷೆಯು ರಾಕ್ಷಸದಂಗಡಿಯ ನಂತರದ್ದಾಗಿರಲಾರದು. ಆರುವೀಡು ಮನೆತನದ ವೆಂಕಟಪತಿ ದೇವರಾಯನು ಮುಸಲ್ಮಾನರನ್ನು ಸದೆಬಡಿದು ವೈಭವದಿಂದ ಆಳಿದರೂ ಅವನ ನೆಲೆವೀಡು ಪೆನುಗೊಂಡೆ ಚಂದ್ರಗಿರಿಗಳಾಗಿದ್ದುವು. ಮುಂದಿನ ಶ್ಲೋಕವು ಈ ವಿಷಯವನ್ನು ಮತ್ತಿಷ್ಟು ವಿಶದಗೊಳಿಸುತ್ತಿದೆ.

**ರಾಜಧಾನೀ ಜಯತಿ ಸಾ ಗಜಗಹ್ವರಸಂಜ್ಞಿತಾ |**
**ಯತ್ರ ಭಾಂತಿ ಗಜಾ ಮಧ್ವರಾದ್ಧಾಂತಧರಣೀಧರಾಃ ||**

ಹಂಪೆ-ಹಸ್ತಿನಾವತಿಗೆ ಇಲ್ಲಿ ರಾಜಧಾನಿಯೆಂದು ಸಂಬೋಧಿಸಲಾಗಿದೆ. ವಿಜಯನಗರವು ೧೫೬೫ ನೆಯ ಇಸ್ವಿಯಲ್ಲಿ ಹಾಳಾಯಿತು. ಆದುದರಿಂದ, ತೀರ್ಥಪ್ರಬಂಧವು ರಾಕ್ಷಸದಂಗಡಿಯಕಿಂತಲು ಮುಂಚಿತ ರಚಿತವಾಯಿತೆಂದು ಹೇಳಬಹುದು. ಮೇಲಾಗಿ, ಆ ರಾಜಧಾನಿಯಲ್ಲಿ, ಮಧ್ವಸಿದ್ಧಾಂತವನ್ನೆತ್ತಿ ಹಿಡಿಯುವ ಮದ್ದಾನೆಗಳು ನೆಲಿಸಿರುವುವೆಂದು ಅಂದಿರುವದರಿಂದ ಶ್ರೀವ್ಯಾಸರಾಯರು, ಶ್ರೀನಿವಾಸತೀರ್ಥರು, ರಾಮತೀರ್ಥರು, ರಘುಪತಿತೀರ್ಥರು, ಗೋವಿಂದ ಒಡೆಯರು, ಸುಧೀಂದ್ರತೀರ್ಥರು, ಸುರೇಂದ್ರತೀರ್ಥರು, ವಿಜಯೀಂದ್ರತೀರ್ಥರು, ಪುರಂದರದಾಸರೆ ಮುಂತಾದ ಮಾಧ್ವಮಹನೀಯರನ್ನು ರಾಜರು ಸೂಚಿಸಿರುವರೆಂದು ತಿಳಿಯಬಹುದು. ಶ್ರೀವ್ಯಾಸರಾಯರು ೧೫೩೯ ರಲ್ಲಿ ದೇಹವನ್ನಿಟ್ಟರು. ಸೋದೆಯ ತ್ರಿವಿಕ್ರಮನು, ಶ್ರೀವಾದಿರಾಜರ ಜೀವಿತ ಕಾಲದಲ್ಲಿಯೆ ಮೂರು ಬಾರಿ ಪ್ರತಿಷ್ಠಾಪನೆಯನ್ನು ಪಡೆದನೆಂದು ಅನ್ನಬಹುದು. ರಾಜರು, ತ್ರಿವಿಕ್ರಮನನ್ನು, ಮೊದಲು, ತಮ್ಮ ಸೋದೆಯ ಮಠದಲ್ಲಿ, ಆ ಮೇಲೆ ಪ್ರತ್ಯೇಕವಾದ ಒಂದು ಗುಡಿಯಲ್ಲಿ ( ಕ್ರಿ. ಶ. ೧೫೪೨ ), ನಂತರ ವಿಜಯನಗರದ ಪುನರುಜ್ಜೀವನವಾದಾಗ ವೆಂಕಟಪತಿ ದೇವರಾಯನ ಮಾಂಡಲಿಕನಾದ ಸೋದೆಯ ಅರಸಪ್ಪ ನಾಯಕನ ಔದಾರ್ಯದ ಮೂಲಕ ಈಗಿರುವ ಭವ್ಯ ಶಿಲಾಮಯ ದೇವಾಲಯದಲ್ಲಿ ( ಕ್ರಿ. ಶ. ೧೫೯೩ ), ಪ್ರತಿಷ್ಠಿಸಿ, ತ್ರಿವಿಕ್ರಮನಾಮವನ್ನು ಸಾರ್ಥಕಗೊಳಿಸಿರಬಹುದು!

ವಾದಿರಾಜರು ತ್ರಿವಿಕ್ರಮನನ್ನು ತಮ್ಮ ಪದಗಳಲ್ಲಿ ಕೊಂಡಾಡಿದುದೂ ಉಂಟು. ಲಕ್ಷ್ಮೀಶೋಭನ ವೆಂಬುದೊಂದು ರಾಜರ ಚಿಕ್ಕ ಕವನವಿದೆ. ಅದರೊಳಗಿನ ಮೊದಲನೆಯ ಹಾಗೂ ಕೊನೆಯ ಶ್ಲೋಕವು ಒಂದೇ ಇರುವುದು. ಅದು ತ್ರಿವಿಕ್ರಮನ ಅಂಕಿತದಿಂದ ಇದೆ.

ಶೋಭನವೆನ್ನಿರೆ ಸುರರೊಳು ಸಭುಗನಿಗೆ ।
ಶೋಭನವೆನ್ನಿ ಸುಗುಣನಿಗೆ ।
ಶೋಭನವೆನ್ನಿರಿ ತ್ರಿವಿಕ್ರಮರಾಯಗೆ ।
ಶೋಭನವೆನ್ನಿ ಸುರಪ್ರಿಯಗೆ ॥

ಕನಕದಾಸರು ಮೋಹನತರಂಗಿಣಿಯನ್ನು ಬರೆಯುವಾಗ್ಗೆ, ರಾಜರಿಗೆ "ತ್ರಿವಿಕ್ರಮದಾಸ" ರೆಂಬ ಮತ್ತೊಂದು ಹೆಸರು ಬಿದ್ದಿರಬಹುದು. ದಾಸರ ಪೀಳಿಗೆಗೆ ಒಳಸಟ್ಟ ಕನಕದಾಸರು ಪ್ರೀತಿಯಿಂದ ತಮ್ಮ ಗುರುಗಳಾದ ಶ್ರೀವಾದಿರಾಜರಿಗೆ ತ್ರಿವಿಕ್ರಮದಾಸರೆಂದು ಸಂಬೋಧಿಸಿರುವುದು ಸ್ವಾಭಾವಿಕವೂ ಉಚಿತವೂ ಆಗಿದೆ!

---

# ೨. ಕನಕದಾಸರ ಕಾಲದೊಳಗಿನ ಭಾಗವತಧರ್ಮವಿಸ್ತಾರ.

ಭಗನೆಂಬ ದೇವತೆಯು ಶುಭವನ್ನುಂಟುಮಾಡುವನೆಂದು ಹೇಳಿರುವುದು. ಭಗ ಶಬ್ದಕ್ಕೆ ಶುಭಶಕ್ತಿಯೆಂಬರ್ಥವೂ ಈ ಶಕ್ತಿಯುಳ್ಳವನು ಭಗವಂತನೆಂದೂ ತಿಳಿದು ಬರುವುದು. ಭಗವಂತನನ್ನು ಪೂಜೆಮಾಡುವ ಮತಕ್ಕೆ ಭಾಗವತವೆಂದು ಹೆಸರು. ಭಗವಂತನು ವಿಷ್ಣುವಿನಿಂದ ಅಭಿನ್ನನಾದುದರಿಂದ ಭಾಗವತಮತಕ್ಕೆ ವೈಷ್ಣವಮತವೆಂದು ಹೆಸರು ಬಂದಿತು. ವಿಷ್ಣುವಿನ ಮಹಿಮೆಯನ್ನು ಹೊಗಳುವ ಅನೇಕ ಗ್ರಂಥಗಳಿವೆ. ಅವುಗಳಲ್ಲಿ ಭಾಗವತಪುರಾಣವು ಮಿಗಿಲಾದುದು. ಭಾಗವತವು ಕಲಿಯುಗದೊಳಗೆ ದಕ್ಷಿಣದೇಶದಲ್ಲಿ "ಅನೇಕರು ನಾರಾಯಣನ ಭಕ್ತರಾಗುವರು" ಎಂದು ಹೇಳುವುದು. ಇವರೇ ಆಳ್ವಾರರು. ಇವರ ಗ್ರಂಥಗಳಿಗೆ 'ನಾಲಾಯಿರ' ಪ್ರಬಂಧವೆನ್ನುವರು. ಆಳ್ವಾರರ ಕಾಲವು ೮-೯ ನೆಯ ಶತಮಾನವೆಂದು ಹೇಳಬಹುದು. ಆಳ್ವಾರರ ನಂತರ ಆಚಾರ್ಯರ ಕಾಲವು ಪ್ರಾರಂಭವಾಗುವುದು. ಹನ್ನೆರಡನೆಯ ಶತಮಾನದಲ್ಲಿ ರಾಮಾನುಜಾಚಾರ್ಯರು ವಿಶಿಷ್ಟಾದ್ವೈತಮತವನ್ನು ಸ್ಥಾಪಿಸಿ ಶ್ರೀವೈಷ್ಣವ ಸಂಪ್ರದಾಯವನ್ನು ಬಳಕೆಯಲ್ಲಿ ತಂದರು. ಆಚಾರ್ಯರು ಆಳ್ವಾರರ ಪ್ರಬಂಧಕ್ಕೆ ಬಹಳ ಮಹತ್ವಕೊಟ್ಟಿದುಂಟು. ರಾಮಾನುಜರಲ್ಲಿ ಎರಡು ಬಣಗಳಿವೆ. ಒಂದಕ್ಕೆ ತೆಂಗಲೆಯರೆಂದೂ ಎರಡನೆಯದಕ್ಕೆ ವಡಗಲೆಯರೆಂದೂ ಕರೆಯುವರು. ತೆಂಗಲೆಯವರು ದಕ್ಷಿಣದೇಶದ ನುಡಿಯಾದ ತಮಿಳಿನಲ್ಲಿರುವ ನಾಲಾಯಿರ ಪ್ರಬಂಧವನ್ನು ಮುಖ್ಯಶಾಸ್ತ್ರವೆಂದು ತಿಳಿಯುವರು. ವಡಗಲೆಯವರು ಉತ್ತರ ದೇಶದ ಭಾಷೆಯಾದ ಸಂಸ್ಕೃತದಲ್ಲಿರುವ ವೇದ ಮೊದಲಾದ ಶಾಸ್ತ್ರಗಳು ಮುಖ್ಯವೆಂದು ತಿಳಿಯುವರು.

ರಾಮಾನುಜಾಚಾರ್ಯರ ಕಾಲದಲ್ಲಿಯೆ ಉತ್ತರದೇಶದೊಳಗೆ ರಾಮಾನಂದ ರೆಂಬ ವೈಷ್ಣವ ಆಚಾರ್ಯರು ಆಗಿ ಹೋದರು. ಆ ಬಳಿಕ ಮಧ್ವಾಚಾರ್ಯರ ಉದಯವಾಯಿತು ಇವರೇ ದ್ವೈತಮತಸ್ಥಾಪನಾಚಾರ್ಯರು; ಭಾಗವತ ಧರ್ಮದ ಅಧ್ವರ್ಯುಗಳು. ಇವರ ಶಿಷ್ಯರೆ ಕರ್ನಾಟಕದಲ್ಲಿ ಭಾಗವತಧರ್ಮ ವನ್ನು ಅತ್ಯುಚ್ಚ ಶಿಖರಕ್ಕೆ ತಲುಪಿದರೆಂದು ಹೇಳಬಹುದು. ರಾಮಾನುಜ ರೊಳಗಿರುವ ತೆಂಗಲೆವಡಗಲೆಯವರ ಪಂಗಡದಂತೆ ಕರ್ನಾಟಕದಲ್ಲಿ ದಾಸಕೂಟ ಮತ್ತು ವ್ಯಾಸಕೂಟ ಎಂಬ ಒಳಭೇದವಿದ್ದುದು ಕಂಡುಬರುತ್ತದೆ. ದಾಸವ್ಯಾಸಕೂಟಗಳ ವಾದವು, ರಾಮಾನುಜರೊಳಗಣ ತೆಂಗಲೆವಡಗಲೆ ವಾದದ ಮಾರ್ಪಟ್ಟ ಪಡಿದನಿ.

ಕನಕದಾಸರ ಕಾಲದಲ್ಲಿ ಇಡೀ ಭಾರತವರ್ಷದ ಸಿಂಹಾವಲೋಕನ ಮಾಡಿದಲ್ಲಿ ಭಾಗವತಧರ್ಮದ ಸೊಲ್ಲು ಎಲ್ಲೆಡೆಯಲ್ಲಿಯೂ ಕೇಳಬರುತ್ತಿದ್ದಿ ತೆಂದೆನ್ನಬಹುದು. ಪರಮಭಾಗವತನೆಂದು ಹೆಸರುವಾಸಿಯಾದ ಪ್ರತಿ ಯೊಂದು ವಿಭೂತಿಯು ಅಂದು ಜನ್ಮತಳೆದಿದ್ದನೆಂದು ಧಾರಳವಾಗಿ ಹೇಳ ಬಹುದು.

ರಾಯಿದಾಸನೆಂಬ ಸಮ್ಮಗಾರ ಕುಲದ ಸಾಧುವು ರಾಜಸ್ಥಾನದಲ್ಲಿ ಆಗಿ ಹೋದನು. ಅವನು ಮಹಾಭಗವದ್ಭಕ್ತನು. ಕೃಷ್ಣಭಕ್ತಿಯನ್ನೊಳಗೊಂಡ ಅನೇಕ ಪದಗಳನ್ನು ರಚಿಸಿದನು. ಕೆಳಗಿನ ಕುಲಗಳಲ್ಲಿ ಅವನು ಪ್ರಚಂಡ ಆಂದೋಲವನ್ನು ಮಾಡಿದನು. ಅವನ ಪದಗಳನ್ನು ರಾಜಸ್ಥಾನದ ದನಗಾ ಯಿಗಳು ಈಗ್ಗೆಯು ಭಕ್ತಿಯಿಂದ ಅನ್ನುತ್ತಾರಂತೆ. (ಶ. ೧೬೦೦).

ರಾಯಿದಾಸನ ಮುಪ್ಪಿನ ಕಾಲದಲ್ಲಿ, ಮೇವಾಡದ ಅರಸುಮಗಳೂ ಚಿತ್ತೂರಿನ ಅರಸಿಯೂ ಆದ ಮಿರಾಬಾಯಿಯೆಂಬ ಸಾಧ್ವಿಯು ಅವನ ಶಿಷ್ಯತ್ವವನ್ನು ಪಡೆದಳು. ಮಿರಾಬಾಯಿಯು ಚಿಕ್ಕಂದಿನಿಂದ ಪರಮ ಭಾಗ ವತಳು. ರಾಜವೈಭವ, ಸಂಸಾರ ಮೊದಲಾದವುಗಳನ್ನು ತೊರೆದು, ಅವಳು ಕೃಷ್ಣನ ನಾಮಸಂಕೀರ್ತನೆಯಲ್ಲಿಯೇ ತನ್ನ ಕಾಲವನ್ನು ಕಳೆದಳು. ಮಾರ ವಾಡ, ಮಥುರೆ ಗೋಕುಲ, ವೃಂದಾವನಗಳ ಪಂಚಕ್ರೋಶಿಯಲ್ಲಿ ಭಕ್ತಿ ಪಂಥಕ್ಕೆ ಇವಳೇ ಒಳ್ಳೇ ಚಾಲನೆ ಕೊಟ್ಟಳು. (ಶ. ೧೬೦೦).

ಪರಮಭಾಗವತನಾದ ಪ್ರಯಾಗದ ತುಳಸೀದಾಸನೂ ಅದೇ ಕಾಲದವನು (೧೫೩೨-೧೬೨೩). ಅವನು ಹಿಂದೀ ನುಡಿಯಲ್ಲಿ ರಾಮಾಯಣವನ್ನು ಬರೆದು ಆ ವಾಙ್ಮಯವನ್ನು ಅಭಿವೃದ್ಧಿಗೊಳಿಸಿದನಲ್ಲದೆ, ವಿಷ್ಣುಭಕ್ತಿಯ ತಿರುಳು ಸರ್ವಸಾಧಾರಣ ಜನತೆಗೂ ನಿಲುಕುವಂತೆ ಮಾಡಿದನು.

ಕಬೀರದಾಸನು (೧೩೯೮-೧೫೧೮) ಕಾಶಿಯವನು. ಅವನು ಹಿಂದುಸ್ತಾನೀ ನುಡಿಯಲ್ಲಿ ಭಕ್ತಿವೈರಾಗ್ಯಗಳನ್ನೊಡಗೊಂಡ ಅನೇಕ ಪದಗಳನ್ನು ರಚಿಸಿದನು. ಹಿಂದು-ಮುಸಲ್ಮಾನರಲ್ಲಿಯ ವೈಮನಸ್ಸು ಅಳಿದು ಹೋಗಬೇಕೆಂದು ಆ ಸಾಧುವು ಅನೇಕ ಬಗೆಯಾಗಿ ಬೋಧಿಸಿದನು. ಜೇಡರೇ ಮೊದಲಾದ ಜಾತಿಗಳಲ್ಲಿ, ಕಬೀರದಾಸನೇ 'ರಾಮನಾಮ'ದ ಮಹತ್ವವನ್ನು ಅರುಹಿದನು.

ಬಂಗಾಳದ ಪರಮವೈಷ್ಣವನಾದ ಗೌರಾಂಗ ಪ್ರಭುವೂ ಅಂದಿನವನೇ. ಶ್ರೀಕೃಷ್ಣಚೈತನ್ಯನ ಕಾಲವು ೧೪೮೫ ರಿಂದ ೧೫೩೩ರ ವರೆಗೆ ಚೈತನ್ಯನ "ಹರಿಬೋಲ್," ಗರ್ಜನೆಯು ಅಂಗ, ವಂಗ, ಕಳಿಂಗಗಳಲ್ಲಿ, ಭಾವನಾಪ್ರಧಾನರಾದ ಬಂಗಾಲಿಗಳನ್ನು ಬಡಿದೆಬ್ಬಿಸಿತೆಂದು ಹೇಳಬಹುದು. ಗೌರಾಂಗನು ಭಕ್ತಿಪುರಸ್ಸರನಾದ ಬಹು ದೊಡ್ಡ ತತ್ವಜ್ಞಾನಿಯು. ಅವನ ಪಂಥದ ವೈಷ್ಣವರು ಬಂಗಾಳದಲ್ಲಿ ಈಗ್ಗೆಯೂ ಇರುವರು ಚೈತನ್ಯನು ೧೫೧೦ ರಿಂದ ೧೫೨೬ರ ವರೆಗೆ ಇಡೀ ಹಿಂದುಸ್ತಾನದಲ್ಲಿ ತೀರ್ಥಾಟನೆಗಾಗಿಪ್ರವಾಸ ಮಾಡಿದುದಲ್ಲದೆ, ಮಕ್ಕೆಮದೀನೆಗಳಿಗೂ ಹೋಗಿದ್ದನೆಂದುಹೇಳುತ್ತಾರೆ.

ಘೂರ್ಜರ ದೇಶದ ವಲ್ಲಭಾಚಾರ್ಯರೂ ಕನಕದಾಸರ ಕಾಲದವರೇ (೧೪೭೯-೧೫೩೧). ಆಚಾರ್ಯರು ಹೊಸದೊಂದು ವೈಷ್ಣವ ಪಂಥವನ್ನೇ ಸ್ಥಾಪಿಸಿದರು. ಅದಕ್ಕೆ 'ವಲ್ಲಭೀಪಂಥ' ವೆಂದೆನ್ನುವರು. ತಮ್ಮ ಪಂಥದ ಪ್ರಚಾರಕ್ಕಾಗಿ ಅವರು ಬಹಳ ಪ್ರಯಾಸಬಟ್ಟರೆಂದು ತೋರುತ್ತದೆ. ವಲ್ಲಭಾಚಾರ್ಯರು, ವಿಜಯನಗರದಲ್ಲಿ ವ್ಯಾಸರಾಯರಿರುವಾಗ್ಗೆ ಕೃಷ್ಣದೇವರಾಯನ ಆಸ್ಥಾನಕ್ಕೆ ಬಂದಿದ್ದರೆಂದು ತಿಳಿಯುತ್ತದೆ. ಆವರ ಉಪನ್ಯಾಸದ ಸಮಯದಲ್ಲಿ ವ್ಯಾಸರಾಯರೇ ಅಧ್ಯಕ್ಷರಾಗಿದ್ದರು. ಆಚಾರ್ಯರು ಕೃಷ್ಣಭಕ್ತಿಯ ವಿಷಯದಲ್ಲಿ ನೆರವೇರಿಸಿದ ಕಾರ್ಯವು ಅಗಾಧವಾಗಿದೆ. ವೈಷ್ಣವಾಗ್ರಣಿಯಾದ ಸೂರದಾಸನು ವಲ್ಲಭಾಚಾರ್ಯರ ಪ್ರತ್ಯಕ್ಷ ಶಿಷ್ಯನು.

ಮರಾಟ ದೇಶದಲ್ಲಿ ಭಾನುದಾಸನೆಂಬ ಭಾಗವತನು (೧೪೪೮-೧೫೧೩) ವಿಟ್ಠಲ ಭಕ್ತಿಯನ್ನು ಎಲ್ಲೆಲ್ಲಿಯೂ ಹರಡಿದನು. ವಿಜಯನಗರಕ್ಕೆ ಹೋದ ವಿಟ್ಠಲನನ್ನು ಮರಳಿ ಪಂಢರಪುರಕ್ಕೆ ತಂದವನು ಭಾನುದಾಸನೆ ಎಂದು ಭಾವಿಕ ಜನರಲ್ಲಿ ಪ್ರತೀತಿಯಿದೆ. ಭಾನುದಾಸನ ಮೊಮ್ಮಗನೇ ಏಕನಾಥ ಪ್ರಭುವು (೧೫೪೮-೧೫೯೯). ಏಕನಾಥನೆ ಶ್ರೀಮದ್ಭಾಗವತವನ್ನು ಮರಾಟಿಯಲ್ಲಿ ಅನುವಾದಿಸಿದನು. ಭಾಗವತದೊಳಗಣ ವಿಷ್ಣುಭಕ್ತಿಯ ಹುರುಳು ಜನಜಂಗುಳಿಯಲ್ಲಿ ಹರಡಬೇಕೆಂದು, ಈ ಮಹಾಪುರುಷನು ಅನೇಕ ಕಷ್ಟನಷ್ಟಗಳನ್ನನುಭವಿಸಿದನು. ''ಏಕನಾಥೀ ಭಾಗವತ''ವು ಸದ್ಯದಲ್ಲಿ ಮಹಾರಾಷ್ಟ್ರೀಯ ಸಾಧುಸಂತರ ಸೊಬಗಿನ ಸುಗ್ಗಿಯೆಂದು ಹೇಳಬಹುದು. ಮರಾಟಿಯಲ್ಲಿ ಅದ್ಭುತ ಗ್ರಂಥರಚನೆ ಮಾಡಿದ ದಾಸೋದಿಗಂಬರ (೧೫೫೧-೧೬೧೬)ನೆಂಬ ಭಾಗವತನೂ ಅಂದಿನವನೇ.

ಕರ್ನಾಟಕದಲ್ಲಿ ಮಧ್ವರಾಮಾನುಜರಿಂದ ಪುಷ್ಟಿಯನ್ನು ಪಡೆದ ಭಾಗವತ ಧರ್ಮವು ಅವರ ಸಚ್ಛಿಷ್ಯರಿಂದ ಅಭಿವೃದ್ಧಿಯನ್ನು ಪಡೆಯಿತು. ಭಗವಂತನ ಮಹಿಮೆಯನ್ನು ಕನ್ನಡದಲ್ಲಿ ಹಾಡಿ ಭಕ್ತಿಯಿಂದ ಭಜಿಸುವ ಪರಿಪಾಠವು ಮೊದಲು, ಮಧ್ವಾಚಾರ್ಯರ ಸಾಕ್ಷಾಚ್ಛಿಷ್ಯರಾದ ನರಹರಿತೀರ್ಥರಿಂದ ರೂಢಿಯಲ್ಲಿ ಬಂದಿತೆಂದು ಅನ್ನುವದುಂಟು. ಈ ನರಹರಿತೀರ್ಥರೇ ದಾಸಕೂಟದ ಮೊದಲಿಗರೆಂದು ಅನೇಕರು ತಿಳಿಯುತ್ತಾರೆ. ಹೀಗಾಗಿ ಮಾಧ್ವ ಮಠಗಳಲ್ಲಿ ಸಮಾಜದಲ್ಲಿ ಕನ್ನಡ ಕವನಗಳಿಂದ, ಭಗನ್ನಾಮಸಂಕೀರ್ತನೆ ಮಾಡುವುದು, ಭಗವದನುಗ್ರಹಕ್ಕೆ ಪಾತ್ರರಾಗಬೇಕಾದರೆ, ಮಾನಸಿಕ ಹಾಗೂ ಶಾರೀರಿಕ ಶುದ್ಧಿಯನ್ನು ಕೈಕೊಳ್ಳುವುದು, ಅದರ ಗೋಸುಗ ನೀತಿಧರ್ಮಗಳನ್ನು ಅವಲಂಬಿಸುವುದು, ವೈರಾಗ್ಯವನ್ನು ತಳೆಯುವುದು, ಇವೇ ಮೊದಲಾದವುಗಳು ಜನರಿಗೆ ತಿಳಿಸಿಕೊಡಲಾದುವು. ಬರಬರುತ್ತ ಈ ಕಾರ್ಯವನ್ನು ಕೈಕೊಂಡು ಈಶ್ವರಸೇವೆ ಜನಸೇವೆ ಮಾಡುವವರಿಗೆ 'ದಾಸರು' ಎಂಬ ಸಂಕೇತವು ಬಳಿಕೆಯಲ್ಲಿ ಬಂದಿತು.

ಶ್ರೀವ್ಯಾಸರಾಯರ ಗುರುಗಳಾದ ಮುಳಬಾಗಿಲು ಮಠದ ಶ್ರೀಪಾದರಾಯರು ಅನೇಕ ಪದಗಳನ್ನು ರಚಿಸಿದರು. ಅವರ ಶಿಷ್ಯರಾದ ವ್ಯಾಸತೀರ್ಥರಂತೂ (೧೪೪೯-೧೫೩೯) ವಿಜಯನಗರದ ದಾಸಕೂಟದ ಅಧ್ಯ

ಕ್ಷರು; ವಿಜಯನಗರ ಸಾಮ್ರಾಜ್ಯದ ಅಧಿದೈವತಪ್ರಾಯರು. ಅಗಾಧ ಪಾಂಡಿತ್ಯ, ಅಪ್ರತಿಮ ಗ್ರಂಥರಚನೆ, ಅತುಲ ವೈರಾಗ್ಯ, ಅಖಂಡ ಬ್ರಹ್ಮಚರ್ಯ, ಅಸದೃಶ ಧರ್ಮಕಾರಣರಾಜಕಾರಣ ಪಟುತ್ವ ಇವುಗಳ ಮೂಲಕ ವ್ಯಾಸ ಮುನಿಗಳು, ಭಾಗವತಪಂಥದ ತಿರುಳನ್ನು ವಿಜಯನಗರ ಸಾಮ್ರಾಜ್ಯ ದಲ್ಲಷ್ಟೇ ಅಲ್ಲದೆ ಇಡೀ ಭರತಖಂಡದಲ್ಲಿಯೂ ತಿಳಿಸಿಕೊಟ್ಟರು.

ಉಡುಪಿಯ ಶ್ರೀವಾದಿರಾಜರು (೧೪೮೦-೧೬೦೦) ವ್ಯಾಸಯೋಗಿಗಳ ಶಿಷ್ಯರು. ಗುರುಗಳಂತೆಯೆ ರಾಜರು, ಗ್ರಂಥರಚನೆಯಿಂದ, ಕಾವ್ಯಮಯ ಪದರಚನೆಯಿಂದ, ಕಾವ್ಯಗಳಿಂದ, ವಾಗ್ಮಿತನದಿಂದ, ಭಕ್ತಿವೈರಾಗ್ಯಗಳಿಂದ ಉಡುಪಿಯ ಕೃಷ್ಣನ ಹಾಗೂ ಸೋದೆಯ ತ್ರಿವಿಕ್ರಮನ ವಿಜೃಂಭಣೆಯ ಉತ್ಸವಗಳ ಕರ್ತೃತ್ವದಿಂದ ಜನರನ್ನು ಭಕ್ತಿಪಂಥಕ್ಕೆ ಮನಸೋಲಿಸಿದರು.

ದಾಸಶ್ರೇಷ್ಠರಾದ ಪುರಂದರದಾಸರೂ (೧೪೮೪-೧೫೬೪) ಕನಕದಾಸರ ಕಾಲದವರೇ. ಈ ಪರಮಭಾಗವತರ ಸಂಬಂಧವಾಗಿ ಹೆಚ್ಚಿಗೆ ಬರೆಯುವ ಕಾರಣವೇಇಲ್ಲ. ಮನೆಮಾರುಗಳನ್ನು ತೊರೆದು, ವೈರಾಗ್ಯ ತಳೆದು, ತೀರ್ಥ ಯಾತ್ರೆಗಳಿಗಾಗಿ ಹೊರಟು, ಭಿಕ್ಷಾಟನೆಯ ಮೂಲಕ ದೇಶದೇಶಗಳಲ್ಲಿ, ಪಟ್ಟಣಗಳಲ್ಲಿ, ಪಳ್ಳಿಗಳಲ್ಲಿ, ಕೇರಿಗಳಲ್ಲಿ, ಮನೆಮನೆಗಳ ಮುಂದೆ ಹೊಸಬಗೆಯ ಪದಗಳನ್ನು ರಚಿಸಿ, ಭಕ್ತಿನೀತಿವೈರಾಗ್ಯಗಳು ಜನರ ಮನದಟ್ಟಾಗುವಂತೆ ಭಾಗವತ ಧರ್ಮದ ಮರ್ಮವು ತಿಳಿಯುವಂತೆ, ಹಾಡಿ ಜನಜಾಗ್ರತೆ ಮಾಡಿದ ಕನ್ನಡಿಗರೊಳಗಣ ಮಹಾವಿಭೂತಿಯಿದು! ದಾಸರ ಪೀಳಿಗೆಯಲ್ಲಿ ಇವರೇ ಅಗ್ರಗಣ್ಯರು!

ಬೇಲೂರಿನ ವೈಕುಂಠದಾಸರೂ ಇದೇ ಕಾಲದವರೆಂದು ಕೆಲವರನ್ನುವರು. ಬೇಲೂರ ಬಿಟ್ಟು ಕದಲದಿದ್ದರೂ ಈ ಶ್ರೀವೈಷ್ಣವದಾಸರು ಅಲ್ಲಿಯೇ ಪದ ಗಳನ್ನು ರಚಿಸಿ ತಮ್ಮ ನಿರ್ಮಲವಾದ ಚಾರಿತ್ರ್ಯದಿಂದ ವಿಷ್ಣುಭಕ್ತಿಗೆ ಚಾಲನೆ ಯನ್ನಿತ್ತರು. ಕನಕದಾಸರು ಇವರ ಶಿಷ್ಯತ್ವವನ್ನು ವಹಿಸಿ ಬೇಲೂರಿನಲ್ಲಿ ಬಹುಕಾಲ ವಾಸಿಸಿದರೆಂದು ಹೇಳುತ್ತಾರೆ. ಕೃಷ್ಣರಾಯ ಅಳಿಯರಾಮರಾಯರ ರಾಮಾನುಜ ಗುರುಗಳಾದ ತಿರುಮಲೈ ತಾತಾಚಾರ್ಯರೂ (ಸು. ೧೫೫೦) ಮಹಾವೈಷ್ಣವರೇ. ಅವರಂತೆಯೆ ಅವರ ಮಕ್ಕಳಾದ ಕುಮಾರ ತಾತಾಚಾ ರ್ಯರೂ ತೆಲುಗು ತಮಿಳು ದೇಶಗಳಲ್ಲಿ ವೈಷ್ಣವಧರ್ಮದ ಮರ್ಮವನ್ನರು

ಹಿದರು. ಕುಮಾರ ತಾತಾಚಾರ್ಯರು ( ಸು. ೧೫೮೫ ) ಚಂದ್ರಗಿರಿಯಲ್ಲಾಳಿದ ವಿಜಯನಗರದ ನರಪತಿ ವೆಂಕಟಪತಿದೇವರಾಯನ ರಾಜಗುರುಗಳು. ಮಾಧ್ವಗುರುಗಳಾದ ವಿಜಯೀಂದ್ರಯತಿಗಳು, ಕುಮಾರ ತಾತಾಚಾರ್ಯರ ಸಮಕಾಲೀನರು. ವಿಜಯೀಂದ್ರರು ವ್ಯಾಸರಾಯರ ಶಿಷ್ಯರು. ಗುರುಗಳಂತೆಯೆ ಇವರೂ ಪಂಡಿತರು, ಭಾಗವತರು.

---

ಧಾರವಾಡ ಇತಿಹಾಸ ಸಂಶೋಧಕ ಮಂಡಲದವರಿಂದ ಒದಗಿದುದು.



ತಿರುಮಲಾದೇವಿ ಕೃಷ್ಣದೇವರಾಯ ಚಿನ್ನಾದೇವಿ
( ತಿರುಪತಿ. )

(ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ)

ಧಾರವಾಡ ಇತಿಹಾಸ ಸಂಶೋಧಕ
ಮಂಡಲದವರಿಂದ ಒದಗಿದುದು.



ವೆಂಕಟಪತಿದೇವರಾಯ
( ತಿರುಪತಿ. )

ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ.

## ೩ ದಾಸರ ಕಾಲದ ಕರ್ನಾಟಕ.

ಕನಕದಾಸರ ಕಾವ್ಯಗಳಲ್ಲಿ ಆ ಕಾಲದ ಜನಜೀವನದ ಪಡಿನೆರಳು ಬಿದ್ದುದು ಕಂಡುಬರುವುದು. ಅವರ ಕಾವ್ಯದ ನೊಬಗನ್ನು ಕಂಡುಹಿಡಿಯ ಬೇಕಾದರೆ, ಆ ಕಾಲದ ಇತಿಹಾಸದ ಪರಿಚಯವು ಅವಶ್ಯಕವಾಗಿದೆ. ಆದುದ ರಿಂದ ೧೬ನೆಯ ಶತಮಾನದ ಕರ್ನಾಟಕದ ಸಂಕ್ಷಿಪ್ತ ಇತಿಹಾಸವನ್ನು ಇಲ್ಲಿ ಬರೆಯಲಿದೆ.

### ಕೃಷ್ಣದೇವರಾಯ.

( ೧೫೦೯–೧೫೩೦ )

ಸೋಮನಾಥನೆಂಬ ಕವಿಯು ಸಂಸ್ಕೃತದಲ್ಲಿ 'ವ್ಯಾಸಯೋಗೀಚರಿತಂ' ಎಂಬ ಚಂಪೂ ಗ್ರಂಥವನ್ನು ಬರೆದಿರುವನು. ವ್ಯಾಸಯೋಗಿ ಚರಿತವನ್ನು ಬರೆದು ಅದನ್ನು ಕಥಾನಾಯಕರಾದ ವ್ಯಾಸರಾಯರಿಗೆ ಓದಿ ತೋರಿ ಸಿದನು. ಆದುದರಿಂದ, ಸೋಮನಾಥನು ಕೃಷ್ಣರಾಯ ಹಾಗೂ ವ್ಯಾಸ ರಾಯರ ಸಂಬಂಧವಾಗಿ ಬರೆದಿರುವುದು, ಕಣ್ಣಾರೆ ಕಂಡ ವಿಷಯ. ಸೋಮ ನಾಥನ ವ್ಯಾಸಯೋಗಿಚರಿತವು ದೊರೆಯದಿದ್ದರೆ, ವ್ಯಾಸರಾಯ ಕೃಷ್ಣರಾಯರ ನಡುವಿನ ನಿಕಟ ಸಂಬಂಧವು ಕಣ್ಮರೆಯಾಗಿ ಹೋಗಬಹುದಾಗಿತ್ತು. ಅದು ಉಪಲಬ್ಧವಿರುವುದರಿಂದ ಆ ವಿಷಯದಲ್ಲಿ ಅನೇಕ ಸಂಗತಿಗಳು ಬೆಳಕಿಗೆ ಬಂದು ಕೃಷ್ಣರಾಯನ ಚರಿತ್ರೆಗೆ ಹೆಚ್ಚಿಗೆ ಹೊಳೆವು ಉಂಟಾಗಿರುವುದು. ವ್ಯಾಸಯೋಗಿಚರಿತದಲ್ಲಿ ಕೃಷ್ಣರಾಯನನ್ನು ಕುರಿತು ಸೋಮನಾಥ ಕವಿಯು ಅಂದುದರ ಸಾರಾಂಶ,

**ಸಮಸ್ತಭುವನಮಂಗಲಸಮಯಸಲಿಲಧಾರಾಯ—**
**ಮಾಣಶಾಸನಚಾತುರೀಕಃ × × × ಶಿರೋಮಣಿ**
**ಭೂಪತೀನಾಂ × × × ಪಾರದೃಶ್ವಾಸಕಲವಿದ್ಯಾನಾಂ**
**ಸ ಕೃಷ್ಣರಾಯೋ ಜಲನಿಧಿಪರಿಧಾನಪ್ರಸಾಧಿತಂ**
**ಧರಾವಲಯಂ ಭುಜಾವಲಯಮಿವಾತಿಲೀಲಯಾ ಬಭಾರ.**

ವಿಜಯನಗರದ ರತ್ನಸಿಂಹಾಸನವನ್ನಲಂಕರಿಸಿದ ಅರಸರಲ್ಲಿ ಕೃಷ್ಣದೇವ ರಾಯನೇ ತೀರ ವೈಭವಶಾಲಿಯು. ಅವನ ಆಳಿಕೆಯಲ್ಲಿ ವಿಜಯನಗರ ಸಾಮ್ರಾಜ್ಯವು ಸುಖಸಂಪದಗಳ ನೆಲೆವೀಡಾಗಿದ್ದಿತು. ಕೃಷ್ಣರಾಯನು ಕಳಿಂಗ, ಗಜಪತಿ, ಅರಸರನ್ನು ಗೆದ್ದು ಸಾಮ್ರಾಜ್ಯವನ್ನು ವಿಸ್ತರಿಸಿದನು. ಆದಿಲಶಹನ ಆಡಳಿತಕ್ಕೆ ಒಳಪಟ್ಟ ರಾಯಚೂರು ಕೋಟೆಯನ್ನು ಕೈವಶ ಮಾಡಿಕೊಂಡು ಅಪಾರ ಸಂಪತ್ತನ್ನೂ ಯಶಸ್ಸನ್ನೂ ಸಂಪಾದಿಸಿದನು. ಬಾಮನಿ ಸಾಮ್ರಾಜ್ಯವನ್ನೊಳನುಗ್ಗಿ ಕಲಬುರ್ಗೆಯ ವರೆಗೆ ಸಾಗಿ ಅಲ್ಲಿ ಎರಡನೆಯ ಅಲ್ಲಾಉದ್ದೀನನನ್ನು ಪಟ್ಟಗಟ್ಟಿದನು. ಕೃಷ್ಣೆಯಿಂದ ರಾಮೇಶ್ವರದ ವರೆಗಿರುವ ದಕ್ಷಿಣ ಹಿಂದುಸ್ಥಾನವನ್ನು ಏಕಛತ್ರಾಧಿಪನಾಗಿ ಆಳಿದನು. ಕೃಷ್ಣರಾಯನ ವರ್ಚಸ್ಸು ನರ್ಮದೆಯವರೆಗೂ ಹಬ್ಬಿದ್ದಿತೆಂದು ಅವನ ಬಿರುದಾವಳಿಯಿಂದ ತಿಳಿಯುವುದು.

**“ ಶ್ರೀಸಮಸ್ತಭುವನಾಶ್ರಯ ಪೃಥ್ವೀವಲ್ಲಭ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಭಟ್ಟಾರಕ ಸತ್ಯಾಶ್ರಯ ಪದವಾಕ್ಯಪ್ರಮಾಣಪಾರಾವಾರಪಾರೀಣ ಶ್ರೀಮನ್ಮಹಾಮಂಡಲೇಶ್ವರ ಪ್ರತ್ಯರ್ಥಿರಾಜನಿಭಾಡ ಶ್ರೀವಿರೂಪಾಕ್ಷಪಾದಪದ್ಮಾರಾಧಕ ಶ್ರೀವೀರಪ್ರತಾಪ ದಕ್ಷಿಣಸಮುದ್ರಾದಿ ನರ್ಮದಾನದ್ಯಂತ ಭೂಮಂಡಲೈಕಛತ್ರಾಧಿಪ ಸಕಲವರ್ಣಾಶ್ರಮಾಚಾರಧರ್ಮಪ್ರತಿಪಾಲಕ ಶ್ರೀವಿದ್ಯಾನಗರರಾಜಧಾನೀರತ್ನಸಿಂಹಾಸನಾಧೀಶ್ವರ ಸಕಲಕಲಾಭೋಜ ಕೃಷ್ಣದೇವಮಹಾರಾಯ. ”**

ಅಕಬರ ಬಾದಶಹನಿಂದ ಮೊಗಲಸಾಮ್ರಾಜ್ಯವು ಘನತೆಗೇರಿತು. ಅದಕ್ಕೂ ಮುಂಚಿತ ಪರನಾಡುಗಳಲ್ಲಿ ವಿಜಯನಗರವೆ ಹೆಸರುವಾಸಿಯಾ

ಗಿದ್ದಿತು. ಪರದೇಶಗಳಿಂದ ಬಂದ ಪ್ರಯಾಣಿಕರು ವಿಜಯನಗರವನ್ನು ಕಾಣದೆ ಹೋಗುತ್ತಿರಲಿಲ್ಲ. ವ್ಯಾಪಾರಕ್ಕೆಂದು ಬಂದ ವಿದೇಶದ ವರ್ತಕರು, ಗೋವೆ ಭಟಕಳ ಮುಂತಾದ ವಿಜಯನಗರದ ಬಂದರಗಳಲ್ಲಿಳಿದು, ರಾಜಧಾನಿಗೆ ಹೋಗುವರು. ಗೋವೆಯೊಳಗಿನ ವಿಜಯನಗರದ ವ್ಯಾಪಾರಕ್ಕೆ ಮನಸೋತು ಆಲ್‌ಫಾನ್ಸೊ ಅಲ್ಬುಕರ್ಕನು ಪ್ರಯಾಸ ಪಟ್ಟು ಆ ಬಂದರವನ್ನು ಆದಿಲಶಹನಿಂದ ಹಸ್ತಗತಮಾಡಿಕೊಂಡನು. ವಿಜಯನಗರದವರು ಪೋರ್ತುಗೀಜರಿಂದಲೆ ಮದ್ದು, ಶಸ್ತ್ರಾಸ್ತ್ರ, ಕುದುರೆ ಮುಂತಾದ ಯುದ್ಧ ಸಾಮುಗ್ರಿಗಳನ್ನು ಕೊಂಡುಕೊಳ್ಳುತ್ತಿದ್ದರು. ಹೀಗಾಗಿ, ಪೋರ್ತುಗಾಲವು ವಿಜಯನಗರದ ವ್ಯಾಪಾರದಿಂದ ವೈಭವಶಾಲಿಯಾಯಿತು ರಾಕ್ಷಸದಂಗಡಿಯ ಅನಾಹುತದ ಮೂಲಕ ವಿಜಯನಗರವು ವಿಸ್ಖಲಿತವಾದಂದಿನಿಂದ ಪೋರ್ತುಗಾಲದ ಇಳಿಗಾಲವು ಪ್ರಾರಂಭವಾಯಿತು.

ಕೃಷ್ಣರಾಯನು ವಿದ್ಯಾಪಕ್ಷಪಾತಿಯು; ಕವಿಯು. ಅವನಿಗೆ ಭೋಜನೆಂದು ಕರೆದುದೂ ಉಂಟು. ಕವಿಗಳಿಗೂ ಪಂಡಿತರಿಗೂ ಅವನು ಆಶ್ರಯದಾತನು. ಅವನ ಆಳಿಕೆಯಲ್ಲಿ ಕನ್ನಡ, ತೆಲುಗು, ತಮಿಳು ಮುಂತಾದ ದೇಶಭಾಷೆಗಳು ಅಭಿವೃದ್ಧಿ ಹೊಂದಿದುವು. ಸಂಸ್ಕೃತ ಗ್ರಂಥಗಳು ಅನೇಕವಾಗಿ ಅಸ್ತಿತ್ವದಲ್ಲಿ ಬಂದುವು. ರಾಯನು ಧರ್ಮವತ್ಸಲನು. ಧರ್ಮಾಚರಣೆಯಲ್ಲಿಯೂ ಧರ್ಮಗುರುಗಳಲ್ಲಿಯೂ ತುಂಬ ಆಸಕ್ತಿಯುಳ್ಳವನು. ಅವನ ಆಸ್ಥಾನದಲ್ಲಿ ಶ್ರೀವ್ಯಾಸರಾಯರು, ತಾತಾಚಾರ್ಯರು ಮುಂತಾದ ಘನಪಂಡಿತರಿದ್ದರು. ಬೇರೆ ದೇಶಗಳಿಂದ ಪಂಡಿತರು ಬಂದು ವಿಜಯನಗರದ ಆಸ್ಥಾನದಿಂದ ಮನ್ನಣೆ ಪಡೆಯುತ್ತಿದ್ದರು. ಅಂಥವರಲ್ಲಿ ಘೂರ್ಜರದೇಶದ ಶ್ರೀವಲ್ಲಭಾಚಾರ್ಯರೊಬ್ಬರು. ಅರಸು ಶ್ರೀವೈಷ್ಣವನಾದರೂ ಮತತ್ರಯದ ವಿಷಯದಲ್ಲಿ ಪೂರ್ಣ ಸಹಿಷ್ಣುತೆಯಿಂದ ನಡೆಯುತ್ತಿದ್ದನು. ವಿಧರ್ಮೀಯರಲ್ಲಿಯೂ ಅವನು ಸಮಾನ ಮನಸ್ಸುಳ್ಳವನು. ಇವನಾಳಿಕೆಯಲ್ಲಿ ಸಂಗೀತ, ಶಿಲ್ಪಕಲೆ ಮುಂತಾದ ಕಲೆಗಳಿಗೆ ಉತ್ತೇಜನ ದೊರೆಯಿತು. ಕೃಷಿಕರ್ಮಕ್ಕೆ ಸಹಾಯವಾಗಬೇಕೆಂದು ಕೃಷ್ಣರಾಯನು ಅನೇಕ ಕೆರೆಕಾಲುವೆಗಳನ್ನು ಏರ್ಪಡಿಸಿದನು. ಸಾಮ್ರಾಜ್ಯದೊಳಗಿನ ಹಳ್ಳಿಗಳೂ ಪಟ್ಟಣಗಳೂ ಸುಖ ಸಮೃದ್ಧಿಯಿಂದ ಕಂಗೊಳಿಸಿದುವು. ಕೃಷ್ಣರಾಯನ ಸಾಮ್ರಾಜ್ಯದ ಹಾಗು

ರಾಜಧಾನಿಯ ವೈಭವವನ್ನು ಅನೇಕ ಜನ ಪರದೇಶದ ಪ್ರಯಾಣಿಕರು ವರ್ಣಿಸಿದುದುಂಟು. ಬಾರ್ಬೋಸಾ ಎಂಬ ಪ್ರವಾಸಿಯು ವಿಜಯನಗರದ ವಿಷಯದಲ್ಲಿ ಅಂದುದು,

"Narasinga (Krishnadevaraya) has in this city very large and handsome palaces with numerous courts. There are also in this city many other palaces of great lords who live there...The streets and squares are very wide They are constantly filled with an innumerable crowd of all nations and creeds.... There is an infinite trade in the city.........."

"ನರಸಿಂಗನು (ಕೃಷ್ಣರಾಯನು) ಈ ಪಟ್ಟಣದಲ್ಲಿರುವ, ದಿವಾಣಗಳುಳ್ಳ ಭವ್ಯವಾದ ಸುಂದರ ಅರಮನೆಗಳಿಗೆ ಒಡೆಯನಾಗಿರುವನು ಇವಲ್ಲದೆ, ಆ ಊರಲ್ಲಿ, ಸಿರಿವಂತರಿರುವ ಎಷ್ಟೋ ಹರ್ಮ್ಯಗಳಿರುವುವು. ರಾಜಧಾನಿಯೊಳಗಿನ ಬೀದಿಗಳೂ ಚೌಕುಗಳೂ ವಿಸ್ತಾರವಾಗಿರುವುವು ವಿವಿಧದೇಶಗಳಿಂದ ಬಂದ ಪ್ರಯಾಣಿಕರಿಂದಲೂ ವಿವಿಧ ಧರ್ಮದವರಿಂದಲೂ ಈ ಬೀದಿಗಳು ಯಾವಾಗಲು ಕಿಕ್ಕಿರಿದು ಹೋಗುತ್ತಿವೆ. ಈ ಪಟ್ಟಣದಲ್ಲಿ ವ್ಯಾಪಾರವು ಬಹು ದೊಡ್ಡ ಪ್ರಮಾಣದಿಂದ ನಡೆಯುವುದು. ......"

## ಅಚ್ಯುತರಾಯ.

(೧೫೩೦-೧೫೪೨)

ಕೃಷ್ಣದೇವರಾಯನಿಂದ ಪ್ರಾರಂಭವಾದ ಸಾಮ್ರಾಜ್ಯದ ಸಂಪತ್ತು ರಾಕ್ಷಸದಂಗಡಿಯ ವರೆಗೆ ಅವ್ಯಾಹತವಾಗಿಯೆ ಅಭಿವೃದ್ಧಿ ಪಡೆಯಿತು. ಅಚ್ಯುತರಾಯನು, ವ್ಯಾಸರಾಯ ವಾದಿರಾಜ ಮುಂತಾದ ಘನ ವಿದ್ವಾಂಸರಲ್ಲಿ, ಕೃಷ್ಣದೇವರಾಯನಂತೆಯೆ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದನು. ವ್ಯಾಸಯೋಗಿಗಳ ಮತದಂತೆಯೆ ಸಾಮ್ರಾಜ್ಯ ಶಕಟವನ್ನು ಮುಂದೂಡಿದನು.

ಶ್ರೀವಾದಿರಾಜರು ಅಚ್ಯುತರಾಯನನ್ನು ಉಡುಪಿಗೆ ಕರೆದುಕೊಂಡು ಹೋಗಿ, ಅಲ್ಲಿ ಗುಡಿಯ ಜೀರ್ಣೋದ್ಧಾರ, ಮಧ್ವಸರೋವರದ ಬಂಧನ

ಮುಂತಾದವುಗಳನ್ನು, ಅವನ ಔದಾರ್ಯದ ಮೂಲಕ ನೆರವೇರಿಸಿಕೊಂಡರೆಂದು ತಿಳಿಯುತ್ತದೆ ಅಚ್ಯುತರಾಯನ ವಿಜಯನಗರವನ್ನು ಪೇಜನೆಂಬ ಪ್ರವಾಸಿಯು ವರ್ಣಿಸಿದುದು,

"Going forward, you have a broad and beautiful street full of rows of fine houses and streets, and it is to be understood that the houses belong to men rich enough to afford such. In the street live many merchants and there you will find all sorts of rubies and diamonds and emeralds and pearls and seed-pearls and clothes and every other sort of things there is on earth and that you may wish to buy"

"In this city you will find men belonging to every nation and people because of the great trade which it has and the many precious stones there, principally diamonds. I could not see the entire city, because it lies between several ranges of hills. What I saw from thence seemed to me as large as Rome."

"The streets and markets are full of laden oxen without count so that you cannot get along for them and in many streets you come upon so many of them, you have to wait for them to pass or else have to go by another way."

"Of the city of Bisnaga they say that there are more than a hundred thousand dwelling houses in it."

" ಮುಂದಕ್ಕೆ ಸಾಗುವಷ್ಟರಲ್ಲಿ, ಸುಂದರವಾದ ಮನೆಗಳ ಸಾಲುಗಳೂ ಸೊಗಸಾದ ಬೀದಿಗಳೂ, ಕಂಗೊಳಿಸುವುವು. ಅವುಗಳಲ್ಲಿ ಸಿರಿವಂತರಷ್ಟೇ ಇರುವರೆಂದು ತಿಳಿಯುತ್ತದೆ. ಆ ಬೀದಿಗಳಲ್ಲಿ ವರ್ತಕರಿರುವರು. ಅಲ್ಲಿ ದೊರೆಯುವ ವಸ್ತುಗಳೆಂದರೆ, ಮಾಣಿಕ, ವಜ್ರ, ಪಚ್ಚೆ, ಆಣೆಮುತ್ತುಗಳು ಮತ್ತು ಬಟ್ಟೆಗಳು. ಇಡೀ ಪೃಥ್ವಿಯಲ್ಲಿ ದೊರೆಯಬಹುದಾದ ಎಲ್ಲ ವಸ್ತುಗಳು ಅಲ್ಲಿ ಸಿಗುವುವು. ನಿಮಗೆ ಬೇಕಾಗಿರುವ ಎಲ್ಲ ತರಹದ ಪದಾರ್ಥಗಳೂ ಅಲ್ಲಿ ದೊರೆಯುತ್ತವೆ."

" ಪ್ರತಿಯೊಂದು ದೇಶದ ಜನರನ್ನು ಈ ಪಟ್ಟಣದಲ್ಲಿ ಕಾಣಬಹುದು. ವ್ಯಾಪಾರಕ್ಕಾಗಿ, ಆ ಜನರು ಇಲ್ಲಿ ಬರುವರು. ವಜ್ರದ ವ್ಯಾಪಾರಕ್ಕಾಗಿ ಬರುವವರೂ ಉಂಟು. ಇಲ್ಲಿ, ಪ್ರಾಮುಖ್ಯವಾಗಿ, ಮಾಣಿಕಗಳು ಹೇರಳವಾಗಿ ದೊರೆಯುವುವು. "

" ಈ ಪಟ್ಟಣವು ಅನೇಕ ಗುಡ್ಡಗಳ ಮಧ್ಯದಲ್ಲಿರುವುದರಿಂದ ಅದರ ಎಲ್ಲ ಭಾಗಗಳನ್ನು, ನನಗೆ ನೋಡುವುದಾಗಲಿಲ್ಲ. ನಾನು ನೋಡಿದುದನ್ನಷ್ಟೇ ತುಲನಾತ್ಮಕ ದೃಷ್ಟಿಯಿಂದ ಹೇಳಬೇಕಾದರೆ, ಈ ಪಟ್ಟಣವು ರೋಮದಷ್ಟು ವಿಸ್ತಾರವಾಗಿರಬೇಕು. "

" ಬೀದಿಗಳಲ್ಲಿಯೂ ಪೇಟೆಗಳಲ್ಲಿಯೂ ಅಸಂಖ್ಯ ಎತ್ತುಗಳು ತುಂಬಿಕೊಂಡಿರುತ್ತವೆ. ಅವುಗಳ ಸಂದಣಿಯ ಮೂಲಕ ನಿಮಗೆ ಮುಂದೆ ಸಾಗುವುದೇ ಅಸಾಧ್ಯ. ಕೆಲವು ಬೀದಿಗಳಲ್ಲಂತೂ ಅವುಗಳ ಸಲುವಾಗಿ ದಾರಿ ನೋಡುತ್ತ ನಿಲ್ಲಬೇಕಾಗುತ್ತದೆ. ಇಲ್ಲವೆ ಆ ಬೀದಿಯನ್ನು ಬಿಟ್ಟು ಬೇರೊಂದು ದಾರಿಯಿಂದ ಹೋಗಬೇಕಾಗುತ್ತದೆ."

" ವಿಜಯನಗರದಲ್ಲಿ ಜನರು ವಾಸವಾಗಿರುವ ೧೦೦೦೦೦ ಮನೆಗಳಿರುವುವೆಂದು ಹೇಳುತ್ತಾರೆ."

## ಸದಾಶಿವರಾಯ.

( ೧೫೪೨—೧೫೬೭ ).

ಸದಾಶಿವರಾಯನು ನಾಮಧಾರಿಯಾದ ವಿಜಯನಗರದ ಅರಸು. ರಾಜ್ಯಸೂತ್ರಗಳೆಲ್ಲ ಅಳಿಯ ರಾಮರಾಯನ ಕೈಯಲ್ಲಿದ್ದುವು. ರಾಮರಾಯನ ಆಕ್ರಮಣಶೀಲತೆಯಿಂದ ರಾಕ್ಷಸದಂಗಡಿಯ ಅನಾಹುತವು ಒದಗಿತು.

ಆದರೂ ರಾಕ್ಷಸದಂಗಡಿಯ ವರೆಗೆ ವಿಜಯನಗರ ಸಾಮ್ರಾಜ್ಯದಲ್ಲಿ ಯಾವ ತರಹದ ನ್ಯೂನತೆಯೂ ಉಂಟಾಗಲಿಲ್ಲ. ರಾಮರಾಯನಿಂದ, ಪಂಡಿತರು, ಕವಿಗಳು, ಶಿಲ್ಪಿಗರೇ ಮುಂತಾದವರು ಉತ್ತೇಜನವನ್ನು ಪಡೆದರು. ರಾಮರಾಯನು ಕವಿಯಾಗಿದ್ದನೆಂದು ಕೆಲವರನ್ನುವುದುಂಟು. ರಾಕ್ಷಸದಂಗಡಿಯಲ್ಲಿ ರಾಮರಾಯನು ಮರಣ ಹೊಂದಿದನು. "ರಾಯಸಂಸ್ಥಾನವು ವಿಸ್ಖಳಿತವಾಯಿತು." ಅರಸು ಮನೆತನದವರು ವಿಜಯನಗರವನ್ನು ತೊರೆದು ಓಡಿ ಹೋದರು. ವಿಜಯನಗರವು ಹಾಳಾಯಿತು. ವಿಜಯನಗರದಲ್ಲಿದ್ದು, ಕಣ್ಣಾರೆ ಕಂಡ ವಿಷಯವನ್ನು ವಿರೂಪಾಕ್ಷ ಪಂಡಿತನು ಚೆನ್ನಬಸವ ಪುರಾಣದಲ್ಲಿ ವಿವರಿಸಿದುದು,

ನರಸಿಂಹನಂಶದಳಿಯರ್ ಮೂವರುಂ ಪೋಗಿ |
ತುರುಕರೊಳ್ ಕಾದಿ ಮಡಿಯಲ್ಕೆ ಪಿರಿಯವನ ತಲೆ |
ನಿರುತದಿಂ ಕಾಶಿಯೊಳ್ ಪೂಜೆಗೊಂಬುದು ಬಳಿಕ್ಕುಳಿದವರೆ ತಮ್ಮ ಪುರದೆ ||
ಇರದೋಡಿ ಪೋಗಲಾಪಟ್ಟಣಕೆ ಬೇಗದಿಂ |
ತುರುಕರ್ಬೈತಂದು ಸೆರೆಗಳ ಪಿಡಿದು ಸೂರಾಡಿ |
ಭರದಿಂದೆ ಸಕಲರಂ ಸಂಹರಿಪರೆಲೆ ಸಿದ್ಧರಾಮೇಶ ಕೇಳೆಂದನು ||

ಎಲೆಸಿದ್ಧರಾಮೇಶ ಕೇಳಿನ್ನು ಹಂಪೆಯ |
ನೆಲೆನೆಲೆಯ ಗೋಪುರವನಳಿದು ಮಾತಂಗದಿಂ |
ದಳುಕದಾವೀರೇಶನಂ ಕಿತ್ತು ವಿಷ್ಣು ಮೊದಲಾದ ಪ್ರತಿಮೆಗಳನೊಡೆದು ||
ಬಳಿಕಲ್ಲಿ ಸಕಲವಂ ಸಂಹರಿಸಿ ಕೆಲದಿನಂ |
ಕಳಿದು ಬಳಿಕಲ್ಲಿಂದೆ ಸಂತಸದೆ ತಂತಮ್ಮ |
ನೆಲೆಗಳ್ಗೆ ಪೋಗಲಾಪಟ್ಟಣದ ರಾಜ್ಯದೊಳಗೇನೆಂಬೆನದ್ಭುತವನು ||

ಪೆನುಗೊಂಡೆಯು ವಿಜಯನಗರ ಸಾಮ್ರಾಜ್ಯದ ನೆಲೆವೀಡಾಯಿತು. ಮುಂದೆ ಎರಡೇ ವರ್ಷಗಳಲ್ಲಿ ಸದಾಶಿವರಾಯನ ಕೊಲೆಯಾಯಿತು.

## ತಿರುಮಲರಾಯ.

(೧೫೬೭-೧೫೭೨)

ಸದಾಶಿವರಾಯನ ನಂತರ ಅಳಿಯ ರಾಮರಾಯನ ತಮ್ಮನಾದ ತಿರುಮಲರಾಯನು ಪಟ್ಟವನ್ನೇರಿದನು. ತಿರುಮಲನು ಪರಾಕ್ರಮಿಯೂ

ಕರ್ತೃತ್ವಶಾಲಿಯೂ ಆಗಿದ್ದರೂ ದೈವವು ಅವನಿಗೆ ಅನುಕೂಲವಾಗಿರಲಿಲ್ಲ. ಆದರೂ ಅವನು ವಿಸ್ಖಳಿತ ಸಾಮ್ರಾಜ್ಯವನ್ನು ಅಚ್ಚುಕಟ್ಟಾಗಿರಿಸಲು ಹೆಣಗಿದನು. ಮಾಂಡಲಿಕರು ಸ್ವತಂತ್ರರಾಗತೊಡಗಿದರು. ಆದುದರಿಂದ, ಅವನು ರಾಜ್ಯದಲ್ಲಿ ಕನ್ನಡ, ತೆಲುಗು, ತಮಿಳು ಎಂಬ ಭಾಗಗಳನ್ನು ರಚಿಸಿ ಅವುಗಳ ಮೇಲೆ ತನ್ನ ಮಕ್ಕಳನ್ನು ರಾಜಪ್ರತಿನಿಧಿಯನ್ನಾಗಿ ನಿಯಮಿಸಿದನು. ಅಳಿದುಳಿದ ಸಾಮ್ರಾಜ್ಯಕ್ಕೆ ಇದರಿಂದ ಕೆಲಮಟ್ಟಿಗೆ ಸ್ಥೈರ್ಯವು ಬಂದಿತು. ತಿರುಮಲನು ವಿದ್ಯಾಪಕ್ಷಪಾತಿಯಾಗಿದ್ದನು. ಸ್ವತಃ ಕವಿಯು. ಕವಿಗಳ ಆಶ್ರಯದಾತನು.

## ಶ್ರೀರಂಗರಾಯ.

( ೧೫೭೨-೧೫೮೫ )

ತಿರುಮಲನ ತರುವಾಯ ಅವನ ಹಿರಿಯ ಮಗನಾದ ಶ್ರೀರಂಗರಾಯನು ಪಟ್ಟವನ್ನೇರಿದನು. ಶ್ರೀರಂಗನಲ್ಲಿ ಶೌರ್ಯ ಔದಾರ್ಯಾದಿ ಗುಣಗಳು ನೆಲಸಿದ್ದುವು. ತನ್ನ ಮೇಲೆ ಏರಿ ಬರುವ ಮುಸಲ್ಮಾನರನ್ನು ಅವನು ಸೋಲಿಸಿ ಹಿಂದೂಡಿದನು. "ರಂಗನ ರಣಹಲಿಗೆಗಳು ಕೆಲಕಾಲ ವಿಜಾಪುರದವರ ಕಿವಿಗಳನ್ನು ಗಡಚಿಕ್ಕಿದುವು." ಆದರೂ ಪ್ರತಿಕೂಲವಾದ ದೈವವು ಶ್ರೀರಂಗನ ಬೆನ್ನ ಬಿಡಲಿಲ್ಲ. ಶ್ರೀರಂಗನು ದಯಾಲುವೂ ಉದಾರನೂ ಶೂರನೂ ಆಗಿದ್ದನು. ಧರ್ಮಾಚರಣೆಯಲ್ಲಿ ಆಸಕ್ತಿಯುಳ್ಳವನೆಂದು ಅವನು ಬಿಟ್ಟ ದತ್ತಿಗಳು ಹೊಗಳುತ್ತಿವೆ.

## ವೆಂಕಟಪತಿದೇವರಾಯ.

( ೧೫೮೫-೧೬೧೫ )

ವೆಂಕಟಪತಿಯು ಆರುವೀಡು ಮನೆತನದ ವಿಜಯನಗರ ಸಮ್ರಾಟರ ಮಸ್ತಕಮಣಿಯು. ಪಟ್ಟವನ್ನೇರಿದ ಕೂಡಲೆ ಅವನು ಮುಸಲ್ಮಾನರ ಮೇಲೆ ದಾಳಿಗಳನ್ನಿಕ್ಕತೊಡಗಿದನು. ವೆಂಕಟನು ಸುದೈವಿಯು. ತಂದೆ ಅಣ್ಣಂದಿರಿಗೆ ಬೆನ್ನ ಹತ್ತಿದ ದುರ್ದೈವವು ವೆಂಕಟಪತಿಯನ್ನು ಬೆನ್ನಟ್ಟಲಿಲ್ಲ. ಅವನು ಕೂಡಲೆ ಪೂರ್ವದ ಎಲ್ಲ ಪ್ರದೇಶಗಳನ್ನು ಮುಸಲ್ಮಾನರಿಂದ ಗೆದ್ದು ವೈಭವದಿಂದ ಆಳತೊಡಗಿದನು. ಸಾಮ್ರಾಜ್ಯದ ವ್ಯಾಪಾರವು ಬೆಳೆಯಿತು. ಆ ಕಾಲದಲ್ಲಿ ಪುಲಿಕತ್ತು ಮುಖ್ಯ ಬಂದರವಾಗಿದ್ದಿತು. ಕೃಷ್ಣದೇವರಾಯನಲ್ಲಿ ನೆಲಸಿದ

ಬಹುತರ ಎಲ್ಲ ಗುಣಗಳು ವೆಂಕಟಪತಿಯಲ್ಲಿದ್ದುವು. ಅವನಂತೆಯೆ, ವೆಂಕಟನು ವಿದ್ಯಾವಂತರಿಗೆ ಕೊಡುಗೈದೊರೆಯು. ಅವನ ಕಾಲದಲ್ಲಿ ಕನ್ನಡ, ತೆಲುಗು, ಸಂಸ್ಕೃತ ವಾಙ್ಮಯಗಳು ಅಭಿವೃದ್ಧಿಹೊಂದಿದುವು. ಧರ್ಮಾಚರಣೆಗೆ ಉತ್ತೇಜನ ದೊರೆಯಿತು. ವೆಂಕಟನು ಚಿತ್ರಕಲೆಯಲ್ಲಿ ಅಭಿರುಚಿಯುಳ್ಳವನು. ಪರದೇಶದ ಚಿತ್ರಗಾರರಿಗೂ ಆಶ್ರಯ ಕೊಟ್ಟನು. ಕೃಷಿಕರ್ಮಕ್ಕೆ ಸಹಾಯ ವಾಗಬೇಕೆಂದು ಕೆರೆಕಾಲುವೆಗಳ ವ್ಯವಸ್ಥೆ ಮಾಡಿದನು. ವೆಂಕಟನು ರಾಜ ಕಾರಣ ಪಟುವು. ಪೋರ್ತುಗಾಲದ ಅರಸನ ಸಂಗಡಲೂ, ಅಕಬರನ ಸಂಗಡಲೂ ಜಾಗರೂಕತೆಯಿಂದ ಸಖ್ಯ ಬೆಳಸಿ ಸಾಮ್ರಾಜ್ಯವನ್ನು ಕಾಯ್ದನು. ಸ್ವಲ್ಪದರಲ್ಲಿ ಹೇಳಬೇಕಾದರೆ ವೆಂಕಟಪತಿಯ ಕಾಲದಲ್ಲಿ ಮೃತಪ್ರಾಯವಾದ ವಿಜಯನಗರದ ಸಾಮ್ರಾಜ್ಯವು ಅರೆಕ್ಷಣವಾದರೂ ಪುನರುಜ್ಜೀವನವನ್ನು ಪಡೆಯಿತೆಂದು ಧಾರಾಳವಾಗಿ ಹೇಳಬಹುದು.

---

## ೪ ರಾಮಾನುಜಮತ ಮತ್ತು ಶ್ರೀವೈಷ್ಣವದೈವತಗಳು.

ಶ್ರೀರಾಮಾನುಜಾಚಾರ್ಯರು ತಮಿಳು ನಾಡಿನವರು. ಅವರು ವಿಶಿಷ್ಟಾದ್ವೈತಮತದ ಪ್ರವರ್ತಕರು. ಅವರ ಅನುಯಾಯಿಗಳಿಗೆ ಶ್ರೀವೈಷ್ಣವರೆಂದೆನ್ನುವರು. ತತ್ವಜ್ಞಾನದ ದೃಷ್ಟಿಯಿಂದ ನೋಡಿದರೆ, ರಾಮಾನುಜಮತವು ಶಾಂಕರಮಾಧ್ವಮತಗಳಿಂದ ಕೊಂಚ ಭಿನ್ನವಾದುದು. ಔಪಾಸನೆಯ ದೃಷ್ಟಿಯಿಂದ ನೋಡಿದರೆ, ಶ್ರೀವೈಷ್ಣವರು ಶಾಂಕರಮತಾನುವರ್ತಿಗಳಿಂದ ತೀರ ಭಿನ್ನರು. ರಾಮಾನುಜ ಮತದಂತೆ, ವಿಷ್ಣುವೊಬ್ಬನೇ ಪರದೈವತ. ವಿಷ್ಣುವಿನ ನಾಮವುಳ್ಳ, ರಾಮ, ರಂಗ, ಕೇಶವ, ಶ್ರೀನಿವಾಸ, ನಾರಾಯಣ, ಅನಂತಶಯನ ಮೊದಲಾದ ವಿಗ್ರಹಗಳನ್ನಷ್ಟೇ ಅವರು ಆರಾಧಿಸುವರು. ಇತರ ದೈವತಗಳು ವಿಷ್ಣುವಿನ ಕಿಂಕರರು. ಆಚಾರ್ಯರ ಈ ಬೋಧನೆಯಿಂದ ಅಲ್ಲಿಯ ಅರಸನಾದ ಕುಲೋತ್ತುಂಗಚೋಳನು ರೊಚ್ಚಿಗೆದ್ದನು. ಚೋಳರು ಶೈವರು. ರಾಮಾನುಜಾಚಾರ್ಯರು ತಮ್ಮ ತಾಯಿನಾಡನ್ನು ತೊರೆದು, ಕಾವೇರಿಯನ್ನು ದಾಟಿ ಶಾಲಿಗ್ರಾಮವೆಂಬ ಒಂದು ಹಳ್ಳಿಯಲ್ಲಿರತೊಡಗಿದರು. ಆ ಗ್ರಾಮವು ಹೊಯ್ಸಳರ ರಾಜ್ಯದಲ್ಲಿದ್ದಿತು. ಬರಬರುತ್ತ ರಾಮಾನುಜಾಚಾರ್ಯರ ವರ್ಚಸ್ಸು ಬೆಳೆಯಲಾರಂಭಿಸಿ, ಜೈನನಾದ ಹೊಯ್ಸಳ ಬಿಟ್ಟಿದೇವನು ಅವರ ಶಿಷ್ಯನಾದನು. ಬಿಟ್ಟಿಗನು ವಿಷ್ಣುವರ್ಧನನೆಂಬ ಶ್ರೀವೈಷ್ಣವ ಹೆಸರನ್ನು ತಳೆದು, ತನ್ನ ರಾಜ್ಯದಲ್ಲಿ ರಾಮಾನುಜಮತವನ್ನು ವಿಸ್ತರಿಸಿದನು. ಬೇಲೂರು, ತಳಕಾಡು, ಬನ್ನೂರು, ವಿಜಯಪುರ ಮತ್ತು ಗದಗುಗಳಲ್ಲಿ ಬಿಟ್ಟಿಗನೇ ಪಂಚನಾರಾಯಣರನ್ನು ಸ್ಥಾಪಿಸಿ, ದೇವಾಲಯಗಳನ್ನು ಕಟ್ಟಿಸಿದನು. ಬೇಲೂರಿನ ಚೆನ್ನಿಗನಾರಾಯಣನ ಪ್ರತಿಷ್ಠಾಪನೆಯು ಸುಮಾರು ೧೧೧೭ನೆಯ ಇಸ್ವಿಯಲ್ಲಿ ಆಯಿತೆಂದು ಹೇಳಬಹುದು. ಬೇಲೂರಿನ ಚೆನ್ನಕೇಶವನೇ ವಿಷ್ಣುವರ್ಧನನ ಕುಲದೈವತನಾದನು. ಬಿಟ್ಟಿಗನು ಪರಾಕ್ರಮ-

ಶಾಲಿಯು. ಅವನು ಉತ್ತರದಲ್ಲಿ ಕಾದಂಬರ ರಾಜ್ಯವನ್ನೊಳನುಗ್ಗಿ, ಕೆಲಕಾಲ ಬಂಕಾಪುರವನ್ನು ತನ್ನ "ರಾಜಧಾನಿ" ಯನ್ನು ಮಾಡಿಕೊಂಡನು. ಮೇಲಾಗಿ ಅವನು ಹಾನುಗಲ್ಲು, ಹಲಸಿಗೆಯಿಂದ ಕೃಷ್ಣೆ (ಪೆರ್ದೊರೆ) ಯ ವರೆಗೆ ದಾಳಿಯನ್ನಿಕ್ಕಿದನು. ಈ ವಿಷ್ಣುವರ್ಧನನ ಪರಾಕ್ರಮದ ವಿಷಯದಲ್ಲಿ ಬೇಲೂರಿನ ಒಂದು ಶಿಲಾಲೇಖದಲ್ಲಿರುವುದು,

ಪಡುವಲ್ ಪಶ್ಚಿಮವಾರ್ಧಿ ಮೂಡನೆಗಳ್ದಾ ಕಾಂಚಿಪುರಂ ತೆಂಕಸೋ |
ಳ್ಪೊಡೆ ಸಚ್ಛಂದಮಂದಮಾರುತಚಳಶ್ರೀಖಂಡಷಂಡಾಚಲಂ ||
ಬಡಗಲ್ ಪೆರ್ದೊರೆ ಮೇರೆಯಾಗೆ ನೆಲನಂ ವಿಕ್ರಾಂತದಿಂದಾಳ್ದನೆಂ |
ದೊಡೆ ಪೋಲ್ವನ್ನನದಾವನೀ ಭುಜಬಳಭ್ರಾಜಿಷ್ಣುವಂ ವಿಷ್ಣುವಂ ||

ಆ ಮೇಲೆ ಹೊಯ್ಸಳರ ೨ನೆಯ ವೀರಬಲ್ಲಾಳನು ಕಳಚೂರಿಯರನ್ನು ಲೊಕ್ಕಿಗೊಂಡಿ (ಗದುಗಿನ ಹತ್ತರಿರುವ ಲಕ್ಕುಂಡಿ) ಯಲ್ಲಿ ಸದೆ ಬಡಿದು ಅಲ್ಲಿ ತನ್ನ ನೆಲೆವೀಡನ್ನು ಸ್ಥಾಪಿಸಿದನು. ಲಕ್ಕುಂಡಿಯ ಕಾಳೆಗದಲ್ಲಿ ವೀರ ಬಲ್ಲಾಳನು ಪಡೆದ ವಿಜಯದ ಬಗ್ಗೆ ಅರಸಿಯಕೆರೆಯ ಒಂದು ಶಾಸನದಲ್ಲಿ ರುವುದು,

ಪುದಿದಿರ್ದಟ್ಟಳೆ ಪೆರ್ಜಿದಾಳ್ಪೆರೆಯ ಗುರ್ವಾಗಿರ್ದ ಮೇಲ್ಕೊತ್ತಳಂ |
ಕದನಕ್ಕದ್ಭುತಮಪ್ಪ ಡೆಂಕಣಿ ಕರಂ ಗುಣ್ಪಾಳ್ವಗಳ್ ಕಾದಿಹೋ ||
ಗದೆನಿಪ್ಪಗ್ಗದ ದುರ್ಗದೊಂದು ಬಲದಿಂದಂ ಜೈತುಗಂ ಕಾದೆ ಬೇ |
ಗದೆ ಕೊಂಡಂ ಕಲಿ ಲೊಕ್ಕಿಗೊಂಡಿಯನದಂ ಬಲ್ಲಾಳ ಭೂಪಾಲಕಂ ||

ಅಣ್ಣಿಗೇರಿಯೂ ಕೆಲಕಾಲ ಹೊಯ್ಸಳರ ರಾಜಧಾನಿಯಾಯಿತು. ಹಾನಗಲ್ಲಿ ಹಾಗೂ ಗೋವೆಯ ಕಾದಂಬರೂ ವೀರಬಲ್ಲಾಳನತುತ್ತಿಗೆ ಬಿದ್ದರು. ಈ ಹೊಸ ಹೊಯ್ಸಳ ರಾಜ್ಯದಲ್ಲಿಯೂ ರಾಮಾನುಜ ಮತವೂ ಸಂಪ್ರದಾಯಗಳೂ ಹರಡಲಾರಂಭಿಸಿದುದು ಸ್ವಾಭಾವಿಕ. ಕಾದಂಬರು ಶೈವರು. ವೀರಬಲ್ಲಾಳನ ಕಾಲದಲ್ಲಿ, ಕೂಡಿಯೆ, ಗೋವೆ ಪಲಾಸಿಕೆಗಳಲ್ಲಾಳುತ್ತಿದ್ದ, ಗೋವೆಯ ಕಾದಂಬ ಮನೆತನದ, ಅಣ್ಣ ತಮ್ಮಂದಿರಾದ ಶಿವಚಿತ್ತ ಮತ್ತು ವಿಷ್ಣುಚಿತ್ತರ ಹೆಸರು ನೆನೆದರೆ, ಈ ವಿಷಯವು ಕೊಂಚ ವಿಶದವೆನಿಸಬಹುದು. ಕಾದಂಬರ ಲಯವಾದೊಡನೆ ಈಚೆಯ ಭಾಗದ ಒಡೆತನವು ವಿಜಯನಗರದವರಿಗೆ

ಬಂದಿತು. ಹೊಯ್ಸಳರಂತೆ ವಿಜಯನಗರದವರೂ ಯದುಕುಲದವರು. ಮೇಲಾಗಿ ವಿಜಯನಗರದವರು ಹೊಯ್ಸಳರ "ಪೂರ್ವದ ಮರ್ಯಾದೆಯನ್ನು ಪೊರೆಯುವವರು." ಈ ಪೂರ್ವದ ಮರ್ಯಾದೆಯಲ್ಲಿ ಬೇಲೂರ ಚೆನ್ನಕೇಶವನ ಆರಾಧನೆಯೂ ಒಂದಾಗಿರಬಹುದು. ಆದುದರಿಂದ ವಿಜಯನಗರದ ನರಪತಿಗಳು ಬೇಲೂರ ಚೆನ್ನಿಗರಾಯನಿಗೆ ಕುಲದೇವರಂತೆ ನಡೆದುಕೊಂಡುದು ಕಂಡುಬರುತ್ತದೆ.

ಮೊದಲು ಮೊದಲು ವಿಜಯನಗರದ ರಾಯರು ಶೈವರು. ಹರಿಹರ ಬುಕ್ಕರ ರಾಜಗುರುವು ಕಾಳಾಮುಖ ಪಂಥದ ಕ್ರಿಯಾಶಕ್ತಿಪಂಡಿತದೇವನು. ಅವರ ಧರ್ಮಗುರುಗಳು ಶೃಂಗೇರಿಯ ವಿದ್ಯಾಶಂಕರ ವಿದ್ಯಾರಣ್ಯರು. ಪಂಪಾಪತಿ ವಿರೂಪಾಕ್ಷನೇ ಅವರ ಕುಲದೈವತ. ವಿಜಯನಗರದವರ ಶಾಸನಗಳಿಗೆ ಆ "ಶ್ರೀವಿರೂಪಾಕ್ಷ"ನ ಅಂಕಿತವಿದ್ದುದು ಕಂಡು ಬರುತ್ತದೆ. ಆದರೆ, ಸಂಗಮ ವಂಶದ ವಿರೂಪಾಕ್ಷನೆಂಬ ರಾಯನು ಶ್ರೀವೈಷ್ಣವದೀಕ್ಷೆಯನ್ನು ಪಡೆದನು. ಕೂಡಲೆ ವಿಜಯನಗರ ಸಾಮ್ರಾಜ್ಯದಲ್ಲಿ ರಾಮಾನುಜ ಮತ ಹಾಗೂ ಶ್ರೀವೈಷ್ಣವ ಸಂಪ್ರದಾಯಗಳು ಹರಡಲಾರಂಭಿಸಿದುವು. ವಿರೂಪಾಕ್ಷ ರಾಯನು ಹಂಪೆಯ ವಿರೂಪಾಕ್ಷನನ್ನು ತೊರೆದು ಬೇಲೂರಿನ ಚೆನ್ನಕೇಶವನನ್ನು ತನ್ನ ಕುಲದೈವತನನ್ನಾಗಿ ಮಾಡಿಕೊಂಡನು. ಶ್ರೀವಿರೂಪಾಕ್ಷನ ಮುದ್ರಿಕೆಯನ್ನು ಬಿಟ್ಟು "ಶ್ರೀರಾಮ" ಎಂಬ ಒಪ್ಪವನ್ನು ಬಳಕೆಯಲ್ಲಿ ತಂದನು. ಈ ಸಂದರ್ಭದಲ್ಲಿ ಪ್ರಸನ್ನಾಮೃತವೆಂಬ ಗ್ರಂಥದೊಳಗಿನ ಶ್ಲೋಕವು,

**ಶ್ರೀವೈಷ್ಣವೇ ವಿರೂಪಾಕ್ಷೇ ಪ್ರಶಾಸತಿ ಮಹೀಮಿಮಾಂ ।**
**ಆಸಂಶ್ಚ್ರೀವೈಷ್ಣವಾಸ್ಸರ್ವೇ ಯಥಾ ರಾಜಾ ತಥಾ ಪ್ರಜಾಃ ॥**
**ವಿರೂಪಾಕ್ಷಾಭಿಧಾಂ ಮುದ್ರಾಂ ವಿರೂಪಾಕ್ಷೋ ವಿಹಾಯ ಚ ।**
**ರಾಜಾಂಗುಲೀಯೇ ಶ್ರೀರಾಮಮುದ್ರಾಂ ದೃಢತರಾಂ ವ್ಯಧಾತ್ ॥**

ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವರಾಯ ಮುಂತಾದವರು ಶ್ರೀವೈಷ್ಣವರು. ಅರುವೀಡು ಮನೆತನದ ಅಳಿಯ ರಾಮರಾಯ, ತಿರುಮಲರಾಯ, ವೆಂಕಟಾದ್ರಿಗಳೂ ಅವರ ಸಂತತಿಯವರೂ ಶ್ರೀವೈಷ್ಣವರೇ. ಆದುದರಿಂದ ರಾಮಾನುಜರಾದ ರಾಜಗುರುಗಳ ವರ್ಚಸ್ಸೂ ರಾಮಾನುಜಮತಾನು

ಯಾಯಿಗಳಾದ ಅರಸರ ಯಶಸ್ಸೂ, ಹದಿನಾರನೆಯ ಶತಮಾನದ ವಿಜಯ ನಗರದ ಸಾಮ್ರಾಜ್ಯದಲ್ಲಿ ಎಲ್ಲೆಲ್ಲಿಯೂ ಹರಡಿದುದು ಸ್ವಾಭಾವಿಕ. ಶ್ರೀವ್ಯಾಸ ರಾಯರಂತಹ ಮಾಧ್ವರು ರಾಮಾನುಜ ವಿಗ್ರಹವಾದ ತಿರುಪತಿಯ ವೆಂಕ ಟೇಶನನ್ನು ಒಂದು ತಪದವರೆಗೆ ಅವ್ಯಾಹತವಾಗಿ ಪೂಜಿಸಿದುದರಿಂದಲೂ ವಾದಿರಾಜರಂತಹ ಮಾಧ್ವರು ಅಂತಹ ದೈವತಗಳನ್ನು ತಮ್ಮ ತೀರ್ಥಪ್ರಬಂಧ ಮೊದಲಾದ ಗ್ರಂಥಗಳಲ್ಲಿ ಕೊಂಡಾಡಿದುದರಿಂದಲೂ, ಆ ದೇವರ ಪೂಜೆ ಅರ್ಚೆಗಳ ಸಂಪ್ರದಾಯವು ಒತ್ತರದಿಂದ ಇತ್ತ ಕಡೆಗೆ ಹಬ್ಬಿದುದು ಆಶ್ಚರ್ಯದ ಸಂಗತಿಯಲ್ಲ! ಸೋದೆಯ ಹತ್ತಿರದಲ್ಲಿ ಹುಲೇಕಲ್ಲೆಂಬ ಗ್ರಾಮವಿದೆ. ಅಲ್ಲಿ ಲಕ್ಷ್ಮೀ-ನಾರಾಯಣನ ಪುರಾತನ ದೇವಾಲಯವಿದೆ. ಅದಕ್ಕೆ ಹತ್ತಿ ಶ್ರೀವ್ಯಾಸ ರಾಯರ ಮೃತ್ತಿಕೆಯ ವೃಂದಾವನವೂ, ಅವರ ಒಬ್ಬ ಶಿಷ್ಯರ ವೃಂದಾವನವೂ ಇವೆ. ಇವೆಲ್ಲಕ್ಕೆ ಕೂಡಿ ವ್ಯಾಸರಾಯರ ಮಠವೆಂದು ಕರೆಯುವುದುಂಟು. ನಾರಾಯಣನ ಗುಡಿಯ ಮುಂದೆ ಎಡಬಲದಲ್ಲಿ ಎರಡು ತುಳಸಿಯ ಕಟ್ಟೆ ಗಳಿವೆ. ಅವುಗಳ ಮೇಲೆ ಕಲ್ಲಿನಲ್ಲಿ ಕಟೆದ ತಿನಾಮಶಂಖಚಕ್ರಗಳಿರುವುವು. ಹುಲೇಕಲ್ಲು ವ್ಯಾಸರಾಯ ಮಠದ ಬುನಾದಿಯ ಇನಾಮು ಗ್ರಾಮ!

ಕನಕದಾಸರು ಬಾಡದವರೆಂದು ಹೇಳುವುದುಂಟು. 'ಬಡದಾದಿ ಕೇಶವ'ನ ಮೂರ್ತಿಯನ್ನು ತಂದು, ಅವರು ಅದನ್ನು ಕಾಗಿನೆಲ್ಲಿಯಲ್ಲಿ ಸ್ಥಾಪಿಸಿದರೆಂದು ಆಖ್ಯಾಯಿಕೆಯುಂಟು. ಸದ್ಯಕ್ಕೆ ಬಾಡದಲ್ಲಿ ಗುಡಿಯಿಲ್ಲ. "ರಂಗನ ಬೈಲೆಂ" ಬ ಒಂದು ಹಾಳು ಸ್ಥಳವಿದೆ. ಬಾಡವು ಕಾಗಿನೆಲ್ಲಿ ಯಿಂದ ಸುಮಾರು ೩೦-೩೫ ಮೈಲು ಅಂತರದಲ್ಲಿದೆ.

ಬಾಡದಿಂದ ಒಂದು ಹರದಾರಿಯಲ್ಲಿಯೆ ಬಂಕಾಪುರವಿರುವುದು. ಅಲ್ಲಿ, ಕೇಶವದೇವರ ಪುರಾತನ ವಿಗ್ರಹವಿರುವುದು. ಆ ಕೇಶವನನ್ನು ಕುರಿತು ವಾದಿರಾಜರು ತೀರ್ಥಪ್ರಬಂಧದಲ್ಲಿ ಬರೆದುದು,

**ಶಂಖಾಂಭೋಜಗದಾಸುದರ್ಶನಧರಂ ಸಂಕೀರ್ತ್ಯಮಾನಂ ಸುರೈಃ ।**
**ಕೈಂಕರ್ಯಪ್ರಿಯಲಕ್ಷ್ಮಣೇಂದ್ರರಚಿತಾಲಂಕಾರಪೂಜೋತ್ಸವಂ ॥**
**ಪಂಕೋದ್ಭೂತಸಮಾನಲೋಚನಯುಗಂ ಬಂಕಾಪುರಶ್ರೀಕರಂ ।**
**ಹುಂಕಾರಧ್ವನಿಧಿಕ್ಕೃತಜನಾತಂಕಂ ಭಜೇ ಕೇಶವಂ ॥**

ಹೊಸತಾಗಿ ಕಟ್ಟಿದ ಆ ಬಂಕಾಪುರದ ಕೇಶವನ ಗುಡಿಯಲ್ಲಿ, ನರಸಿಂಹನ ವಿಗ್ರಹವನ್ನು ಇಟ್ಟಿರುವರು. ಆ ಮೂರ್ತಿಯನ್ನು ಹುಡುಕಿತೆಗೆದು ಅಲ್ಲಿ ಮೊನ್ನೆ ಮೊನ್ನೆ ಇರಿಸಿರುವರಂತೆ. ಮೇಲಣ ಶ್ಲೋಕದಲ್ಲಿ, ನರಸಿಂಹನ ವಿಶಿಷ್ಟ ಧ್ವನಿಯನ್ನು ಕೇಶವನ ಸಂಬಂಧದಲ್ಲಿ ಅಂದಿರುವುದರಿಂದ ಮೊದಲೂ ಆ ನರ ಸಿಂಹನ ವಿಗ್ರಹವು ಕೇಶವದೇವರ ಸಮೀಪದಲ್ಲಿಯೆ ಇದ್ದಿರಬಹುದಾಗಿ ತೋರುತ್ತದೆ. ಪೂರ್ವದಲ್ಲಿ ನರಸಿಂಹ ದೇವರು ಈಚೆಯ ಪ್ರದೇಶದಲ್ಲಿ, ರೂಢವಾಗಿರುವ ಅಧಿದೈವತವಾಗಿರಬೇಕು. ಗದುಗಿನ ವೀರ ನಾರಾಯಣನ ಗುಡಿಯಲ್ಲಿಯೂ ನರಸಿಂಹನ ವಿಗ್ರಹವಿದೆ. ರಾಮಾನುಜ ಸಂಪ್ರದಾಯದ ದೈವತಗಳು ಅಗ್ಗಳಿಕೆ ಪಡೆಯುವಾಗ್ಗೆಯೂ ಪುರಾತನದ ನರಸಿಂಹನೂ ಅರ್ಚಕರ ಕಣ್ಮರೆಯಾಗಲಿಲ್ಲ. ಗದುಗಿನಂತೆಯೆ ಬೇರೆಡೆಯಲ್ಲಿಯೂ ಈ ದೇವರ ಜೊತೆ ಕಾಣಬಹುದು.



## ೫ ಕಾಗಿನೆಲೆ.

ಕಾಗಿನೆಲೆಗೆ ಸದ್ಯದಲ್ಲಿ 'ಕಾಗಿನೆಲ್ಲಿ,' ಎಂದೆನ್ನುವರು. ಕಾಗಿನೆಲ್ಲಿಯು ಧಾರವಾಡ ಜಿಲ್ಲೆಗೆ ಒಳಪಟ್ಟ ಹಿರೇಕೆರೂರು ತಾಲೂಕಿನೊಳಗಿನ ಒಂದು ಗ್ರಾಮವು. ಹಾವೇರಿಯ ರೈಲುಸ್ಟೇಶನ್ನಿನಿಂದ ಒಂಬತ್ತು ಮೈಲು ಅಂತರದಲ್ಲಿದೆ. ಹಳೆಯ ಕಾಗಿನೆಲೆಗೆ 'ಹಳೆಯೂರು' ಅನ್ನುವರು. ಹಳೆಯೂರು ಹಾಳಾಗಿ ಹೋಗಿದೆ.

ಕಾಗಿನೆಲೆಯು ಪುರಾತನ ಪಟ್ಟಣವು. ಅಲ್ಲಿ ಕೋಟೆಕೊತ್ತಳ ಅಗಳು ಆಳ್ವೇರಿಗಳ ಅವಶೇಷಗಳನ್ನು ಈಗ್ಗೆಯೂ ಕಾಣಬಹುದು. ಖಿಳವಾಗಿ ಬಿದ್ದು ಹೋದ ಅನೇಕ ಪುರಾತನ ಗುಡಿಗಳಿವೆ. ಅವುಗಳಲ್ಲಿ ಕಲ್ಬರೆಹಗಳು ಬಿದ್ದು ಕೊಂಡಿವೆ. ಕೆಲವು ಶಾಸನಗಳು ಒಡೆದು ಹೋಗಿವೆ; ಕೆಲವು ಹುಗಿದು ಹೋಗಿವೆ; ಕೆಲವು ಸವೆದು ಹೋಗಿವೆ.

ವೀರಭದ್ರನ ಗುಡಿಯಲ್ಲಿ ಓದಲಿಕ್ಕೆ ಬರುವಂತಹ ನಾಲ್ಕು ಶಾಸನಗಳಿವೆ ಸೋಮೇಶ್ವರನ ಗುಡಿಯಲ್ಲಿ ಎರಡು, ಸಂಗಮೇಶ್ವರನ ಗುಡಿಯಲ್ಲಿ ಒಂದು, ಬ್ರಹ್ಮೇಶ್ವರ ದೇವಾಲಯದಲ್ಲಿ ಒಂದು, ಹೀಗೆ ಎಂಟು ಲಿಪಿಗಳನ್ನು ಕೆಲಮಟ್ಟಿಗೆ ಓದಬಹುದು. ಈ ಶಾಸನಗಳಿಂದ ಕಾಗಿನೆಲೆಯು ಬನವಾಸಿ ದೇಶಕ್ಕೆ ಒಳಪಟ್ಟಿದ್ದಿತೆಂದು ತೋರುತ್ತದೆ. ಬನವಾಸಿಯು ಅಂದು ಪನ್ನಿಚ್ಛಾಸಿರನಾಡು; ಮೊದಲಿನಿಂದ ಕಾದಂಬರಿಗೆ ನಡೆದುಬಂದುದು. ಕಾಗಿನೆಲೆಯು ಪನ್ನೆರಡರ ಪಟ್ಟಣ. ಕಾದಂಬರನ್ನು ಸೋಲಿಸಿ, ಚಾಲುಕ್ಯರು, ಬನವಾಸಿ ದೇಶದ ಹಿರಿಯರಸರಾದರು. ಕೆಲಕಾಲ ಕಾಗಿನೆಲೆಯು ದೇವಗಿರಿಯ ಯಾದವರ ಕೈವಶವಾಯಿತು. ಕಾಗಿನೆಲೆಗಾಗಿ ಕಳಚೂರಿಯರೂ ಕಾದಿದಂತೆ ತೋರ್ಕುತ್ತದೆ. ಬನವಾಸಿಗೋವೆಯು ಕಾದಂಬರನ್ನು ಸದೆಬಡಿದು, ವಿಜಯ

ನಗರದ ಮೊದಲನೆಯ ಹರಿಹರರಾಯನ ತಮ್ಮನಾದ ಮಾರಪನು ಈ ಭಾಗಕ್ಕೆ ಒಡೆಯನಾದನು. ಕಾಗಿನೆಲೆಯು ರಾಕ್ಷಸದಂಗಡಿಯವರೆಗೆ ವಿಜಯನಗರದವರ ವಶದಲ್ಲಿದ್ದಿತು. ಆ ಬಳಿಕ ಆದಿಲಶಹನು ದಾಳಿಮಾಡಿ ಬಂಕಾಪುರ ಪ್ರಾಂತವನ್ನು ಕೈವಶಮಾಡಿಕೊಂಡನು. ಕಾಗಿನೆಲೆಯು ಬಂಕಾಪುರ ಪ್ರಾಂತಕ್ಕೆ ಒಳಪಟ್ಟಿತು ಆ ಮೇಲೆ ವಿಜಯನಗರದ ವೆಂಕಟ ಪತಿದೇರಾಯನು ಆ ಭಾಗವನ್ನು ಆದಿಲಶಹನಿಂದ ಸೆಳೆದುಕೊಂಡನು.

## ವೀರಭದ್ರನಗುಡಿ.

ವೀರಭದ್ರನ ಗುಡಿಯ ಶಾಸನಗಳಲ್ಲಿ, ಚಾಲುಕ್ಯ ವಿಕ್ರಮಾಂಕನ ಕಾಲದ ಲಿಪಿಯು ವಿಸ್ತಾರವಾಗಿದೆ. ಅದರಲ್ಲಿ, ಶ್ರೀಮನ್ಮಹಾಪ್ರಭು ಬೊಮ್ಮಗಾವುಂಡ ಮತ್ತು ಬಿಲಗಾವುಂಡರು, ಕಾಗಿನೆಲೆಯ ಪಾಂಡಿಯರ್ಗೆ, ಚಾಲುಕ್ಯ ವಿಕ್ರಮಶಕ ೪೫ನೆಯ ಶಾರ್ವರಿ ಸಂವತ್ಸರ, ಮಾಘ ಶುದ್ಧ, ಸೋಮವಾರ ದಿವಸ ಶ್ರೀಮತ್ಕಾಳೇಶ್ವರಂಗಭೋಗಕ್ಕಂ ಧೂಪದೀಪ ನೈವೇದ್ಯಕ್ಕಂ ಲೋಕಾಭರಣ ಪಂಡಿತರ ಕಾಲಂಕರ್ಚಿ, ಧಾರಾಪೂರ್ವಕವಾಗಿ. ಬಿಟ್ಟ ಗತ್ತಿಯ ಉಲ್ಲೇಖವಿದೆ. ಈ ಶಾಸನದಲ್ಲಿ ಕಾಗಿನೆಲೆಯ ಪೆಂಪನ್ನು ವರ್ಣಿಸುವ ನಾಲ್ಕು ಸೊಗಸಾದ ಪದ್ಯಗಳಿವೆ,

ಸಿರಿನೆಲೆ ಗುಣದ ನೆಲೆ ಭಾ।
ಸುರಕೀರ್ತಿನೆಲೆ ವಿವೇಕವಿಭವದ ನೆಲೆ ವಿ॥
ಸ್ತರಿಪ ಜಯವಧುಗೆ ನೆಲೆಯೆನೆ।
ಕರವೆಸೆಗುಂ ಕಾಗಿನೆಲೆ ಧರಿತ್ರೀತಳದೊಳ್॥

ಕಾರ್ತಿಕಮಾಸದಂದಿನ ಚತುರ್ದಸಿಗುರ್ವುವುದೊಂದು ಸದ್ಗುಹಾ।
ವ್ಯೃತ್ತಿಕೆಯಿಂ ತದಂ ಸವಿದ ಕಾಗೆ ಕರಂ ಬಿಳಿದಪ್ಪುದಾದೊಡಾ॥
ವ್ಯೃತ್ತಿಕೆ ತಾನೆ ದಲ್ ಕನಕಯೋಗಸುಸಿದ್ಧವೆನುತ್ತೆ ಬಲ್ಲವ।
ರ್ಕೀರ್ತಿಸಲಿನ್ತು ಕಾಗಿನೆಲೆಯಾದುದದಲ್ಲದೆ ದೇಸೆಗಾದುದೆ॥

ಸರನಿಧಿಯಿಂ ಪಳಂಚಲೆವ ಪೆರ್ಗೆರೆ ಚೆಲ್ವಿಡಿದಿರ್ದ ನಂದನಂ।
ನಿರುಪಮವಾಗಿ ಕತ್ತಲಿಸುತಿಪ್ಪೆಲೆವಳ್ಳಿ ಮಡಲ್ತುರಂಜಿಪಾ॥
ಸುರಗಿಯ ನಾಗ ನಾಗಕುಸುಮಂಗಳ ಪುಷ್ಪಲತಾಗೃಹಂ ಸವಿ।
ಸ್ತರವೆಸೆದೊಪ್ಪೆ ಕಾಗಿನೆಲೆ ಶೋಭೆಗೆ ತಾಯನೆಲೆಯಾಗಿರಂಜಿಕುಂ॥

ತರುಣಕುರಂಗ ಲೋಚನೆಯರಿರ್ಕೆಯಿನೊಪ್ಪುವ ಸೂಳೆಗೇರಿ ಸ |
ತ್ಪುರುಷರೆನಿಪ್ಪ ಹೆಮ್ಮೆಯ ವಣಿಗ್ಜನದಂಗಡಿಯೆ-ನೊಪ್ಪಡಂ ||
ಸುರಗಿರಿಯಂ ಪಳಂಚಲೆವ ದೇವಗೃಹಂ ಜಿನಗೇಹ ಸಂಕುಳಂ |
ಸಿರಿಗೆಡೆಯಾಗೆ ಕಾಗಿನೆಲೆ ರಂಜಿಸುಗುಂ ಭುವನಾಂತರಾಳದೊಳ್ ||

(೨) ಒಡೆದ ಈ ಶಾಸನದಲ್ಲಿ ಚಾಳುಕ್ಯಾಭರಣ ಜಗದೇಕಮಲ್ಲನ ಹೆಸರಿದೆ. ಹೆಚ್ಚಿಗೇನೂ ತಿಳಿಯುವಂತಿಲ್ಲ.

(೩) ಇದು ವೀರಗಲ್ಲು. 'ಯಾದವ ರಾಮಚಂದ್ರದೇವನು ಶಕ ವರ್ಷ ೧೨೦೪ ರಲ್ಲಿ ಆಳುತ್ತಿರುವಾಗ್ಗೆ, ಸೋಯಿದೇವನು (ಕಳಚೂರಿ) ದಾಳಿಯಿಟ್ಟು ತವರೂರು ಮುತ್ತಿದಲ್ಲಿ, ಕಾಗಿನೆಲೆಯ ಬುಗುಡರ ಸಿದ್ದಯ್ಯನು ವೈರಿಬಲವನ್ನು ತತ್ತರಿಯಿರಿದು ರಣಜಿತನಾಗಿ ಸುರಲೋಕ ಪ್ರಾಪ್ತನಾದನು,' ಎಂಬ ವಿಷಯವು ಈ ಲೇಖದಲ್ಲಿದೆ.

(೪) ಗುಡಿಯ ಮುಂದಿನ ದೀಪಸ್ತಂಭದಲ್ಲಿರುವ ಲಿಪಿ. ಇದರಲ್ಲಿರುವ ವಿಷಯ, "ಸಮಸ್ತದಿಶಾಧೀಶ ಅರಿರಾಯ ಸಿಂಹ ಶಾರ್ದೂಳ ಸತ್ಯಹರಿಶ್ಚಂದ್ರ ಧರ್ಮಕ್ಕೆ ಯುಧಿಷ್ಠಿರಂ ಶ್ರೀಮನ್ಮಹಾರಾಜಾಧಿರಾಜ ರಾಜಶ್ರೀ ರಾಜ ಪರಮೇಶ್ವರಂ ಅರಿರಾಯವಿಭಾಡ ಭಾಷೆಗೆ ತಪ್ಪುವ ರಾಯರಗಂಡ ಉತ್ತರ ಪೂರ್ವ ದಕ್ಷಿಣ ಸಮುದ್ರಾ....ಪ್ರತಿಪಾಲಕ ಶ್ರೀವೀರಹರಿಹರ ಮಹಾರಾಯರ ಕುಮಾರಿತ್ತಿ ಗವುರಾಜಿ ಅಯಿಸಿರಿಗಂ ಶ್ರೀಮನ್ಮಹಾಮಂಡಳೇಶ್ವರಂ ಶ್ರೀವೀರ ಜಗತಾಭಯ ಬುಕ್ಕರಾಯಂಗಂ ಉದರಪವಿತ್ರೀಕರಣಸುಪುತ್ರ ಕುಲದೀಪ ಕನು ಶ್ರೀವೀರಬುಕ್ಕ ಭೂಪಾಲಕನು ಪಶ್ಚಿಮ ಸಮುದ್ರ ತಟಾಕದಲು".... ಇದರ ಮುಂದಿನ ಎರಡು ನಾಲುಗಳು ತಿಳಿಯುವುದಿಲ್ಲ.

## ಸೋಮೇಶ್ವರನ ಗುಡಿ.

(೧) ಚಾಳುಕ್ಯ ಭುವನೈಕಮಲ್ಲನು ಆಳುತ್ತಿರುವಾಗ, ಶಕ ವರ್ಷ ೯೯೩ ವಿರೋಧಿ ಸಂವತ್ಸರ ಪುಷ್ಯ ಅಮಾವಾಸ್ಯೆ ಸೂರ್ಯಗ್ರಹಣ ಆದಿತ್ಯವಾರ ವ್ಯತೀಪಾತದಲ್ಲಿ ಚಾಳುಕ್ಯನ ಮಹಾಸಾಮಂತಾಧಿಪತಿ, ಬನವಾಸಿಪುರವರಾಧೀಶ್ವರರು ಮೊದಲಾದವರ ಸಮೇತನಾಗಿ ಕಾಗಿನೆಲೆಯ ಜಕ್ಕಗಾವುಂಡ ಮತ್ತು ಸೆಟ್ಟಿ ಮೊದಲಾದವರು, ಗ್ರಾಮೇಶ್ವರ ದೇವರ ದೀಪಧೂಪನೈವೇದ್ಯಜೀರ್ಣೋ

ದ್ಧಾರಕ್ಕಾಗಿ, ತಪೋಧನ ವಿದ್ಯಾರ್ಥಿಗಳಿಗಾಗಿ, ಸುಂಕ ಮೊದಲಾದ ದತ್ತಿಗಳನ್ನು ಬಿಟ್ಟರು.

(೨) ಚಾಲುಕ್ಯ ಭುವನೈಕಮಲ್ಲನ ಮಹಾಪ್ರಧಾನನಾದ ಉದಯಾದಿತ್ಯದೇವನು ಬನವಾಸಿ ನಾಡನ್ನಾಳುವಾಗ್ಗೆ, ಶಕ ವರ್ಷ ೯೯೪ (೬), ಆನಂದ ಸಂವತ್ಸರ ಪು. ಬ. ೮. ಆದಿತ್ಯವಾರ, ಪಾಂತಿಪುರಾಧೀಶ್ವರ ಕದಂಬದೇವ ಮುಂತಾದವರು, ಕಾಗಿನೆಲೆಯ ಬೆಟ್ಟೇಶ್ವರ ದೇವರ ದೀಪಧೂಪ ನೈವೇದ್ಯ, ವಿದ್ಯಾರ್ಥಿತಪೋಧನಗ್ರಾಹಾರ, ಜೀರ್ಣೋದ್ಧಾರ ಮೊದಲಾದವುಗಳಿಗಾಗಿ, ಸದ್ಯೋಜಾತಪಂಡಿತದೇವನಿಗೆ ಧಾರಾಪೂರ್ವಕವಾಗಿ ಬಿಟ್ಟ ದತ್ತಿಯ ವಿಷಯವು ಈ ಲಿಪಿಯಲ್ಲಿದೆ.

## ಸಂಗಮೇಶ್ವರನ ಗುಡಿ.

ಈ ಲೇಖದಲ್ಲಿ, ಯಾದವನಾರಾಯಣ ಭುಜಬಳಪ್ರತಾಪಚಕ್ರವರ್ತಿ ಶ್ರೀವೀರಮಹಾದೇವನ ಹೆಸರಿದೆ. ಕಲ್ಲು ಒಡೆದು ಹೋಗಿದೆ.

## ಬ್ರಹ್ಮೇಶ್ವರನ ಗುಡಿ.

ಈ ಗುಡಿಗೆ ಮುಸುಕಿನ ಗುಡಿಯೆಂದು ಕರೆಯುವುದುಂಟು. ಚಾಳುಕ್ಯ ತ್ರಿಭುವನಮಲ್ಲನ ಕಾಲದಲ್ಲಿ ಕಾಗಿನೆಲೆಯ ಕಾಳಿಸೆಟ್ಟಿಯೆಂಬ ಗಾವುಂಡನು ಬ್ರಹ್ಮೇಶ್ವರನ ಗುಡಿಯನ್ನು ಕಟ್ಟಿಸಿದನು; ದೇವರ ನೈವೇದ್ಯ ಗುಡಿಯ ಜೀರ್ಣೋದ್ಧಾರ ಮೊದಲಾದವುಗಳಿಗಾಗಿ ವಿಕ್ರಮಶಕ ವರ್ಷ ೪೭ ಶುಭಕೃತ್ಸಂವತ್ಸರ ಚೈತ್ರ ಪೌರ್ಣಿಮೆ ಸೋಮವಾರ ಸೋಮಗ್ರಹಣದ ಸಮಯದಲ್ಲಿ ಶಿವಶಕ್ತಿಪಂಡಿತದೇವನ ಕಾಲಂಕರ್ಚಿಧಾರಾಪೂರ್ವಕವಾಗಿ ದತ್ತಿಯನ್ನು ಬಿಟ್ಟನು. ಅವನಂತೆಯೆ ಊರವರೂ ದಾನಧರ್ಮಮಾಡಿದರು. ಈ ಲಿಪಿಯೊಳಗಿರುವ ಕಾಗಿನೆಲೆಯ ವರ್ಣನೆಯು,

ದಳಿತಾಂಭೋಜಸರೋವರಪ್ರತತಿಯಿಂದುದ್ಯಾನಸಂದೋಹದಿಂ ।
ಫಳಭಾರಾನ್ವಿತರಮ್ಯಶಾಳಿವನದಿಂ ಸೀಳಾಭ್ರಸು–ಂಡ ಸಂ ॥
ಕುಳದಿಂ ಸುತ್ತಿದ ಪೂರ್ಣವಾರಿಪರಿಖಾವಿಭ್ರಾಜಿಯಿಂ ದೀರ್ಘಿಕಾ ।
ವಳಿಯಿಂ ಕಣ್ಗೆಸೆದಿಂತು ಕಾಗಿನೆಲೆ (ನಿ) ತ್ಯಾನೀಕದಿಂದೊಪ್ಪುಗುಂ ॥
ಬಳಸಿದ ಕೋಟೆ ಶೂದ್ರನಿಕೇತನದಿಂ ಗಣಿಕಾನಿವಾಟಸಂ ।
ಕುಳದ ವಿಳಾಸದಿಂ ದ್ವಿಜನಿವಾಸ ಕದಂಬಕದಿಂ ವಣಿಗ್ಗೃಹಾ ॥

ವಳಿಯಿನುದಾತ್ತ ದೇವಭವನಂಗಳ ತಿಂತಿಣಿಯಿಂ ಶೋಭೆಯುಂ |
ತಳೆದು ಪೊದಳ್ದು ಕಾಗಿನೆಲೆ ಸಂತತಮಿಂತೆಸೆದೊಪ್ಪಿ ತೋರುಗುಂ ||

ಆದಿಕೇಶವನಗುಡಿಯ ಮುಂದಿರುವ ಭಂಡಾರಗಿರಿ ಸ್ವಾಮಿಗಳ ವೃಂದಾವನದ ಕಟ್ಟಡದ ನಾಲ್ಕೂ ಬದಿಯಲ್ಲಿದ್ದ ನಾಲ್ಕು ಕಂಬಗಳಲ್ಲಿ ಲಿಪಿಯಿದೆ. ಕಂಬಗಳ ಕೆಲ ಭಾಗವು ಗೋಡೆಯಲ್ಲಿ ಹುಗಿದು ಹೋದುದರಿಂದ ಆ ಶಾಸನವನ್ನು ಪೂರ್ಣ ಓದಲಿಕ್ಕೆ ಬರುವುದಿಲ್ಲ.

## ನರಸಿಂಹಾದಿಕೇಶವದೇವಸ್ಥಾನ.

ಹಳೆಯೂರಿಗೆ ಹತ್ತಿ ಮರಡಿಯ ಮೇಲೆ ಮತ್ತು ಸುತ್ತಲು ಕಾಗಿನೆಲ್ಲಿಯ ಹಳ್ಳಿಯು ನೆಲಿಸಿದೆ. ಈ ಮರಡಿಗೆ ಆದಿಕೇಶವನ ಮರಡಿಯೆಂದೆನ್ನುವರು. ಶ್ರೀಲಕ್ಷ್ಮೀನರಸಿಂಹ ಮತ್ತು ಆದಿಕೇಶವ ದೇವರ ಗುಡಿಗಳು ೮-೧೦ ಫೂಟು ಅಂತರದ ಮೇಲೆ ಜೊತೆಯಲ್ಲಿಯೆ ಇವೆ. ಆದಿಕೇಶವನ ಗುಡಿಯ ಮುಂದಿರುವ ಭಂಡಾರಗಿರಿಯ ಸ್ವಾಮಿಗಳ ವೃಂದಾವನದ ಹತ್ತಿರದಲ್ಲಿಯೆ ಹನುಮಂತದೇವರ ಚಿಕ್ಕ ಗುಡಿಯಿದೆ. ಈ ಎಲ್ಲ ಗುಡಿಗಳ ಸುತ್ತಲು ಮಣ್ಣಿನ ಗೋಡೆಯ ಪ್ರಾಕಾರವಿದೆ. ಪ್ರಾಕಾರದ ಹೆಬ್ಬಾಗಿಲಿಗೆ ಇದಿರಾಗಿ ನರಸಿಂಹನ ದೇವಸ್ಥಾನವಿದೆ. ಆದಿಕೇಶವನ ಗುಡಿಯು ಅದರ ಎಡಕ್ಕೆ ನೆಲಿಸಿದೆ. ಎರಡೂ ಗುಡಿಗಳ ನಡುವೆ ರಂಗಮಂಟಪವಿದೆ. ಪಲ್ಲಕ್ಕಿಯ ಉತ್ಸವ ಮೊದಲಾದ ಸಂದರ್ಭಗಳಲ್ಲಿ ದೇವರ ಉತ್ಸವಮೂರ್ತಿಗಳನ್ನು ಅಲ್ಲಿರಿಸಿ ಮಂಗಳಾರುತಿ ಮಾಡುವ ರೂಢಿಯಿದೆ. ಎರಡೂ ಗುಡಿಗಳೊಳಗಿನ ವಿಗ್ರಹಗಳು ಸುಂದರವಾಗಿದ್ದರೂ ಗುಡಿಗಳಲ್ಲಿ ಕೈಗಾರಿಕೆಯು ಕಂಡುಬರುವುದಿಲ್ಲ. ನರಸಿಂಹನ ಗರ್ಭಗುಡಿಯ ಮೇಲೆ ಗಚ್ಚಿನ ವಿಮಾನವಿದೆ. ಆದಿಕೇಶವನ ಗುಡಿಯಮೇಲೆ ವಿಮಾನವಿಲ್ಲ. ಕೇಶವನ ಮಂದಿರದ ಮುಂದಣ ಭಾಗವು ಹೊಸತಾಗಿ ಕಟ್ಟಲಾಗಿದೆ ನರಸಿಂಹ ಮತ್ತು ಆದಿಕೇಶವ ದೇವರ ಸುಂದರ ಮೂರ್ತಿಗಳು ಸುಮಾರು ಒಂದೂವರಿ ಫೂಟು ಎತ್ತರವಿರುವುವು. ನರಸಿಂಹನ ಬದಿಯಲ್ಲಿಯೆ ಎಡಕ್ಕೆ ಸ್ವಲ್ಪ ಅಂತರದಲ್ಲಿ ಲಕ್ಷ್ಮಿಯ ಮೂರ್ತಿಯಿದೆ. ಆದಿಕೇಶವನ ಮೂರ್ತಿಯ ಎಡಬಲದಲ್ಲಿ ಅದೇ ಕಲ್ಲಿನಲ್ಲಿ ಲಕ್ಷ್ಮಿ ಮತ್ತು ಗರುಡರ ಸಣ್ಣ ವಿಗ್ರಹಗಳಿವೆ. ನರಸಿಂಹನ ಉತ್ಸವಮೂರ್ತಿಯಿರುವುದಿಲ್ಲ. ಮಾರುತಿಯ ಮೂರ್ತಿಯನ್ನೇ ಉತ್ಸವಕ್ಕಾಗಿ ಉಪಯೋಗಿಸುವರು. ಪ್ರತಿಯೊಂದು ಸಂದರ್ಭದಲ್ಲಿ ಎರಡೂ

ಮೂರ್ತಿಗಳ ಉತ್ಸವವಾಗುವುದು. ಕಾಗಿನೆಲ್ಲಿಯ ಮುಖ್ಯ ಉತ್ಸವಗಳೆಂದರೆ, ರಥೋತ್ಸವ; ಅದು ಮಾಘಮಾಸದಿಂದ ವೈಶಾಖ ಮಾಸದವರೆಗೆ ಲಗ್ನದ ಮುಹೂರ್ತದಲ್ಲಿ ಜರುಗಬಹುದು. ಕಾರ್ತಿಕ ಹುಣ್ಣಿವೆಗೆ ತೆಪ್ಪೋತ್ಸವವಾಗುವುದು. ವೈಶಾಖ ಶುದ್ಧ ತ್ರಯೋದಶಿಯ ದಿವಸ ನರಸಿಂಹಜಯಂತಿಯು ನೆರವೇರುವುದು. ದಸರೆಯ ದಿನ ನರಸಿಂಹಾದಿಕೇಶವರ ಪಲ್ಲಕ್ಕಿಯು ಕಾಗಿನೆಲ್ಲಿಯಿಂದ ಹೊರಟು, ದಾಸನಕೊಪ್ಪ, ಕುಮ್ಮೂರು, ಇಂಗಳಗೊಂದಿ ಸೀಮೆಯಲ್ಲಿರುವ ಚೆನ್ನಕೇಶವನ ಮರಡಿ, ಇವುಗಳನ್ನು ಸಂದರ್ಶಿಸಿ, ಬನ್ನಿಯನ್ನು ಮುಡಿದು, ಮರಳಿ ಗುಡಿಗೆ ಬರುವುದು.

ಕಾಗಿನೆಲ್ಲಿಯ ಸಂಸ್ಥೆಗೆ "ಶ್ರೀಲಕ್ಷ್ಮೀನರಸಿಂಹಾದಿಕೇಶವದೇವಸ್ಥಾನ"ವೆಂದು ಹೆಸರು. ದೇವಾಲಯದ ಕಾರ್ಯಗಳೆಲ್ಲ ಪಂಚರ ಪರವಾಗಿ ಸಾಗುವವು. ದಾಸನಕೊಪ್ಪವೆಂಬ ಗ್ರಾಮವು ದೇವಸ್ಥಾನಕ್ಕೆ ಇನಾಮು ಇರುವುದು. ಅದರ ಉತ್ಪನ್ನು ಸುಮಾರು ೫೦೦ ರೂಪಾಯಿ. ಉತ್ಸವಕ್ಕಾಗಿ ಸರಕಾರದಿಂದ ವರ್ಷಕ್ಕೆ ೪೫ ರೂಪಾಯಿಗಳು ದೊರೆಯುವವು. ಈ ಹಣವು ಪ್ರತಿವರ್ಷದ ಉತ್ಸವಕ್ಕೆ ಸಾಕಾಗುವುದಿಲ್ಲೆಂದು ಹಣ ಕಲೆಹಾಕಿ ರಥೋತ್ಸವವನ್ನು ೪-೫ ವರ್ಷಕ್ಕೊಮ್ಮೆ ನೆರವೇರಿಸುವರು.

ಕಾಗಿನೆಲ್ಲಿಯ ಜನಸಂಖ್ಯೆ ಸುಮಾರು ೧೫೦೦; ಅದರಲ್ಲಿ ೧೧೦೦-೧೨೦೦ ಜನರು ಮುಸಲ್ಮಾನರು, ಸುಮಾರು ೩೦೦-೪೦೦ ಹಿಂದುಗಳು. ಪೂಜಾರಿಗಳು ಆದಿಬಣಜಿಗ ಕುಲದವರೆಂದು ಹೇಳುತ್ತಾರೆ. ಸದ್ಯಕ್ಕೆ ಅವರು ವೀರಶೈವ ಧರ್ಮವನ್ನವಲಂಬಿಸಿರುವರು.

ಆದಿಕೇಶವನ ಗುಡಿಯಿಂದ ಅರ್ಧಮೈಲಿನ ಮೇಲಿರುವ ಮತ್ತೊಂದು ದಿನ್ನಿಗೆ ಚೆನ್ನಕೇಶವನ ಮರಡಿ ಎಂದೆನ್ನುವರು. ಆದಿಕೇಶವ, ತಿಮ್ಮಕೇಶವ, ಚೆನ್ನಕೇಶವರು ಜೊತೆಯಲ್ಲಿಯೆ ಬಂದರೆಂದು ಕಾಗಿನೆಲ್ಲಿಯವರು ದಂತಕತೆ ಹೇಳುವರು. ಅದು ಏನೇ ಇರಲಿ, ಕಾಗಿನೆಲ್ಲಿಯ ಆದಿಕೇಶವನಿಗೆ ರಾಮಾನುಜರ ಬೇಲೂರಿನ ಚೆನ್ನಕೇಶವ ತಿರುಪತಿಯ ಶ್ರೀನಿವಾಸರ ಸಂಬಂಧವನ್ನು ಹಚ್ಚುವುದು ವಿಚಾರಾರ್ಹವಾದ ವಿಷಯ !

---

## ೬ ಶ್ರೀವ್ಯಾಸರಾಯರೂ ವಿಜಯನಗರದ ಅರಸರೂ.

ಶ್ರೀವ್ಯಾಸರಾಯರು ದಾಸಕೂಟದ ಅಧ್ವರ್ಯುಗಳು. ವಿಜಯನಗರದ ಅರಸರಿಗೂ ವ್ಯಾಸಯೋಗಿಗಳಿಗೂ ನಿಕಟ ಸಂಬಂಧವಿದ್ದಿತು. ಆ ಸಂಬಂಧವು ಸಾಕಷ್ಟು ಪ್ರಕಟನೆಯನ್ನು ಕಂಡಿರುವುದಿಲ್ಲ. ಅದರ ವಿಷಯದೊಳಗಿನ ಐತಿಹ್ಯವು ತೀರ ಮನೋರಂಜಕವೂ ಉದ್ಬೋಧಕವೂ ಆಗಿದೆ. ವಿಜಯನಗರದೊಳಗಿನ ದಾಸಕೂಟಕ್ಕೂ ಅಲ್ಲಿಯ ನರಪತಿಗಳಿಗೂ ಇರುವ ಪ್ರತ್ಯಕ್ಷ ಸಂಬಂಧದ ಸರಪಣಿಯೊಳಗಿನ ಒಂದು ಮಹತ್ವದ ಕಳಿಗೆಯೆಂದು ಈ ವಿಷಯವನ್ನು ವಿವರಿಸಲಿದೆ.

೧. ಮುಳಬಾಗಿಲು ಮಠದ ಶ್ರೀಪಾದರಾಯರು ತಮ್ಮ ಶಿಷ್ಯರಾದ ವ್ಯಾಸರಾಯರನ್ನು, ಚಂದ್ರಗಿರಿಯಲ್ಲಿರುವ ವಿಜಯನಗರದ ಆರಸನಾದ ಸಾಳುವ ನರಸಿಂಹನೆಡೆಗೆ ಕಳುಹಿದರು. ಸಾಮ್ರಾಜ್ಯಭಾರವನ್ನು ವಹಿಸಿದ ನರಸಿಂಹನಿಗೆ ಯೋಗ್ಯಸಲಹೆಯ ಆವಶ್ಯಕತೆಯಿದ್ದಿತು. ವ್ಯಾಸರಾಯರು ತೀರ ಚಿಕ್ಕವರಾಗಿದ್ದರೂ ಅಂತಹ ಹೊಣೆಗಾರಿಕೆಯ ಕಾರ್ಯದಲ್ಲಿ ಅವರು ತಕ್ಕವರಾಗಿದ್ದರೆಂದು ಶ್ರೀಪಾದರಾಯರು ಮನಗಂಡಿದ್ದರು. ಈಗಿನಂತೆ, ಆ ಕಾಲದಲ್ಲಿ ಧರ್ಮ, ರಾಜಕಾರಣ, ಎಂಬ ಭೇದವು ಇದ್ದಿರಲಿಲ್ಲ. ಹಿಂದೂ ಧರ್ಮಶಾಸ್ತ್ರದಂತೆ, ರಾಜಕಾರಣವು ಧರ್ಮಕಾರಣದ ಒಂದು ಶಾಖೆಯಾಗಿದ್ದಿತು. ಸನ್ಯಾಸಾಶ್ರಮವನ್ನು ಹೊಂದಿದ ಯತಿಗಳು ಕೂಡ ರಾಜಕಾರಣದಲ್ಲಿ ತುಂಬ ಆಸ್ಥೆಯುಳ್ಳವರಾಗಿದ್ದರು. ಶ್ರೀಪಾದರಾಯರು ಅದೇ ಹೆಗ್ಗುರಿಯಿಂದ ತಮ್ಮ ಶಿಷ್ಯರನ್ನು ಸಾಳುವ ನರಸಿಂಹನೆಡೆಗೆ ಕಳುಹಿದರೆಂದು ಸೋಮನಾಥನು ಬರೆಯುವನು. ಶ್ರೀಪಾದರಾಯರು ವ್ಯಾಸರಾಯರಿಗೆ ಅಂದುದು,

**ತತ್ರ ಸರ್ವೇಷಾಣಾಮಪಿ ಧರ್ಮಾಣಾಂ ರಾಜಾ ಸೇತುರಿತಿ**
**ನ್ಯಾಯೇನ ಭವತಾ ಸರ್ವದಾ ತದಾಸ್ಥಾನೀಸ್ಥೇಯಮುಷಾ**

**ಭವಿತವ್ಯಂ। ಪುರಾ ಕಿಲ ಯೋಗಿನೋ ನಿಸ್ಸಂಗಾ ಅಪಿ ಮಹಾಂತೋ ದತ್ತಾತ್ರೇಯಾದಯೋ ಜಗದುಪಕಾರಣಾಯ ರಾಜನ್ಯಸಭಾಲಂಕಾರಾ ಬಭೂವುಃ।**

ಗುರುಗಳ ಅಪ್ಪಣೆಯ ಮೇರೆಗೆ ವ್ಯಾಸಯೋಗಿಗಳು ಚಂದ್ರಗಿರಿಗೆ ಹೋಗಿ ನಿಂತರು. ನರಸಿಂಹನು ಸ್ವಾಮಿಗಳನ್ನು ಬರಮಾಡಿಕೊಂಡು ಅವರ ಸಲಹೆಯಂತೆ ರಾಜ್ಯವನ್ನು ಆಳಲಾರಂಭಿಸಿದನು. ದತ್ತಾತ್ರೇಯನು, ಕಾರ್ತವೀರ್ಯನಿಗೆ ಸಹಾಯಕನಾಗಿದ್ದಂತೆ ವ್ಯಾಸರಾಯರು ನರಸಿಂಹನಿಗೆ ಸಲಹೆಗಾರರಾದರು. ರಾಯರು ತಿರುಪತಿಗೆ ಹೋಗಿ ನೆಲಿಸಿ ಶ್ರೀನಿವಾಸನ ಪೂಜೆ ಅರ್ಚೆಗಳನ್ನು ಪ್ರಾರಂಭಿಸಿ, ಅಲ್ಲಿಯೆ ಅವ್ಯಾಹತವಾಗಿ ಒಂದು ತಪವನ್ನು ಕಳೆದರು.

೨. ಸಾಳುವ ನರಸಿಂಹನ ತರುವಾಯ ಅವನ ಮಗನಾದ ಇಮ್ಮಡಿ ನರಸಿಂಹ (ತಮ್ಮಾರಾಯ) ನು ಪಟ್ಟಕ್ಕೆ ಬಂದನು. ತಂದೆಯಂತೆ ತಮ್ಮಾರಾಯನೂ ಸ್ವಾಮಿಗಳವರಲ್ಲಿ ಆಸ್ಥೆಯುಳ್ಳವನು. ಇಂದ್ರನಿಗೆ ಬೃಹಸ್ಪತಿಯು ಗುರುವಾದಂತೆ ವ್ಯಾಸರಾಯರು ತಮ್ಮಾರಾಯನ ಗುರುಗಳಾಗಿದ್ದರು,

**ಗುರುರಿವ ಕುಲಿಶಪಾಣಿಂ ಕ್ಷ್ಮಾಪತಿಮನ್ವಗೃಹ್ಣನ್ × × ತಾಂ ಪುರೀಂ ಚಿರಾದಲಮಕರೋತ್।**

ತಮ್ಮಾರಾಯನ ಕಾಲದಲ್ಲಿಯೂ ವ್ಯಾಸರಾಯರು ಚಂದ್ರಗಿರಿಯಲ್ಲಿಯೆ ಉಳಿದರು.

೩. ಕೊನೆಗೆ ನರಸನಾಯಕನು ಸ್ವಾಮಿಗಳವರನ್ನು ವಿಜಯನಗರಕ್ಕೆ ಬರಮಾಡಿಕೊಂಡನು. ವ್ಯಾಸರಾಯರು ವಿಜಯನಗರವನ್ನು ಸಮೀಪಿಸಲು ಸೋಮನಾಥನು ಬರೆದುದು,

**ನರಸಭೂಪಾಲಸ್ಯಾಪ್ತೈರಮಾತ್ಯಮುದಾವಲ್ಯೈಸ್ಸಯತಿವೃಷಭ ಶ್ಚಿತ್ತ್ವಸಂಪ್ರಾರ್ಥ್ಯಮಾನನಿಜಾಗಮೋ ಭುಜಗನಗರೀಂ ಭೂಮಿಂ ಭಿತ್ತ್ವೋಪರೀವಸಮುತ್ಥಿತಾಂ ವಿಪುಲವೀಥಿಕಾಂ ಹೃದ್ಯಾಂ ವಿದ್ಯಾಪುರೀಂ ಸಮುಪಾಗಮತ್।**

ನರಸ ಭೂಪಾಲನು ಸ್ವಾಮಿಗಳಿಗೆ ವಿಜೃಂಭಣೆಯಿಂದ ಸ್ವಾಗತವನ್ನಿತ್ತನು. ವ್ಯಾಸರಾಯರು ತಮಗಾಗಿ ನರಸಿಂಹನೃಪತಿಯಿಂದ ಮೀಸಲಾಗಿರಿಸಿದ ಮಠ

ದಲ್ಲಿ ಇಳಿದು ಅಲ್ಲಿಯೇ ಇರಲಾರಂಭಿಸಿದರು. ಪಾಂಡವರು ವ್ಯಾಸನನ್ನು ಪೂಜಿಸಿದಂತೆ ವ್ಯಾಸರಾಯರನ್ನು ನರಸನೃಪನು ಸತ್ಕರಿಸಿದನು.

**ಅರ್ಚಯಂತಮಿಮಮರ್ಘ್ಯಪೂರ್ವಯಾ ಭಾಗಧೇಯಪರಿಣಾಮ**
**ಮಾತ್ಮನಃ।**
**ಪಾರ್ಥಿವಸ್ಸಪದಿ ಪರ್ಯಪೂಜಯತ್ ಪಾಂಡುಸೂನುರಿವ**
**ಬಾದರಾಯಣಂ ॥**

ಮತ್ತೊಂದೆಡೆಯಲ್ಲಿ ಪಾರ್ಥನು ಕೃಷ್ಣನನ್ನು ಪೂಜಿಸಿದಂತೆ ನರಸಭೂಪಾಲನು ವ್ಯಾಸರಾಯರನ್ನು ಸತ್ಕರಿಸಿವನೆಂದು ಸೋಮನಾಥ ಕವಿಯು ಅನ್ನುವನು.

೪. ವೀರನರಸಿಂಹನಾದರೂ ಸ್ವಾಮಿಗಳವರ ಸಂಗಡ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದನು. ಅವರೀರ್ವರ ನಡುವಿನಸಂಬಂಧವು ದಶರಥ ವಶಿಷ್ಠರ ಸಂಬಂಧದಂತೆಯೆ ಇದ್ದಿತು.

**ಅಜಾದಿವ ದಶರಥೋ ವಸಿಷ್ಠಂ ಪಿತುರಧಿಕಮೇವ**
**ಭಕ್ತಿಭಾರೇಣ ತಂ ಯತಿವರಿಷ್ಠಮಭ್ಯರ್ಚಯಾಮಾಸ।**

೫. ಕೃಷ್ಣದೇವರಾಯನಿಗಂತೂ ವ್ಯಾಸರಾಯರು ಕುಲದೈವತಪ್ರಾಯರಾಗಿದ್ದರು. ಅರಸನು ಸ್ವಾಮಿಗಳನ್ನು ಪ್ರತಿನಿತ್ಯ ಮೂರು ಬಾರಿ ಕಾಣುತ್ತಿದ್ದನು.

**ಚಿತ್ತಾನುವರ್ತಕೇನ ಭಾಗವತಮೂರ್ಧನ್ಯೇನ ತೇನ ಕೃಷ್ಣಮಹೀಪಾಲೇನ ತ್ರಿಸಂಧ್ಯಂ ಕುಲದೇವತೇವ ಮುಕುಟತಟಮಾಲತೀಕುಸುಮಶೇಖರೀಕ್ರಿಯಮಾಣನಖಮಯೂಖಜಾತೇ ಮಹಾನುಭಾವೇ × × × ಭಗವತಿ ತಸ್ಮಿನ್ ವ್ಯಾಸಯೋಗಿನಿ।**

ವೈಭವಶಾಲಿಯಾದ ವಿಜಯನಗರದ ಸಮ್ರಾಟನ ಮೇಲೆ ಇಷ್ಟೊಂದು ವರ್ಚಸ್ಸನ್ನು ಬೀರುವ ವ್ಯಾಸರಾಯರಲ್ಲಿ ಮೂದಲಿಕೆಯುಳ್ಳ ಎಷ್ಟೋ ಪಂಡಿತರು ವಿವಿಧ ನಾಡುಗಳಿಂದ ಬಂದು ಸ್ವಾಮಿಗಳವರನ್ನು ವಾದವಿವಾದದಲ್ಲಿ ಪ್ರತಿ ಭಟಿಸಿದರು. ರಾಯರ ಅಗಾಧ ಪಾಂಡಿತ್ಯದ ಮುಂದೆ ಅವರ ಆಟ ಸಾಗಲಿಲ್ಲ. ಅಂಥ ಪಂಡಿತರ ಹೆಸರುಗಳನ್ನು ವಿವರಿಸಿ ಪುರಂದರದಾಸರು ಕದವನ್ನೇ ಅಂದಿರುವರು,

ಏಸು ಮುನಿಗಳಿದ್ದೇನು ಮಾಡಿದರೊ ।
ವ್ಯಾಸ ಮುನಿ ಮಧ್ವಮತವನುದ್ಧರಿಸದ ॥ ಪಲ್ಲ ॥

ಕಾಶೀ ಗದಾಧರಮಿಶ್ರ ಪಕ್ಷಧರಾ ।
ವಾಸುದೇವ ವಾಜಿಪೇಯ ನಾರಸಿಂಹ ॥
ಭಾಸ್ಕರ ಲಿಂಗಣ್ಣ ರುದ್ರ ಮುಖ್ಯವಿ ।
ದ್ವಾಂಸರ ನೂರೆಂಟು ಮಂದಿಯ ವಾದದಿ ॥
ಜೈಸಿ ಜಯಪತ್ರಿಕೆ ಕೊಂಡವರವರ ।
ಲೇಸಾದ ಬಿರುದುಗಳೆಲ್ಲಪಹರಿಸಿ ॥
ಶ್ರೀಶಪುರಂದರವಿಠಲ ಕೃಷ್ಣಗೆ ಅ- ।
ರ್ಪಿಸಿ ಹರಿಪರನೆಂದು ಡಂಗುರವ ಹೊ- ।
ಯಿಸಿ ಮೆರೆದೆ ಸಂಯಮಿಕುಲದೀಪ ಶ್ರೀ ।
ವ್ಯಾಸಮುನಿಯೆ ನಿಮ್ಮಂಘ್ರಿಗೆ ನಮೋ ನಮೋ ॥

ವ್ಯಾಸರಾಯರ ಪಾಂಡಿತ್ಯಕ್ಕೆ ಮನಸೋತು ಕೃಷ್ಣರಾಯನು ಅವರಿಗೆ ರತ್ನಾಭಿಷೇಕವನ್ನು ಮಾಡಿದನು. ಈ ವಿಷಯವನ್ನು ಸೋಮನಾಥನು ವಿವರವಾಗಿ ಬರೆದಿರುವನು. ವ್ಯಾಸರಾಯರನ್ನು ಕರೆದು ತರಲು ಅರಸನು ಒಬ್ಬ ಮಂತ್ರಿಯನ್ನು ಕಳುಹಿದನು. ಅವನು ಸ್ವಾಮಿಗಳನ್ನು ಪ್ರಾರ್ಥಿಸಿ ಅಂದುದು,

ಸ್ವಾಮಿನ್ಭವಂತಂ ಸ್ವಯಮುದ್ಯರತ್ನೈ ।
ರಾಕಾಂಕ್ಷತೇ ಭೂರಮಣೋಭಿಷೇಕ್ತುಂ ॥
ಕೂಟಾಗ್ರಭಾಗಂ ಕುಲಭೂಧರಸ್ಯ ।
ಪ್ರಸೂನಜಾತೈರಿವ ಪಾರಿಜಾತಃ ॥

ತಂ ಭಕ್ತಿಪಲ್ಲವಿತಮಾಗಮನೋತ್ಸವೇನ ।
ಸ್ವಾಮಿನ್ ಪ್ರಸೀದ ಬಹುಮಂತುರಪಾರಕೀರ್ತೇ ।
ಪುಷ್ಪಾಂಜಲಿಃ ಪ್ರತಿಕಲಂ ಭಗವನ್ನರಸ್ಯ ।
ಕೋಣೇಪಿ ಯಃ ಕಲಯತೇ ಕುಲದೈವಭಾವಂ ॥

ವ್ಯಾಸರಾಯರು ಸ್ವಲ್ಪ ವಿಚಾರಿಸಿ ಒಪ್ಪಿಗೆಯನ್ನಿತ್ತರು,

**ಕ್ಷಣಂ ವಿಚಿಂತ್ಯ ಭಕ್ತವತ್ಸಲತಯಾ ಕರುಣಾಮಸೃಣಹೃದಯಃ**
**ಸಭಾಜಿಗಮಿಷಯಾ ಮಣಿಬೃಸೀವರಾದುದಸ್ಥಾತ್ |**

ಅರಮನೆಯಲ್ಲಿ ಮಂಡಿಸಿರುವ ಬಂಗಾರದ ಗದ್ದುಗೆಯ ಮೇಲೆ ಸ್ವಾಮಿಗಳನ್ನು ಕುಳ್ಳಿರಿಸಲಾಯಿತು. ಆ ಮೇಲೆ ಕೃಷ್ಣರಾಯನೇ ತನ್ನ ಕೈಯಿಂದ ರತ್ನಾಭಿಷೇಕವನ್ನು ಪ್ರಾರಂಭಿಸಿದನು.

**ಸ್ವಯಮೇವ ಕರಕಮಲೇನಾದಾಯ ಕನಕಕುಂಭಮಿಮಂ**
**ಭಗವಂತಂ ವ್ಯಾಸತಾಪಸಮಾದರಾನ್ಮಣಿಭಿರಭಿಷೇಕ್ತುಮಾರಭತ |**

ಬ್ರಾಹ್ಮಣರಿಗೆ ಕೊಟ್ಟುಳಿದ ರತ್ನಗಳನ್ನು ಕಲೆಹಾಕಿ ರಾಯರು, ಅಲ್ಲಿ ನೆರೆದ ಎಲ್ಲ ನಾಯಕರಲ್ಲಿ ಅವುಗಳನ್ನು ಹಂಚಿದರು. ಕುಹುಯೋಗದ ಸಮಯದಲ್ಲಿ ವ್ಯಾಸರಾಯರು ವಿಜಯನಗರದ ಸಿಂಹಾಸನವನ್ನಲಂಕರಿಸಿದುದರಿಂದ, ಅವರಿಗೆ **ವಿದ್ಯಾಸಿಂಹಾಸನಾಧಿಪತಿ** ಎಂಬ ಬಿರುದು ಬಂದಿತು. ಅದನ್ನು ಈಗ್ಗೆಯೂ ಸೋಸಲೆಮಠದ ಸ್ವಾಮಿಗಳು ಧರಿಸಿರುವುದುಂಟು. ಅಂದಿನಿಂದಲೆ ಶ್ರೀವ್ಯಾಸರಾಯರಿಗೆ **ದೀವಟಿಗೆ ಸಲಾಮಿನ ಮಾನವು** ದೊರೆಯಿತು. ಅದೂ ಮತ್ತೊಂದಾಸೋಸಲೆಮಠದ ಬಿರುದು.

ಕೃಷ್ಣರಾಯನಿಗೆ ಕುಹುಯೋಗವು ಪ್ರಾಪ್ತವಾದಾಗ ವ್ಯಾಸರಾಯರು, ತಿರುಪತಿಯಲ್ಲಿ ಶ್ರೀನಿವಾಸನ ಅನುಷ್ಠಾನದಲ್ಲಿ ತೊಡಗಿದ್ದಂತೆ ತೋರುತ್ತದೆ. ಕುಹುಯೋಗವು ಪೂರ್ಣವಾಗಿ ತೀರಿದ ಬಳಿಕ ಕೃಷ್ಣರಾಯನು ವ್ಯಾಸಮುನಿಗಳಿಗೆ, ಸದ್ಯಕ್ಕೆ ವ್ಯಾಸಸಮುದ್ರವೆಂದು ಕರೆಯಲಾಗುವ ಗ್ರಾಮವನ್ನು ಉಂಬಳಿಯಾಗಿ ಕೊಟ್ಟನು. ವ್ಯಾಸರಾಯರು ಅಲ್ಲಿಗೆ ಹೋಗಿ, ಒಂದು ದೊಡ್ಡ ಕೆರೆಯನ್ನು ಕಟ್ಟಿಸಿದರು (೧೫೨೪-೨೬). ಆ ಕೆರೆಗೆ ವ್ಯಾಸಸಮುದ್ರವೆಂಬ ಹೆಸರು.

**ಗ್ರಾಮೋ ವ್ಯಾಸಸಮುದ್ರನಾಮನಿ ತತಸ್ತೇನ ಪ್ರತಿಷ್ಠಾಪಿತೇ |**
**ತೇನಾಖಾನಿ ಯತೀಶ್ವರೇಣ ಭುವನಶ್ಲಾಘ್ಯಸ್ತಟಾಕೋಮಹಾನ್ ||**
**ನಿಘ್ರಾತುಂ ಸಜುಗುಪ್ಸಿತೇನ ಮುನಿನಾ ಪೀತೋಽಪಿ ತತ್ಸಾಗರೋ |**
**ದೈತ್ಯಾರೇರಪರಾಂಬುರಾಶಿರಿವ ಯಃಶುದ್ಧಾಂಬುರುತ್ಪಾದಿತಃ ||**

ಕೃಷ್ಣರಾಯನ ಮಗುವಾದ ತಿರುಮಲರಾಯನು ಚಿಕ್ಕಂದಿನಲ್ಲಿ ತೀರಿಕೊಂಡನು. ರಾಯನಿಗೆ ಅನಿವಾರ ದುಃಖವಾಯಿತು. ದೇಹದ ಆರೋಗ್ಯವೂ

ಚೆನ್ನಾಗಿ ಉಳಿಯಲಿಲ್ಲ. ಆದುದರಿಂದ ಅವನು ತನ್ನ ತಮ್ಮನಾದ ಅಚ್ಯುತ ರಾಯನಿಗೆ ಪಟ್ಟಗಟ್ಟಿದನು. ಅವಸಾನಕಾಲವು ಸಮೀಪಿಸುತ್ತಲೆ, ಕೃಷ್ಣ ರಾಯನು ಸ್ವಾಮಿಗಳ ಕೊನೆಯ ದರ್ಶನ ತೆಗೆದುಕೊಂಡು ಪರಂಧಾಮ ವನ್ನೈದಿದನು (೧೫೩೦).

**ತತ್ರ ಸ ಮಹೀಪತಿರ್ಭಗವಂತಂ ಯತಿಮಘವಂತಂ**
**ನಮಸ್ಕೃತ್ಯ ವಿದಾಂವರ ಪರಲೋಕಪಥಾಧಿರೋಹಿಣೀಮಿವ**
**ತಸ್ಯ ಮಹತೀಮಾಶಿಷಮಾದರೇಣಾದಾಯ ಪ್ರಯಾಣೇ**
**ಲೀಲಾವಿಷಯೀಕೃತನಂದನಸ್ಯ ದೇವಕೀನಂದನಸ್ಯ ಪುನರಪಿ**
**ಸ್ಮಾರಯನ್ನಂಬರೌಕಃ ಕದಂಬಾನಿ ಬಹುಜನ್ಮ ಸುಕೃತೇನ ವಾಸವ-**
**ವಾಸ್ತವ್ಯಭಾವಮಭಜತ ।**

೬. ಕೃಷ್ಣರಾಯನ ತರುವಾಯ ಅಚ್ಯುತರಾಯನು ವಿಜಯನಗರದ ಅರಸನಾದನು ಅವನು ಕೂಡ ಕೃಷ್ಣರಾಯನಂತೆಯೆ ವ್ಯಾಸರಾಯರ ಚಿತ್ತಾ ನುವರ್ತಕನಾಗಿದ್ದನು.

**ಪರಮಭಾಗವತವಿನಯವಿತರಣಪರಾಕ್ರಮಾದಿಭಿರ್ಗುಣೈಃ**
**ಪೂರ್ವಾತಿಶಯಾಲುರಾಶ್ರೀಮದಚ್ಯುತರಾಯಮಹಾರಾಜೇನ**
**ಸ ಭಗವಾನ್ ವ್ಯಾಸತಪೋನಿಧಿರ್ವಿಸಭಜಕಮಹಾಪೂಜನ-**
**ವಿಶೇಷಂ ಕಂಚಕಪಾಲಂ ಪರ್ಯಪೂಜತಾ ತತಃ ಕದಾಚನ**
**ತತ್ರ ಭಗವತೋ ವ್ಯಾಸತಾಪಸಸ್ಯ ಚಿತ್ತಾನುವರ್ತಕಃ × × × ।**

ವ್ಯಾಸಮಹರ್ಷಿಗಳು ವಿಜಯನಗರದಲ್ಲಿಯೆ ೧೫೩೯ ರಲ್ಲಿ ದೇಹ ವನ್ನಿಟ್ಟರು. ಅವರ ವೃಂದಾವನವು ತುಂಗೆಯ ತೀರದಿಲ್ಲಿಯೆ ಇದೆ. ಸದ್ಯಕ್ಕೆ ನವವೃಂದಾವನಗಳೆಂದು ಕರೆಯಲ್ಪಡುವ ವೃಂದಾವನಗಳಲ್ಲಿ ಅದೊಂದು. ವ್ಯಾಸರಾಯರ ಅವಸಾನಕಾಲದಲ್ಲಿ ಪುರಂದರದಾಸರು ಅಲ್ಲಿಯೆ ಇದ್ದರು. ಪುರಂದರದಾಸರನ್ನುವುದು,

ಚಿತ್ತೈಸಿದ ವ್ಯಾಸರಾಯ ।
ಚಿತ್ತಜನಯ್ಯನ ಸಭೆಗೆ ॥ ಪ ॥
ಮುಕ್ತ ಮುತ್ತೈದೆಯರೆಲ್ಲ ।
ರತ್ನದಾರತಿಯೆತ್ತೆ ॥ ಅ ॥

ವಿಳಂಬಿ ಸಂವತ್ಸರ ವಿಜಯನಗರದಲ್ಲಿ ।
ಫಾಲ್ಗುಣ ಬಹುಳ ಚವುತಿ ಸ್ಥಿರವಾರದಿ ।
ಬೆಳಗೊಪ್ಪ ಜಾವದಲಿ ಕುಳಿತ ಪದ್ಮಾಸನದಿ ।
ನಳಿನಾಕ್ಷನಾರಾಯಣನೆಂದು ಕೈಮುಗಿದು ॥

ವ್ಯಾಸರಾಯಮಠದ ವರ್ಚಸ್ಸು ವಿಜಯನಗರದ ಅರಸುಮನೆತನದ ಮೇಲೆ ಕೊನೆಯವರೆಗೆ ನೆಲಸಿತ್ತೆಂದು ಹೇಳಬಹುದು. ರಾಕ್ಷಸದಂಗಡಿಯ ನಂತರ ವಿಜಯನಗರದವರು ಪೆನುಗೊಂಡೆ, ಚಂದ್ರಗಿರಿ, ವೆಲ್ಲೂರುಗಳಲ್ಲಿ ತಮ್ಮ ನೆಲೆವೀಡುಗಳನ್ನು ಏರ್ಪಡಿಸಿದರು. ವ್ಯಾಸರಾಯರ ನಂತರ ಪೀಠಕ್ಕೆ ಬಂದ ಶ್ರೀನಿವಾಸತೀರ್ಥರ ಹಾಗೂ ರಾಮಚಂದ್ರತೀರ್ಥರ ತುಳಸೆಯಕಟ್ಟೆಗಳು ವಿಜಯನಗರದ ನವವೃಂದಾವನಗಳಲ್ಲಿವೆ. ಲಕ್ಷ್ಮೀಕಂಠತೀರ್ಥರ ವೃಂದಾವನವು ಪೆನುಗೊಂಡೆಯಲ್ಲಿದೆ. ಶ್ರೀಪತಿತೀರ್ಥರು ಮತ್ತು ಅವರ ಶಿಷ್ಯರಾದ ರಾಮಚಂದ್ರತೀರ್ಥರು ವೆಲ್ಲೂರಿನಲ್ಲಿ ವೃಂದಾವನ ಸೇರಿದರು. ಕೊನೆಗೆ ನಿಕೃಷ್ಟಾವಸ್ಥೆಯನ್ನು ತಲುಪಿ ವಿಜಯನಗರದ ಅರಸನು ಬೇಲೂರಿನಲ್ಲಿರ ತೊಡಗಿದನು. ಅಲ್ಲಿಯೂ ವಿಷ್ಣುಸಮುದ್ರದ ದಡದಲ್ಲಿ ಲಕ್ಷ್ಮೀತೀರ್ಥರ ತುಳಸೆಯ ಕಟ್ಟೆಯು ನೆಲಸಿದ್ದುದು ಕಂಡುಬರುತ್ತದೆ.

---

## ೭ ವ್ಯಾಸರಾಯರೂ ದಾಸಕೂಟವೂ.

### ೧ ವ್ಯಾಸರಾಯರು.

ವ್ಯಾಸರಾಯರು ಘನವಿದ್ವಾಂಸರು. ' ರಾಯರು ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ, ಮಂದಾರಮಂಜರೀ ಮುಂತಾದ ಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದರು. ಶ್ರೀಮದಾಚಾರ್ಯರ ಸೂತ್ರಭಾಷ್ಯದ ಮೇಲೆ ಶ್ರೀಜಯತೀರ್ಥರು ಬರೆದ ತತ್ವಪ್ರಕಾಶಿಕಾ ಎಂಬ ಟೀಕಾತ್ಮಕ ಗ್ರಂಥಕ್ಕೆ ಚಂದ್ರಿಕೆಯು ಟಿಪ್ಪಣಿರೂಪವಾದ ಪ್ರೌಢಗ್ರಂಥ ಆದುದರಿಂದ ವ್ಯಾಸರಾಯರಿಗೆ ' ಚಂದ್ರಿಕಾಚಾರ್ಯ ' ಎಂಬ ಮತ್ತೊಂದು ಹೆಸರು ಬಿದ್ದಿತು. ನ್ಯಾಯಾಮೃತವು ಅದ್ವೈತಸಿದ್ಧಿಯೆಂಬ ಗ್ರಂಥದ ಖಂಡನವಾಗಿರುವುದು. ತಾರ್ಕಿಕರ ಖಂಡನದ ಸಲುವಾಗಿಯೆ ತರ್ಕತಾಂಡವವು ಪ್ರವೃತ್ತವಾದುದು. ಈ ಮೂರು ಗ್ರಂಥಗಳಿಗೆ ವ್ಯಾಖ್ಯಾನತ್ರಯೀ ಎಂಬ ಹೆಸರು. ಮಂದಾರಮಂಜರೀ ಎಂಬ ಹೆಸರಿನ ಮೂರು ಹೊತ್ತಿಗೆಗಳು—ಮಾಯಾವಾದ ಖಂಡನ, ಮಿಥ್ಯಾತ್ವಾನುಮಾನಖಂಡನ, ಉಪಾಧಿಖಂಡನ—ಮಧ್ವಾಚಾರ್ಯರ ಗ್ರಂಥಗಳ ಮೇಲಿರುವ ಜಯತೀರ್ಥರ ಟೀಕೆಗಳಿಗೆ ಟಿಪ್ಪಣಿಗಳಾಗಿರುವುವು.

ವಿಜಯನಗರದ ವ್ಯಾಸರಾಯರ ಮಠವೆಂದರೆ ಅದೊಂದು ಆ ಕಾಲದ ವಿಶ್ವವಿದ್ಯಾಲಯವೇ. ವ್ಯಾಸರಾಯರ ವಿದ್ವತ್ತೆಗೆ ಮರುಳಾಗಿ ಅನೇಕ ಜನ ವಿದ್ಯಾರ್ಥಿಗಳು ವಿಜಯನಗರಕ್ಕೆ ಬರುತ್ತಿದ್ದರು. ಅಂತಹ ಸಚ್ಛಿಷ್ಯರೊಳಗೆ ಉಡುಪಿಯ ವಾದಿರಾಜರೂ ವಿಜಯೀಂದ್ರರೂ ಅಗ್ರಗಣ್ಯರು. ಇವರಲ್ಲದೆ, ರಾಯರ ಮಠದಲ್ಲಿ ಶ್ರೀನಿವಾಸತೀರ್ಥರು, ರಾಮತೀರ್ಥರು, ರಘುಪತಿತೀರ್ಥರು, ಸುಧೀಂದ್ರತೀರ್ಥರು, ಸುರೇಂದ್ರತೀರ್ಥರು, ಗೋವಿಂದ ಒಡೆಯರೇ ಮೊದಲಾದ ಯತಿವರ್ಯರಿದ್ದರು. ಪುರಂದರದಾಸರು ಈ ವಿಷಯದಲ್ಲಿ ಹಾಡಿದುದು,



ವಿಜಯನಗರದ ವ್ಯಾಸರಾಯರ ಮಠ.

( ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ. )

## ವಿಜಯನಗರದ ನವವೃಂದಾವನ.



ವೃಂದಾವನಸ್ಥರಾದ ಯತಿಗಳು:—೧ ಪದ್ಮನಾಭತೀರ್ಥರು, ೨ ಕವೀಂದ್ರತೀರ್ಥರು, ೩ ವಾಗೀಶತೀರ್ಥರು, ೪ ವ್ಯಾಸತೀರ್ಥರು, ೫ ರಘುವರ್ಯತೀರ್ಥರು, ೬ ಸುಧೀಂದ್ರತೀರ್ಥರು, ೭ ಶ್ರೀನಿವಾಸತೀರ್ಥರು, ೮ ರಾಮಚಂದ್ರತೀರ್ಥರು, ೯ ಗೋವಿಂದ ಒಡೆಯರು.

(ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ )

ಸಿರಿನಾರಾಯಣಯೋಗಿ ಶ್ರೀಪಾದರಾಯರಲ್ಲಿ |
ವರವಿದ್ಯಾಭ್ಯಾಸವ ಮಾಡಿ ಭಕುತಿಯಿಂದ |
ಪಿರಿದಾಗಿ ವಿಜಯೀಂದ್ರ ವಾದಿರಾಜ ಎಂಬೊ |
ಪರಮ ಶಿಷ್ಯರ ಪಡೆದು ಮೆರೆದೆ ಜಗತಿಯೊಳಗೆ ||

ಪಾಂಡಿತ್ಯಕ್ಷೇತ್ರದಲ್ಲಿ, ವಿದ್ಯಾವಿತರಣದಲ್ಲಿ, ವೈಭವದಲ್ಲಿ, ರಾಯರು ಹೆಸರುವಾಸಿಗಳಾಗಿದ್ದರೂ, ಭಕ್ತಿಶೂನ್ಯರಾಗಿರಲಿಲ್ಲ. ಭಾಗವತಪಂಥಕ್ಕೆ ಸೇರಿದ ಪುರಂದರದಾಸರು, ವಾದಿರಾಜರು, ಕನಕದಾಸರೆ ಮುಂತಾದವರ ಸಂಗಡ ಅವರೂ ಮಹಾಭಾಗವತರಾಗಿದ್ದರು. ಭಗವದ್ಭಕ್ತಿಯ ಸೊಬಗು ಸರ್ವಸಾಧಾರಣ ಜನರಿಗೆ ಸುಲಭಸಾಧ್ಯವಾಗಬೇಕೆಂದು ರಾಯರು ಭಕ್ತಿ ಪರವಾದ ಅನೇಕ ಕನ್ನಡ ಪದಗಳನ್ನು ರಚಿಸಿದರು. ಮೇಲೆ ವಿವರಿಸಿದ ದಾಸರ ಹಿರಿದಾಸರಾದರು. ಪಾಂಡಿತ್ಯತರ್ಕಗಳಿಂದ ಸುಸಂಸ್ಕೃತವಾದ ನಿರ್ಮಲ ಮನಸ್ಸಿನಿಂದ ರಾಯರು ಭಕ್ತಿಪರವಾದ ಪದಗಳನ್ನು ತಮ್ಮ ತಾಯಿ ನುಡಿಯಲ್ಲಿ ಅಂದಿರುವರು. ಅವುಗಳಿಗೆ "ಶ್ರೀಕೃಷ್ಣನ" ಅಂಕಿತವಿದೆ. ಕನ್ನಡದಲ್ಲಿ ಅಭಿಮಾನವಿರುವವರು ಅವನ್ನು ಅವಶ್ಯವಾಗಿ ಓದಿಯೇ ತೀರ ಬೇಕು.

ಪುರಂದರದಾಸರು ರಾಯರನ್ನು ಕಣ್ಣಾರೆ ಕಂಡು ಅಂದಿರುವುದು,

ವ್ಯಾಸರಾಯರ ದಿವ್ಯಚರಣವ ಕಂಡೆ |
ಏಸು ಜನ್ಮದ ಸುಕೃತಫಲವೊದಗಿತೋ ಎನ್ನ |
ಸಾಸಿರ ಕುಲಕೋಟಿ ಪಾವನ್ನವಾಯಿತು |
ಶ್ರೀಶನ ಭಜಿಸುವ ಅಧಿಕಾರಿ ನಾನಾದೆ |
ದೋಷವಿರಹಿತ ಶ್ರೀಪುರಂದರ ವಿಟ್ಠಲನ |
ದಾಸರ ಕರುಣವು ಎನ್ನ ಮೇಲಿರಲಾಗಿ ||

ಪುರಂದರದಾಸರಿಗೆ ವ್ಯಾಸರಾಯರೆ ಮಂತ್ರೋಪದೇಶವನ್ನು ಮಾಡಿದರು. ಇದಲ್ಲದೆ, ರಾಯರೆ, ದಾಸರಿಗೆ "ಪುರಂದರವಿಟ್ಠಲ,"ನ ಅಂಕಿತವನ್ನಿತ್ತರೆಂದು ತಿಳಿಯುತ್ತದೆ ಮೇಲಾಗಿ ವ್ಯಾಸಮುನಿಗಳ ಆಜ್ಞೆಯ ಮೇರೆಗೆ ಪುರಂದರ ದಾಸರು, ೪೭೫೦೦೦ ಪದಗಳನ್ನು ರಚಿಸಿದರೆಂದು ತಿಳಿಯುತ್ತದೆ. ಇದರ ವಿಷಯದಲ್ಲಿ ಪುರಂದರದಾಸರು ಹಾಡಿದುದು,

ವಾಸುದೇವನ ನಾಮಾವಳಿಯು ಕ್ಲಪ್ತಿಯನು |
ವ್ಯಾಸರಾಯರ ದಯದಿಂದ ಬಣ್ಣಿಪೆನು ॥ ಪಲ್ಲ ॥

ಕೇದಾರ ರಾಮೇಶ್ವರ ಕೇರಳ ಭೂತಳದ |
ಪಾದಾರವಿಂದ ಕ್ಷೇತ್ರ ಪ್ರತಿ ಕ್ಷೇತ್ರವು |
ಆದರದಿ ಲಕ್ಷದಿಪ್ಪತ್ತೈದುಸಾವಿರ ಕೃತಿಯು |
ವೇದಶಾಸ್ತ್ರಪುರಾಣಸಮ್ಮತದಿಂದ ॥

ಮಧ್ವರಾಯರ ಮಹಿಮೆ ಮಹಗುರುಪರಂಪರೆ ಪ್ರ |
ಸಿದ್ಧ ವ್ಯಾಸರಾಯರ ಪರಿಯಂತವು |
ಶುದ್ಧ ತಂತ್ರಸಾರೋಕ್ತಿ ಸೇವಕ ತಾರತಮ್ಯ |
ಉದ್ಧರಿಸಿದ್ದೈದು ಸಾವಿರವ ಪೇಳಿದೆನು ॥

ಬ್ರಹ್ಮಲೋಕ ಕೈಲಾಸ ಭರದಿ ದಿಕ್ಪಾಲರ |
ಪೆರ್ಸೆತೊಂಬತ್ತು ಸಾವಿರದಿ ಪೇಳಿದೆನು |
ಸಮ್ಮತದಿ ಹಲವು ಕಥಾಸಾರ ತೊಂಬತ್ತು ಸಾವಿರ |
ಪೊಮ್ಮನದಿ ಪೇಳಿದೆನು ಕೇಳಿ ಜನರು ॥

ಅವರವರ ಮೂರ್ತಿಧ್ಯಾನ ಅವರವರ ಕೀರ್ತಿಮಾನ |
ವಿವರದಿಂದಲಿ ನಾ ನಿಮಗೆ ವಿಸ್ತರಿಸಿದೆನು |
ಘನತೆಯಗಣಿತ ಗಂಡಕಿಯ ಶಿಲಾಮೂರ್ತಿ |
ಅನಘಕಲ್ಯಾಣಕಥೆ ಅರವತ್ತು ಸಾವಿರ ॥

ಅಹ್ನಿಕಗುಣವು ಜನ್ಮಾಷ್ಟಮಿಯೇಕಾದಶಿ |
ನಿರ್ಣಯವನು ಶೃತಿಸ್ಮೃತಿಸಹಿತದಿ |
ವರ್ಣಿಸಿದೆ ಕ್ಷೀರಾಬ್ಧಿಶಯನ ಅಹೋಬಲ ನರ |
ಸಿಂಹ ಮೂರ್ತಿಗಳ ಶ್ರೀನಾಮಗಳ ॥

ಸುಳಾದಿ ಅರವತ್ತು ನಾಲ್ಕು ಸಾವಿರ ಬಹುತರ ನಾಮಾ |
ವಳಿಯ ಇಪ್ಪತ್ತೈದು ಸಾವಿರವಾಗಿವೆ |
ತಿಳಿದು ಶ್ವೇತದ್ವೀಪ ಅನಂತಾಸನ ವೈಕುಂಠ |
ಸಲೆಶೇಷನ ಚರಿತ್ರೆಯನು ಪೇಳಿದೆನು ॥

ಇಂತು ನಾಲ್ಕುಲಕ್ಷ ಎಪ್ಪತ್ತೈದು ಸಾವಿರಕೃತಿಯ |
ಕಂತು ಜನಕನ ನಾಮಘನಮಹಿಮೆ |
ಸಂತಸದಿ ಶೃತಿಸ್ಮೃತಿ ಸಮ್ಮತದಿಂದ |
ಪುರಂದರ ವಿಠಲ ವ್ಯಾಸಮುನಿಗಳು ಪೇಳಿಸಿದರು ||

## ೨. ವಾದಿರಾಜರು.

ದಾಸಕೂಟಕ್ಕೆ ಸೇರಿದ ರಾಯರ ಶಿಷ್ಯರಲ್ಲಿ ರಾಜರೆ ಅಗ್ರಗಣ್ಯರು. ಗುರುಗಳಂತೆಯೆ ಶಿಷ್ಯರು ಘನಪಂಡಿತರು, ಗ್ರಂಥಕರ್ತೃಗಳು. ರಾಜರ ವಾಗ್ಮಿತನಕ್ಕಾಗಿ ಅವರಿಗೆ "ವಾದಿರಾಜ" ಎಂಬ ಬಿರುದು ಶ್ರೀವಾದಿರಾಜರು ಪ್ರೌಢಕವಿಗಳು. ಪಂಡಿತರಿಗೆ ಮಾನ್ಯವಾಗಿರುವಂತಹ 'ರುಕ್ಮಿಣೀಶ ವಿಜಯ' ಎಂಬ ಸರಸ ಸಂಸ್ಕೃತ ಕಾವ್ಯವನ್ನು ರಚಿಸಿರುವರು. ಆದರೂ ಅವರು ಕನ್ನಡ ನುಡಿಯನ್ನು ಮರೆತಿರಲಿಲ್ಲ. ರಾಜರು ಕನ್ನಡದಲ್ಲಿ ಅನೇಕ ಪದಗಳನ್ನು, ಸುಳಾದಿಗಳನ್ನು ಹಾಗು ಗುಂಡಕ್ರಿಯೆಗಳನ್ನು ರಚಿಸಿರುವರು. ಅವು ಈ ಹೊತ್ತಿಗೂ ಜನರ ಬಾಯಲ್ಲಿವೆ. ಇವುಗಳಲ್ಲದೆ, ಕವಿಗಳಾದ ರಾಜರು, ಮಹಾಭಾರತತಾತ್ಪರ್ಯನಿರ್ಣಯ, ವೈಕುಂಠವರ್ಣನೆ, ಸ್ವಪ್ನ ಗದ್ಯ, ಭ್ರಮರಗೀತೆ, ಲಕ್ಷ್ಮೀಶೋಭನ ಮೊದಲಾದ ಕಾವ್ಯಗಳನ್ನು ಬರೆದರು. ಆದರೂ ಕನ್ನಡ ಕಾವ್ಯಪ್ರಪಂಚದಲ್ಲಿ ಹೆಸರು ಪಡೆಯತಕ್ಕ ಸಾದ್ಯಂತವಾದ ಕಾವ್ಯವನ್ನು ರಾಜರು ಬರೆದಿರುವುದಿಲ್ಲವೆಂದು ಹೇಳಬಹುದು. ರಾಜರ ಪದಗಳಿಗೆ "ಹಯವದನ" ನ ಅಂಕಿತವಿದೆ.

ಕನಕದಾಸರು ರಾಜರಿಗೆ ತ್ರಿವಿಕ್ರಮದಾಸರೆಂದು ಸಂಬೋಧಿಸಿರುವರೆಂದು ಹೇಳಲಾಯಿತಷ್ಟೆ. ಒಂದು ಪದದಲ್ಲಿ ಅವರು ರಾಜರ ಹೆಸರನ್ನೇ ವಿವರಿಸಿರುವರು.

ಮಗುವು ಕಾಣಿರಯ್ಯ | ಮಾಯದ | ಮಗುವು ಕಾಣಿರಯ್ಯ || ಪ ||
ಸುಗುಣ ವಾದಿರಾಜರೆ ಮೂ | ಜಗವನು ತನ್ನುದರದೊಳಿಟ್ಟ || ಅ ||

## ೩. ಪುರಂದರದಾಸರು.

ಪುರಂದರದಾಸರು ವೈರಾಗ್ಯವನ್ನು ತಾಳಿ, ವ್ಯಾಸರಾಯರ ಸನ್ನಿಧಿಗೆ ಬಂದು ಮಂತ್ರೋಪದೇಶವನ್ನು ಪಡೆದರೆಂದು ಹೇಳಿದೆಯಷ್ಟೆ. ಆ ವಿಷಯದಲ್ಲಿ ದಾಸರೇ ಅಂದುದು,

ಗುರು ವ್ಯಾಸರಾಯರು ಕರುಣದಿಂದ ಎನಗೆ ।
ವರಮಹಾಮಂತ್ರಗಳ ಉಪದೇಶಿಸಿ ।
ಪುರಂದರ ವಿಟ್ಠಲನೆ ಪರನೆಂದರುಹಿ ।
ದುರಿತಗಳನೆಲ್ಲ ಪರಿಹರಿಸಿದರಾಗ ॥

ರಾಯರು ಅಂಕಿತವನ್ನಿತ್ತ ಸಂದರ್ಭದೊಳಗೆ ದಾಸರನ್ನುವುದು,

ಅಂಕಿತವಿಲ್ಲದ ದೇಹ ನಿಷಿದ್ಧವು ।
ಅಂಕಿತವಿಲ್ಲದ ಕಾರ್ಯಶೋಭಿಸದು ।
ಅಂಕಿತವಿಲ್ಲದಲಿರಬಾರದೆಂದು ಚ ।
ಕ್ರಾಂಕಿತವನ್ನು ಕೊಟ್ಟು ಎನಗೆ ।
ಪಂಕಜನಾಭ ಪುರಂದರವಿಠಲನ ।
ಅಂಕಿತವೆನಗಿತ್ತ ಗುರುವ್ಯಾಸಮುನಿರಾಯ ॥

ರಾಯರು ತಮ್ಮ ಶಿಷ್ಯರಾದ ಪುರಂದರದಾಸರ ಯೋಗ್ಯತೆಯನ್ನು ಚೆನ್ನಾಗಿ ಅರಿತಿದ್ದರು. ಅವರ ಭಕ್ತಿ, ತ್ಯಾಗ, ವೈರಾಗ್ಯಗಳು, ರಾಯರನ್ನೂ ಮೋಹಗೊಳಿಸಿದ್ದುವು. ಪುರಂದರ ದಾಸರ ವೈರಾಗ್ಯವು ತಮ್ಮಲ್ಲಿ ಬರಲಿಲ್ಲವೆಂದು ರಾಯರು ಮಮ್ಮಲ ಮರುಗಿದುದುಂಟು. ದಾಸರನ್ನು ಕಂಡು ರಾಯರು ಹರ್ಷಪುಳಕಿತರಾಗಿ ಹಾಡಿದುದು,

ಕಂಗಳಿಗೆ ಹಬ್ಬವಾಯಿತಯ್ಯಾ ।
ಮಂಗಳಾತ್ಮರ ಪುರಂದರದಾಸರ ಕಂಡು ॥ ಪ ॥
ಧನ್ಯನಾದೆನು ನಾನು ಮನುಜದೇಹಕೆ ಬಂದು ।
ಮಾನ್ಯನಾದೆನು ನಾನು ಸದ್ಭಕ್ತಿಪಥವಿಡಿದು ।
ಸನ್ನುತಿಸಿ ಮನದೊಳು । ನಮಸ್ಕರಿಸಿ ಮೋದದಿ । ಮನ್ನಿಸಿ ಇವರುಕ್ತಿಯುಕ್ತಿಗಳ ।
ಅನ್ಯತ್ರ ಮನವಿಡದೆ ಅಲ್ಪೋಕ್ತಿ ಜರಿದೆನಾ ।
ನನ್ನದೆಂಬುದ ಮರೆತು ಶುದ್ಧಾತ್ಮ ನಾನಾದೆ ।
ಪನ್ನಗಶಾಯಿ ಶ್ರೀಕೃಷ್ಣನ್ನದಾಸರ ।
ಸನ್ಮಹಿಮೆಗಳನ್ನು ಸ್ತುತಿಸಿ ಪಾವನನಾದೆ ॥



ಸೋದೆಯ ವಾದಿರಾಜರ ವೃಂದಾವನ.

( ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ. )



ಸೋದೆಯ ವೃಂದಾವನದೊಳಗಿನ ವಾದಿರಾಜರ ಮೂರ್ತಿ.

(ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ)

ಮತ್ತೊಂದೆಡೆಯಲ್ಲಿ ರಾಯರು ದಾಸರಸಂಬಂಧವಾಗಿ ಗೌರವಪರನುಡಿಯ ನ್ನಾಡಿದುದು,

ದಾಸರೆಂದರೆ ಪುರಂದರ ದಾಸರಯ್ಯಾ ॥ ಪ ॥
ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ ॥ ಅ ॥
ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ।
ವಾತಸುತನಲ್ಲಿಹನ ವರ್ಣಿಸುತಲಿ।
ಗೀತ ನರ್ತನದಿಂದ ಕೃಷ್ಣನ್ನ ಪೂಜಿಸುವ।
ಪೂತಾತ್ಮ ಪುರಂದರದಾಸರಿವರೈಯ ॥

ಪುರಂದರದಾಸರು ಪದಗಳನ್ನಷ್ಟೇ ಹೇಳಿದರು. ಕಾವ್ಯಗಳನ್ನು ರಚಿಸ ಲಿಲ್ಲ. ದಾಸರು ವಿಜಯನಗರದಲ್ಲಿಯೆ ದೇಹವನ್ನಿಟ್ಟರು (೧೫೬೪). ಈ ವಿಷಯವಾಗಿ ಪುರಂದರದಾಸರ ಮಗ ಮಧ್ವಪತಿಯು ಹಾಡಿದುದು,

ತೆರಳಿದರು ಪುರಂದರದಾಸರಾಯರು ॥ ಪ ॥
ತೆರಳಿದ ಭೇರಿದುಂದುಭಿ ಮೊರೆಯುತಲಿರೆ।
ಪುರಂದರದಾಸರು ನಿಜವೈಕುಂಠಕ್ಕೆ ॥ ಅ ॥
ವಿದ್ಯಾನಗರದಿ ವಿಠಲಸನ್ನಿಧಿಯಲ್ಲಿ।
ಪೊದ್ದಿದ ಭಾಗವತ ಸಮ್ಮೇಳದಿ ॥
ವೈಕುಂಠಕೆ ಭೂಮಿಗೆ ಹರಿನಾಮದ।
ಸೋಪಾನ ಮಾಡಿ ಭಕ್ತರಿಗೆ ಮಾರ್ಗವ ತೋರಿ ॥
ಅಚ್ಚಗನ್ನಿಕೆಯರಾರತಿಗಳನೆತ್ತಲು।
ಅಚ್ಯುತನಿದ್ದೆಡೆಗತಿಸಂಭ್ರಮದಿಂದ ॥
ರಕ್ತಾಕ್ಷಿಸಂವತ್ಸರ ಪುಷ್ಯಬಹುಳ।
ದತಿಶಯದಮಾವಾಸ್ಯ ಮಂದವಾರ ॥
ಗುರು ಮಧ್ವಪತಿ ವಿಠಲನಧರೆಗೆ ತೋರಿ।
ಪುರಂದರದಾಸರು ನಿಜವೈಕುಂಠಕ್ಕೆ ॥

## ೪. ಕನಕದಾಸರು.

"ರಾಯರು ವ್ಯಾಸಸಮುದ್ರವನ್ನು ಕಟ್ಟಿಸುವ ಮುಂದೆ, ಕನಕದಾಸರಿಗೆ ಅವರ ಪ್ರಥಮ ಸಂದರ್ಶನವಾಯಿತು," ಎಂಬ ಕತೆಯು ಜನರ ಬಾಯ

ಲ್ಲುಂಟು. ದಾಸರ ಕೃತಿಗಳಲ್ಲಿ ರಾಯರ ಸಂದರ್ಭದ ಸಂಗತಿಗಳೆ ದೊರೆಯು ವುದಿಲ್ಲ. ಪುರಂದರ ದಾಸರು, ರಾಯರ ಹಾಗೂ ರಾಜರ ಸಂಬಂಧವನ್ನು ಒಂದು ಪದದಲ್ಲಿ ತೋರಿಸಿರುವಂತೆ, ತಮ್ಮ ಮತ್ತೊಂದು ಹಾಡಿನಲ್ಲಿ, ರಾಯರ ಹಾಗೂ ಕನಕದಾಸರ ಸಂಬಂಧವನ್ನು ಪ್ರಕಟಗೊಳಿಸಿರುವರು. ಆ ಹಾಡು,

ಕನಕದಾಸನ ಮೇಲೆ ದಯಮಾಡಲು ವ್ಯಾಸ- ।
ಮುನಿ ಮಠದವರೆಲ್ಲ ದೂರಿಕೊಂಬುವರೊ ॥ ಪ ॥
ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು ।
ಧೂರ್ತರಾಗಿದ್ದ ವಿದ್ವಾಂಸರೆಲ್ಲ ।
ಸಾರ್ಥಕಾಯಿತು ಇವರ ಸನ್ಯಾಸಿತನವೆಲ್ಲ ।
ಪೂತ್ಕಾರಗಲೆಂತೆನಲು ಯತಿಯು ನಗುತಿದ್ದ ॥
ಮರುದಿನ ಅವರವರ ಪರೀಕ್ಷಿಸಬೇಕೆಂದು ।
ಕರೆದು ವಿದ್ವಾಂಸರ ಕನಕ ಸಹಿತ ।
ತ್ವರಿತದಲಿ ಕರೆದಲ್ಲಿ ಕದಳಿ ಫಲವ ಕೊಟ್ಟು ।
ಯಾರಿರದ ಸ್ಥಳದಲ್ಲಿ ಮೆದ್ದು ಬನ್ನಿರೆನಲು ॥
ಊರ ಹೊರಗೆ ಹೋಗಿ ಬೇರೆ ಬೇರೆ ಕುಳಿತು ।
ತೋರದಲೆ ಎಲ್ಲರೂ ಮೆದ್ದು ಬರಲು ।
ತೋರಲಿಲ್ಲವು ಎನಗೆ ಏಕಾಂತ ಸ್ಥಳವೆನುತ ।
ಸಾರಿ ಕದಳೀಫಲವ ತಂದು ಮುಂದಿಟ್ಟ ॥

ದಾಸೋದಿಗಂಬರನು ತನ್ನ ಸಂತವಿಜಯದಲ್ಲಿ, "ವಿಟ್ಠಲ ಪುರಂದರ (ಪುರಂದರದಾಸ) ರಿಗೆ ಕನಕದಾಸನೆಂಬ ಒಬ್ಬ ಹೊಲೆಯ ಶಿಷ್ಯನಿದ್ದನೆ" ಎಂದು ಬರೆದಿರುವನು.

ಕನಕದಾಸರೂ ಎಷ್ಟೋ ಪದಗಳನ್ನು ರಚಿಸಿರುವರು. ಕಾವ್ಯಪ್ರಪಂಚ ದಲ್ಲಿಯೂ ಅವರು ತಮ್ಮ ಹೆಗ್ಗುರುಹು ಬಿಟ್ಟು ಹೋದುದು ವಿಶೇಷ ಸಂಗತಿ. ಕನಕದಾಸರ ಕಾವ್ಯಗಳೆಂದರೆ, ನರಸಿಂಹಸ್ತವ, ಮೋಹನತರಂಗಿಣಿ, ರಾಮ ಧಾನ್ಯ ಚರಿತ್ರೆ, ನಳಚರಿತ್ರೆ ಹಾಗೂ ಭಕ್ತಿಸಾರ. ನರಸಿಂಹಸ್ತವ ಮತ್ತು ಮೋಹನತರಂಗಿಣಿಗಳು ಸಾಂಗತ್ಯದಲ್ಲಿವೆ. ರಾಮಧಾನ್ಯಚರಿತ್ರೆ, ನಳಚರಿತ್ರೆ, ಹಾಗೂ ಭಕ್ತಿಸಾರಗಳು ಭಾಮಿನೀಷಟ್ಪದಿಯಲ್ಲಿರುವುವು.

---

# ಕನಕದಾಸರ ಕಾವ್ಯಗಳು.

ಕೃತಿವೇಳ್ದ ಕನಕದಾಸೋತ್ತಮ ಕೇಳ್ದವ ।
ಳತಿಸುಜ್ಞಾನವಧೂಟಿ ॥
ಕೃತಿಗೆ ಕರ್ತನು ಕಾಗಿನೆಲೆಯಾದಿಕೇಶವ ।
ಕೃತಿಯಕೇಳ್ದರೆ ಪುಣ್ಯವಹುದು ॥

ಇನಿಯಳು:—

ಪ್ರಾಸಿಂದೆ ನಿಖಿಳ ಚಿತ್ರಾರ್ಥಗರ್ಭಿತಭಾವ । ಲೇಸೆನೆ ಹರಿಕೊಟ್ಟ ವರದಿ ॥
ತ್ರಾಸಿಂದೆ ತೂಗಿದ ಮಣಿಯೆನೆ ಮಜ್ಜೀವಿ । ತೇಶ ವಿಸ್ತರಿಸುಮೇಲ್ಗತೆಯು ॥
ಗುಟ್ಟುಡರದೆ ಕಾದಚಿಲಿಪಾಲು ಮಕ್ಷಿಕೋ । ಚ್ಛಿಷ್ಟವಿಲ್ಲದ ಜೇನುತುಪ್ಪ ॥
ಕಟ್ಟುಬೀಳದ ಸಕ್ಕರಿಯಿಂದೆ ಸವಿವಾತ । ನೆಟ್ಟನೆ ಪೇಳ್ವುದೆನ್ನೊಡನೆ ॥
ವಾಣಿಯಧವನೆಂಬ ವ್ಯವಹಾರಿ ಪಟ್ಟಿಯ । ಗೋಣಿಯೊಳ್ತುಂಬಿದ ರತ್ನ ॥
ಓಣಿಯೊಳ್ಚಲ್ಲಿದಂತಿದೆ ನಿನ್ನ ಕೃತಿಯೆಂಬ । ಮಾಣಿಕ ಮನ್ಮನೋನಾಥ ॥

ಇನಿಯ:—

ಏತಕೆನ್ನನು ಕೀರ್ತಿಸಬೇಕು ನನಗೊಂದು । ಸ್ವಾತಂತ್ರ್ಯಬುದ್ಧಿ ಬೇರಿಹುದೆ ॥
ಪೀತಾಂಬರನೋಡಿಸಿದ ಸಾರಣನಂತೆ । ಮಾತ ವಿಸ್ತರಿಪೆ ಕೇಳ್ಕೆಳದಿ ॥
ರೂಢಿಯೊಳತ್ಯಂತ ಸುಗುಣೆ ಕೇಳ್ ತಾಟಂಕ । ಸೂಡಿದ ತವ ಕಿವಿಗೊಳನ ॥
ಕೋಡಿ ಬೀಳ್ವಂತೆ ತುಂಬಿಸುವೆನು ಕಡುರುಚಿ । ಮಾಡಿ ಮೋಹನತರಂಗಿಣಿಯ ॥
ಬಡನಡುವಿನ ಚೆನ್ನೆ ಭಾಮಿನಿಯರರನ್ನೆ । ಕೊಡನೊಲೆವೆಣ್ಣೆ ಪೂಗಣ್ಣೆ ॥
ಸಡಗರದಿಂ ನಿನ್ನ ಕರ್ಣಕೆ ಕಡುರುಚಿ । ವಡಿಸುವೆ ಪೇಳಿ ಮೇಲ್ಗತೆಯ ॥

ಕನಕದಾಸ.

# ೧.

## ೧ ಮೋಹನತರಂಗಿಣಿ.

ಮೋಹನತರಂಗಿಣಿಯೆಂದರೆ, ಮನಸ್ಸನ್ನು ಮೋಹಗೊಳಿಸುವ ತೊರೆ. ಈ ಹೆಸರು ತೀರ ಅನ್ವರ್ಥಕವಾದುದು. ತರಂಗಿಣಿಯೊಳಗಿನ ಕತೆ ನಿರೂಪಿಸುವ ಬಗೆ, ವರ್ಣನೆಮಾಡುವ ಚಾತುರ್ಯ, ಪಾತ್ರಗಳಲ್ಲಿ ಜೀವಕಳೆ ತುಂಬುವ ಕೈವಾಡು, ಆ ಕಾವ್ಯದಲ್ಲಿ, ಹೆಜ್ಜೆಜ್ಜೆಗೆ ಕಂಗೊಳಿಸುವ ಕವಿಯ ಹೊರಹೊಮ್ಮುವ ಹುರುಪು ಇವೇ ಮೊದಲಾದವುಗಳು ತೆರೆಯ ಮೇಲೆ ತೆರೆಯಂತೆ ಪರಿಣಮಿಸಿ ಓದುಗರ ಹೃದಯವನ್ನು ಕದಲಿ ಮೋಹಗೊಳಿಸುವು ದರಲ್ಲಿ ಸಂದೇಹವಿಲ್ಲ. ತರಂಗಿಣಿಯಲ್ಲಿ ನಾಲ್ವತ್ತೆರಡು ಸಂಧಿಗಳಿವೆ. ಎರಡು ಸಾವಿರದ ಆರುನೂರ ಐವತ್ತೊಂಬತ್ತು ಪದ್ಯಗಳಿವೆ.

ಕನಕದಾಸರು ಕಾಗಿನೆಲ್ಲಿಯ ನರಸಿಂಹನ ಸನ್ನಿಧಾನದಲ್ಲಿಯೆ ಕಾವ್ಯಾ ಭ್ಯಾಸವನ್ನು ಕೈಕೊಂಡಂತೆ ತೋರುತ್ತದೆ. ಆ ನರಕಂಠೀರವನ ವರದಿಂದಲೇ ಕಾವ್ಯ ಬರೆದೆವೆಂದು ಒಂದೆಡೆಯಲ್ಲಿ ದಾಸರೇ ಹೇಳಿರುವರು. ಕಾವ್ಯವಾಣಿಯು ಒಡೆದೊಡನೆ ಅವರು ನರಸಿಂಹನನ್ನು ಮೊದಲು ತುತಿಸಿರುವುದು ಸ್ವಾಭಾ ವಿಕ. ದಾಸರ ನರಸಿಂಹಸ್ತವವೆಂಬ ಕವನದ ವಿಷಯದಲ್ಲಿ, ವೈ. ಆರ್. ನರ ಸಿಂಹಾಚಾರ್ಯರು ಅನ್ನುವುದು, "ಆ ಸಣ್ಣ ಸಾಗಂತ್ಯಗ್ರಂಥದಲ್ಲಿ ಮೊದಲು ಕಾಗಿನೆಲೆಯ ರಂಗನ ಮೇಲೆ ಮಂಗಳವೂ ಅನಂತರ ರಾಮಾನುಜ ಸ್ತುತಿಯೂ ಇರುವವು." ಮೋಹನತರಂಗಣಿಯು ಸಾದ್ಯಂತವಾದ ಕಾವ್ಯ ವಾದುದರಿಂದ ಅದೇ ಕನಕದಾಸರ ಮೊದಲಿನ ಕಾವ್ಯವೆಂದು ಹೇಳಬಹುದು.

ತರಂಗಿಣಿಯು ಹಾಡುಗಬ್ಬ. ಸಂಪೂರ್ಣವಾಗಿ ಸಾಂಗತ್ಯದಲ್ಲಿ ಬರೆದು ದಾಗಿದೆ. ಅದರಲ್ಲಿ ಆಡಕವಾದ ನುಡಿಯು ಜನಪದ ಭಾಷೆ.

ನಾಡೊಳಗುಳ್ಳ ಜಾಣರು ಜಾಣೆಯರೊಡ । ನಾಡುವ ಸವಿವಾತುಗಳ ।
ಪಾಡುಗಬ್ಬವ ಪರುಠವಿಸಿದ ಬಗೆಯನೀ । ನೋಡುವಮಾನಿನಿ ಮುಂದೆ ಮುಂದೆ||

ಕತೆಗಾರಿಕೆಗೆ ತಕ್ಕಂತೆ, ತರಂಗಣಿಯ ವಾಗ್ಲಹರಿಯು ಸುಲಭವಾಗಿ, ಸುಲಲಿತವಾಗಿ, ನೇರವಾಗಿ ಹರಿಯುವುದು. ದಾಸರಲ್ಲಿ ಶಬ್ದ ಸಂಪತ್ತು ವಿಪುಲವಾಗಿದೆ. ಸ್ವಾಭಾವಿಕವಾಗಿ ನಾಲಗೆಗೊನೆಯಲ್ಲಿ ಬಂದ ಶಬ್ದಗಳನ್ನೇ ಅವರು ಉಪಯೋಗಿಸಿರುವರು. ಶಬ್ದಗಳನ್ನು ಹುಡುಕಿ ತೆಗೆದು ಪದ್ಯದಲ್ಲಿ ಪೋಣಿಸಬೇಕೆಂದು, ದಾಸರು, ಹರಿದಾಡಿದುದಿಲ್ಲ. ಆದರೂ ಅವರ ಕಾವ್ಯವು ಕರ್ಣಕಟುವಾಗಿಲ್ಲ. ಅಲಂಕಾರಗಳಿಗಾಗಿ ಹಂಬಲಿಸಿದುದಿಲ್ಲ. ಆದರೂ ತರಂಗಣಿಯಿಂದ ಯಮಕಅನುಪ್ರಾಸಗಳ ಉದಾಹರಣೆಗಳನ್ನು ವೆಗ್ಗಳವಾಗಿ ಒದಗಿಸಿಕೊಳ್ಳಬಹುದು. ಅರ್ಥಾಲಂಕಾರಗಳಿಗೂ ಕೊರತೆಯಿಲ್ಲ. ಸ್ವಭಾವೋಕ್ತಿ, ಉಪಮೆ, ಉತ್ಪ್ರೇಕ್ಷೆಗಳ ಉತ್ಕೃಷ್ಟ ಉದಾಹರಣೆಗಳು ವಿಪುಲವಾಗಿ ದೊರೆಯುವುವು.

ತರಗಂಣಿಯು ವರ್ಣಕಕಾವ್ಯವು. ಅದರೊಳಗಿನ ಸಂವಿಧಾನಕಗಳು ಕಲ್ಪನಾಸೃಷ್ಟಿಗೆ ಸಂಬಂಧಪಟ್ಟಿರುವುದಿಲ್ಲ. ತರಂಗಣಿಯ ಸನ್ನಿವೇಶವೆಂದರೆ ಕನಕದಾಸರ ಕಾಲದ ಜನಜೀವನ. ಈ ತೆರನಾಗಿ ವಿಚಾರಿಸಿದರೆ, ಮೋಹನ ತರಂಗಿಣಿಯು ೧೬ ನೆಯ ಶತಮಾನದ ಜನಜೀವನದ ಒಂದು ಸ್ಪಷ್ಟವಾದ ಮನೋಹರವಾದ ಚಿತ್ರವೆಂದೇ ಅನ್ನಬಹುದು.

ತರಂಗಿಣಿಯಲ್ಲಿ ಕೃಷ್ಣಚರಿತ್ರೆಯು ಅಡಕವಾಗಿದೆ. ಕತೆಯು ರುಕ್ಮಿಣಿ ಕೃಷ್ಣರ ವಿವಾಹೋತ್ತರ ಶೃಂಗಾರದಿಂದ ಮೊದಲುಗೊಂಡು ದ್ವಾರಕೆಯಲ್ಲಿ ಉಷೆಯನ್ನು ಮನೆದುಂಬಿಸಿಕೊಂಡುದುದರಿಂದ ಕೊನೆಗಾಣುತ್ತದೆ. ಕನಕದಾಸರು ಕತೆಯ ವಸ್ತುವನ್ನು ಭಾರತ, ಭಾಗವತ, ಸ್ಕಂದ, ವಿಷ್ಣು, ಹರಿವಂಶ ಮೊದಲಾದ ಪುರಾಣಗಳಿಂದ ಒದಗಿಸಿಕೊಂಡಿರುವರು. ತರಂಗಿಣಿಯು ಈ ಪುರಾಣಗಳ ಅನುವಾದವಲ್ಲ. ದಾಸರು ಅವಶ್ಯವಾದುದನ್ನು ಆಯ್ದು ತೆಗೆದು, ಬೇಡಾದುದನ್ನು ಬಿಸುಟಿ, ಬೇಕಾದುದನ್ನು ಬೆರಿಸಿ, ಹೊಸಬಗೆಯ ಕಬ್ಬವನ್ನೇ ಹುಟ್ಟಿಸಿರುವರೆಂದು ಹೇಳಬಹುದು. ಇದೇ ಬಗೆಯ ಕೈವಾಡು ಪಾತ್ರಗಳ ನಿರ್ಮಿತಿಯಲ್ಲಿಯೂ ಕಂಡುಬರುವುದು. ಕನಕದಾಸರ ಪಾತ್ರಗಳೆಲ್ಲ ನಿಜವಾಗಿ ಬಾಳಿದ ಮಾನವರು. ಅವರ ಮನೋರಚನೆಯು ನಿರ್ವ್ಯಾಜ

ವಾದುದು. ಅವರ ನಡೆನುಡಿಗಳು ದಾಸರ ಕಾಲದ ಮಾನವರಿಗೆ ತೀರ ಸರಿ ಹೋಲುವುವು. ಕೃಷ್ಣರುಕ್ಮಿಣಿ ಮೊದಲಾದವರು ದೇವತೆಗಳಾದರೂ ಅವರ ಬಾಳು ಮಾನವರದೇ. ತರಂಗಿಣಿಯೊಳಗಿನ ದಾನವರು ನಾಸ್ತಿಕರಲ್ಲ; ಪಾಪ ಭೀರುಗಳು. ಮಗುವನ್ನು ಕದ್ದೊಯ್ದು ಮಡುವಿನಲ್ಲಿ ಮುಳುಗಿಸುವಾಗ ಶಂಬರಾಸುರನಿಗೆ ಶಿಶುಹತ್ಯೆಯ ಪಾಪವು ತೋಚದಿರಲಿಲ್ಲ. ಪ್ರದ್ಯುಮ್ನನಿಂದಾಗಲಿರುವ ತನ್ನ ಕೊಲೆಯನ್ನು ತಪ್ಪಿಸಿ ಬಹುದಿವಸ ಬಾಳಬೇಕೆಂಬ ಬಯಕೆಯು ಅಮಾನುಷವಲ್ಲ. ಆದುದರಿಂದ ಶಂಬರನು ಆಕಾಶಮಾರ್ಗವಾಗಿ ಹೋಗುವ ಮುಂದೆ ಕೈದಪ್ಪಿದಂತೆ ನಟಿಸಿ ಮಗುವನ್ನು ಒಗೆದುದು ತೀರ ಸ್ವಾಭಾವಿಕ. ಬಾಣಾಸುರನಂತೂ ನಂಬಿಗಸ್ತನಾದ ಕಡುತರ ಶಿವಭಕ್ತನು. ಶಿವನ ಶಬ್ದವನ್ನೆಂದೂ ಮೀರತಕ್ಕವನಲ್ಲ. ಹರಮುರಹರರಲ್ಲಿ ಭೇದವಿರುವುದಿಲ್ಲವೆಂದು ಈಶ್ವರನೇ ನುಡಿದೊಡನೆ ಬಾಣನು ವಿಚಾರವಿಲ್ಲದೆ ಅದಕ್ಕೊಪ್ಪುವನು. ಕಳ್ಳನು, ಕದ್ದ ವಸ್ತುವನ್ನು ಅಧಿಕಾರಿಗೆ ಒಪ್ಪಿಸುವಂತೆ, ಭಾಗವತದೊಳಗಿನ ಬಾಣನು, ಕೃಷ್ಣನ ಮುಂದೆ ಉಷಾನಿರುದ್ಧರನ್ನು ತಂದು ಬಿಡುವನು. ಕನಕದಾಸರ ಬಾಣನು ಧೀರೋದಾತ್ತನು. ಶಿವಶೌರಿಗಳ ಅಭೇದವನ್ನು ಮನಗಂಡು, ಉಷೆಯ ವಾಙ್ನಿಶ್ಚಯ ಮಾಡಿ, ಮದುವೆಯ ವಿಷಯವನ್ನು ತನ್ನ ಮಂತ್ರಿಯಾದ ಕುಂಭಾಂಡನಿಗೆ ಒಪ್ಪಿಸಿ, ಹರಿಯನ್ನು ಬೀಳ್ಕೊಂಡು, ಶಿವನೊಂದಿಗೆ, ಕೈಲಾಸಪುರಿಗೆ ತೆರಳುವನು! ರುಕ್ಮಿಣಿ, ರತಿ, ಉಷೆ, ಚಿತ್ರಲೇಖೆ ಮೊದಲಾದ ಸ್ತ್ರೀಪಾತ್ರಗಳು ಹೆಂಗೂಸುಗಳ ಸ್ವಭಾವಕ್ಕೆ ಅನುಸರಿಸಿ ಕೋಮಲೆಯರು, ಚದುರೆಯರು, ಪತಿಗಳಿಗೆ ತೀರ ಅನುಕೂಲೆಯರು, ಹದಿಬದೆಯರು. ಗರುಡನಂದಿಗಳೆಂದರೆ, ಒಂದು ಹಾಳಿಯ ಹದ್ದು ಮತ್ತೊಂದು ಕೊಬ್ಬಿದ ಗೂಳಿ ಎಂದು ಗ್ರಹಿಕೆಯಾಗುವುದು ಸ್ವಾಭಾವಿಕ. ಕನಕದಾಸರ ಗರುಡನಂದಿಗಳು ಮಾನವರು. ಅವರೀರ್ವರ ಕೈಕಾಲುಗಳಿಗೆ ಬೆರಳುಗಳಿರುವುವು. ಆದರೆ, ಗರುಡನಿಗೆ ರೆಕ್ಕೆಗಳಿರುವಂತೆ ನಂದಿಗೆ ಕೊಂಬುಗಳಿರುವುವು.

ಬಂಗಾರಕ್ಕೆ ಕುಂದಣ ಕೂಡಿಸಿದಂತೆ, ದಾಸರು, ತಮ್ಮ ಕಾವ್ಯದಲ್ಲಿ ಅಲ್ಲಲ್ಲಿ ಒಳ್ಳೆ ಹದಗಾರಿಕೆಯಿಂದ ಮಾರ್ಮಿಕವಾದ ಗಾದೆಗಳನ್ನು ಕೆಚ್ಚಿರುವರು. ಭಾವಕ್ಕೆ ಸರಿಪಡುವ ಶಬ್ದಗಳನ್ನು ಪೋಣಿಸಿ, ಅವುಗಳ ಅರ್ಥದಂತೆ ಧ್ವನಿ ಹೊರಡುವ ಪದ್ಯಗಳನ್ನು ರಚಿಸುವ ಜಾಣ್ಮೆಯೂ ದಾಸರಲ್ಲುಂಟು.

ಬಾಣನು ಅನಿರುದ್ಧನನ್ನು ಬಂಧಿಸಿರುವನೆಂಬ ಸುದ್ದಿಯು ಕೃಷ್ಣನಿಗೆ ತಲುಪಿದ ಕೂಡಲೆ ಅವನು ರಣಭೇರಿಯನ್ನು ಹೊಡೆದು ಕದನಕ್ಕೆ ಸಿದ್ಧನಾದನು. ಆ ಸಂದರ್ಭದಲ್ಲಿ, ದಾಸರು ನುಡಿದ ಶಬ್ದಗಳು ಭೇರಿಯ ನಿನಾದವನ್ನೇ ಅನುಸರಿಸುವುವು. ಮೇಲಾಗಿ ಆ ಧ್ವನಿಯಿಂದುಂಟಾದ ಕೋಲಾಹಲದ ಪರಿಣಾಮವನ್ನು ತಕ್ಕ ಶಬ್ದಗಳಿಂದಲೇ ಚಿತ್ರಿಸಲಾಗಿದೆ.

ಹೊಡೆದ ಪ್ರಸ್ಥಾನಭೇರಿಯನಾದ ಬ್ರಹ್ಮಾಂಡ । ವೊಡೆದುದೆಂಬಂತೆ ಗರ್ಜಿಸಲು ।
ನಡುನಡುಗಿದುವು ಪರ್ವತ ತಳಮುಳಲೆದ್ದು । ಕಡಲೇಳು ಮೇರೆದಪ್ಪಿದುವು ॥
ತರಿಸಿದ ಬಾಣತೂಣೀರಕಾರ್ಮುಕವನೇ । ವರಿಸಿದ ಕಂಚುಕದಳೆದ ||
ಧರಿಸಿದ ಶಂಖ ಚಕ್ರವನಾ ಕ್ಷಣದಲ್ಲಿ | ಸ್ಮರಿಸಿದ ವಿಹಗೇಶ್ವರನ ॥

ಮೇಲಣ ಪದ್ಯದಲ್ಲಿ 'ಹೊಡೆದ', 'ಪ್ರಸ್ಥಾನ', 'ಭೇರಿ' ಈ ಮೂರು ಶಬ್ದಗಳನ್ನು ಗಟ್ಟಿಯಾಗಿ ಅನ್ನುವುದರಿಂದ ಭೇರಿಯ ಮೇಲೆ ಮೂರು ಒಳಿತಾದ ಆಘಾತಗಳಾದಂತೆ ಭಾಸವಾಗುವುದುಂಟು. ಆ ಮೇಲೆ, "ಬ್ರಹ್ಮಾಂಡ ಒಡೆದುದೆಂಬಂತೆ" ಎಂಬ ಪದದಲ್ಲಿ ಅನುಸ್ವಾರಗಳು ಹೆಚ್ಚಾಗಿ, ಭೇರಿಯ ಧ್ವನಿಯಾದಂತೆ ಅನಿಸುವುದು. ಕಟಕಟ ನಡುಗುವುದನ್ನು ''ನಡುನಡುಗಿದುವು", ಎಂಬ ಶಬ್ದದಿಂದ ಸೂಚಿಸಿದುದುಂಟು. ಕಡಲುಗಳು ಉಕ್ಕೇರಿದುವು ಎಂದು ಹೇಳಲಿಕ್ಕೆ ದಾಸರು, ದೀರ್ಘಸ್ವರಗಳನ್ನು ಉಪಯೋಗಿಸಿರುವರು. ಆದರ ಕೆಳಗಣ ಪದ್ಯದಲ್ಲಿ ಐದು ಕ್ರಿಯೆಗಳನ್ನು ಎಡೆಬಿಡದೆ ಹೇಳಿರುವುದರಿಂದ ಕೃಷ್ಣನಿಗೆ ಆದ ತ್ವರೆಯು ಸೂಚಿತವಾಗಿದೆ!

ಬಟ್ಟವಕ್ಕಿಗಳಂಚೆಕೊಂಚೆ ಸಂಚರಿಸಿಬೊ । ಬ್ಬಿಟ್ಟುದ ಕೇಳಿ ತಾಪಸರು ।
ಕೆಟ್ಟರು ಕೆಟ್ಟುದು ಸತ್ಯವೆಂದಲಸದೆ । ಟಿಟ್ಟಿಬ ನುಡಿದುದಾಬನದಿ ||

ಈ ಶ್ಲೋಕದಲ್ಲಿ ಟಿಟ್ಟಿಭದ ಪ್ರತಿಧ್ವನಿಯನ್ನು ಅನುಭವಿಸಬಹುದು.

ತರಂಗಿಣಿಯಲ್ಲಿ ತತ್ವಜ್ಞಾನವನ್ನು ಸಂಕ್ಷೇಪವಾಗಿ ಹೇಳುವ ಸಂದರ್ಭಗಳೂ ಅಲ್ಲಲ್ಲಿ ದೊರೆಯುವುವು.

ಹಮ್ಮನಾಡಿದಾ ಕ್ಷಣದಲ್ಲಿ ಮುರಿದಿಕ್ಕಿ । ಬೊಮ್ಮಾದಿಗಳ ಶಿಕ್ಷಿಸುವ ।
ನಮ್ಮನದಾರು ಬಲ್ಲರು ಮಶಕಿಯ ಮಾತ್ರ । ನಿಮ್ಮಾಣೆ ಕೇಳಮ್ಮತಾಯೆ ॥

ಹೂಡುವ ಜಗವನೊಂದಿವೆಯಾಟದೆ ಬಯ । ಲ್ಮಾಡುವ ಮರಳಿ ಸೃಷ್ಟಿಸುವ ।
ನೋಡುವ ತಾವಲ್ಲದವನಂತೆಯೊಳಹೊರ । ಗಾಡುವ ಚೇಷ್ಟಕನೀತ ॥
ಹಿತನೀತ ಶತೃರೂಪಕನೀತ ವಿಧಿಭವಾ । ರ್ಚಿತಪದಾಂಬುಜ ಸರ್ವ ।
ಗತನೀತ ಘನವಿವೇಕದಿ ನಿರೀಕ್ಷಿಸಲ । ಚ್ಯುತನೀತ ನೋಡವ್ವತಾಯೆ ॥
ರೂಪಾಂತ ನಿಖಿಳ ಬ್ರಹ್ಮಾಂಡವ ತನುರೋಮ । ಕೂಪಂಗಳೊಂದೊಂದ
ರೊಳಗೆ ।
ಜೋಪಾನಗೈದಡಗಿಸಿಕೊಂಡಿರುತಿಹ । ಗೋಪಾಲಕೃಷ್ಣ ಶರಣು ॥

ಕನಕದಾಸರು ಮೋಹನತರಂಗಿಣಿಯನ್ನು, ತಮ್ಮ ಹೆಂಡತಿಯು ಬಿನ್ನವಿಸಿದಂತೆ, ತಾವು ಹೇಳಿದಂತೆ, ಬರೆದಿರುವರು. ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿ ದಾಸರ ಮಡದಿಯು ಕೇಳಿದ ಕತೆಯ ಬಗ್ಗೆ ತನ್ನ ಅಭಿಪ್ರಾಯ ವನ್ನು ವ್ಯಕ್ತಪಡಿಸಿ, ಅದನ್ನು ಮುಂದುವರಿಸಲು ಬೇಡಿಕೊಳ್ಳುವಳು. ದಾಸರು ತಮ್ಮ ಕೃತಿಯನ್ನು ವರ್ಣಿಸಿ, ಅದನ್ನು ವಿಸ್ತರಿಸಲು ಆರಂಭಿಸುವರು. ಆ ಎರಡೂ ಮತಗಳನ್ನು ಬರೆದವರು ದಾಸರೇ. ಆದುದರಿಂದ ಅವುಗಳಲ್ಲಿ ಕೆಲವನ್ನು, ದಾಸರು ತಮ್ಮ ಕಾವ್ಯದ ಬಗ್ಗೆ ಪಟ್ಟ ಅಭಿಪ್ರಾಯವೆಂದು ಉದ್ಧರಿಸಲಿದೆ,

**ಹೆಂಡತಿ:—**

ಬೆನಕನೊ ನಿನಗೀಮತಿನಿತ್ತವ ಬ್ರಹ್ಮ । ಜನಕನೊ ವರಸರಸ್ವತಿಯೋ ।
ಸನಕಸನಂದಾದ್ಯರೊ ಮೇಲ್ಗತಿಪೇಳು । ಕನಕದಾಸೋತ್ತಮ ತನಗೆ ॥
ವೆಂಠಣಿಸಿದ ವಿಷ್ಣುಭಕ್ತಿನಂದನಕಲ । ಕಂಠನಿನ್ನಯಸವಿವಾತು ।
ಉಂಟಾದುದೆನ್ನಯ ಕರ್ಣಕ್ಕೆ ಪರಲೋಕ । ನಂಟರು ಕೇಳುವಂತುಸಿರು॥
ಮಾಣದರಸುವಂತೆ ಮಾಡದಿರಧಿಕಸು । ಜಾಣರ ಜ್ಞಾನಲೋಚನಕೆ ।
ಕಾಣಬರ್ಪಂತೆ ಕನ್ನಡವಾಕ್ಯದೆ ನೆರೆ । ಜಾಣಸತ್ಕೃತಿಯವಿಸ್ತರಿಸು ॥

**ದಾಸರು:—**

ಅಕ್ಕರಿಗನ ಕುಲವೃದ್ಧನ ಮಡದಿಯ । ಧಿಕ್ಕರಿಸದೆ ಪೂಜೆಗೈದು ।
ಸಕ್ಕದಕನ್ನಡವೆರಸಿದ ಕವಿತೆಯ । ಒಕ್ಕಣಿಸುವೆ ಕೇಳ್ಕೆಳದಿ ॥
ಕಣ್ಣಮನವನಿರ್ಕುಳಿಗೊಳ್ವಕಡುಜಾಣ । ವೆಣ್ಣುಗಳಧಿದೇವಿ ಕೇಳು ।
ಗಿಣ್ಣುಗೊಳ್ಳದ ಬೆಳ್ಗಬ್ಬಿನ ರಸದಂತೆ । ಬಣ್ಣಿಸುವೆನು ಕಥಾಮೃತವ ॥

ಎಲೆಯೆನ್ನ ಕಣ್ಗೆ ಮಂಗಳವಪ್ಪಬಟ್ಟ ಬ । ಲ್ಮೊಲೆಯ ಮಂಗಳರನ್ನೆ ಕೇಳೆ ।
ಶಿಲೆಯು ವಕ್ಷದರ ಚಿತ್ತವ ಕರಗಿಪುದು ನೈ । ದಿಲೆಯಾಣ್ಮನಂತೆನ್ನ ಕವಿತೆ ॥
ತೆಂಗಿನಕಾಯು ತೋರದ ಮೊಲೆವೊತ್ತಲ । ತಾಂಗಿಯ ಬಂದುಗೆವಾಯ ।
ರಂಗಿಪ ಚೆಂದುಟಿಯಿನಿದೆನೆಮೋಹತ । ರಂಗಿಣಿಪೇಳ್ವೆ ಕೇಳಬಲೆ ॥

ಮೋಹನತರಂಗಣಿಯೊಳಗಿನ ಪ್ರತಿಯೊಂದು ಸಂಧಿಯೂ ಕೆಳಗಣ ಪದ್ಯದಿಂದ ಕೊನೆಗಾಣುತ್ತದೆ.

ವರಮೋಹನತರಂಗಿಣಿಯೆಂಬ ಕಾವ್ಯವ । ಬರೆದೋದಿ ಕೇಳಿದ ಜನರ ।
ತರಣಿಚಂದ್ರಮರುಳ್ಳನಕ ಸತ್ಕ್ರುಪೆಯಿತ್ತು । ಪೊರೆವ ಲಕ್ಷ್ಮೀಕಾಂತಬಿಡದೆ ॥

---

## ೨. ತರಂಗಿಣಿಯು ಮಹಾಕಾವ್ಯ.

ಕಾವ್ಯಪ್ರಪಂಚದಲ್ಲಿ ಮೋಹನತರಂಗಿಣಿಯು, ಮಹಾಕಾವ್ಯದ ವರ್ಗಕ್ಕೆ ಸೇರಿದುದು. ಮಹಾಕಾವ್ಯಕ್ಕೆ ಅವಶ್ಯಕವಾದ ಹದಿನೆಂಟೂ ಅಂಗಗಳು ಆದರಲ್ಲುಂಟು. ತರಂಗಿಣಿಯಲ್ಲಿ, ಮಹಾಕಾವ್ಯಕ್ಕೆ ತಕ್ಕಂತೆ, ಪ್ರಗಲ್ಭವಾದ, ಭಾರತ, ಭಾಗವತ, ಹರಿವಂಶ, ವಿಷ್ಣು ಮುಂತಾದ ಪುರಾಣಗಳಲ್ಲಿಯ ಶ್ರೀಕೃಷ್ಣನ ಕತೆಯು, ಅಡಕವಾಗಿದೆ. ಕಾವ್ಯದಲ್ಲಿ ಶಬ್ದಾಲಂಕಾರಗಳೂ ಅರ್ಥಾಲಂಕಾರಗಳೂ ಇವೆ. ವಸ್ತು ವಿವರಣವು ವಿಸ್ತಾರವಾಗಿದೆ. ಕಾವ್ಯವು ಅನೇಕ ಸಂಧಿಗಳನ್ನು ಒಡಗೊಂಡಿದೆ. ಮಾತ್ರ, ತರಂಗಿಣಿಯು ವಿವಿಧ ವೃತ್ತಗಳಲ್ಲಿರದೆ, ಆಮೂಲಾಗ್ರವಾಗಿ ಸಾಂಗತ್ಯದಲ್ಲಿ ಬರೆದುದಾಗಿದೆ. ಈ ಕಾವ್ಯದ ಉದ್ದೇಶವೆಂದರೆ, ನಾಲ್ವಗೆ ಪುರುಷಾರ್ಥ. ಮಹಾಕಾವ್ಯಕ್ಕೆ ಅವಶ್ಯವಾದ ಹದಿನೆಂಟು ವರ್ಣನೆಗಳೆಂದರೆ,

ಉದಧಿ ಪುರಾಧಿಪಸುತ ಮಂ।
ತ್ರಿದೂತಗಮನಾಜಿ ವಿರಹ ಪರಿಣಯ ಸುರತ ।
ರ್ತು ದಿನೇಶ ಚಂದ್ರ ಮಧು ಕು ।
ಭೃದುದಕ ವನಸ್ಪತಿಯೆ ಕೃತಿಗೆ ಪದಿನೆಂಟಂಗಂ ॥

ತರಂಗಿಣಿಯೊಳಗಣ ಹದಿನೆಂಟೂ ವರ್ಣನೆಗಳ ಸಂದರ್ಭಗಳು:—

| | ವರ್ಣನೆ. | ಸಂಧಿ. |
|---|---|---|
| ೧. | ರತ್ನಾಕರ | ೨ |
| ೨. | ದ್ವಾರಕಾಪುರ. ಶೋಣಿತಪುರ. | ೩. ೨೦. |
| ೩. | ಕೃಷ್ಣ. ಬಾಣಾಸುರ. | ೫. ೨೨. |
| ೪. | ಪ್ರದ್ಯುಮ್ನ. ಅನಿರುದ್ಧ | ೭. ೧೭. |
| ೫. | ಕುಂಭಾಂಡ. | ೨೦ |
| ೬. | ಚಿತ್ರಲೇಖೆ. | ೨೬ |
| ೭. | ಮನ್ಮಥ ಕೃಷ್ಣರ ದಂಡಯಾತ್ರೆ. | ೬. ೩೬ |
| ೮. | ೧ ಅನಿರುದ್ಧ ಕುಂಭಾಂಡರ ಕಾಳಗ | ೩೪ |
| | ೨ ಅನಿರುದ್ಧ ಬಾಣಾಸುರರ ,, | ೩೫ |
| | ೩ ಹರಿಹರಾದಿಗಳ ,, | ೩೮-೩೯ |
| | ೪ ಕೃಷ್ಣಬಾಣಾಸುರರ ,, | ೪೦ |
| ೯. | ರತಿಯ ವಿರಹ. | ೮-೯ |
| ೧೦. | ೧ ರತಿಪ್ರದ್ಯುಮ್ನರ ವಿವಾಹ. | ೧೬ |
| | ೨ ಉಷಾನಿರುದ್ಧರ ,, | ೩೨ |
| ೧೧. | ೧ ರತಿಪ್ರದ್ಯುಮ್ನರ ಸುರತ. | ೧೬ |
| | ೨ ಉಷಾನಿರುದ್ಧರ ,, | ೩೨ |
| ೧೨. | ಮಳೆ ಚಳಿಗಾಲಗಳು. | ೪ |
| ೧೩. | ಸೂರ್ಯಾಸ್ತ. | ೧೫ |
| ೧೪. | ಚಂದ್ರೋದಯ. | ೧೮ |
| ೧೫. | ಮಧು. | ೧೮ |
| ೧೬. | ಕುಳಿರ್ವೆಟ್ಟು. | ೬ |
| ೧೭. | ಗಂಗಾವರ್ಣನೆ. | ೬ |
| ೧೮. | ವನಸ್ಪತಿ. | ೭ |

ಈ ಹದಿನೆಂಟು ವರ್ಣನೆಗಳನ್ನು ಕೊಡಬೇಕೆಂದರೆ ಸ್ಥಳಸಂಕೋಚ. ಆದುದರಿಂದ ಅವುಗಳಲ್ಲಿ ತೀರ ಸ್ವಾಭಾವಿಕವಾದ ಸೊಗಸಾದ ಅವತರಣಿಕೆಗಳನ್ನಷ್ಟೇ ಓದುಗರ ಅವಗಾಹನೆಗಾಗಿ ಉದ್ಧರಿಸಲಿದೆ.

**ಉದಧಿ.**

ಈ ಕಾವ್ಯಕಾದಿವರ್ಣನೆಯಾವುದೆನಲು ರ। ತ್ನಾಕರನೆಲವೆಣ್ಣಿನು...|
ಮೇಖಲೆಯಂದದೆ ಪರಿವೇಷ್ಟಿಸಿರ್ದುದ। ನೇಕಸಂಭ್ರಮವನೇನೆಂಬೆ ॥

ತಂಡತಂಡದಿ ಹೊರವಳಯದಿ ಡಿಂಡೀರ। ಪಾಂಡುರ ಶಂಖ ಪ್ರವಾಳ |
ದುಂಡುಮುತ್ತುಗಳಿಂದೆ ಮೇರೆಯಬ್ಧಿಯ ಕೊರ। ಳ್ದಂಡೆಯಂತಿರ್ದುದೇನೆಂಬೆ॥

ಹೊದ್ದಿರಲುರ್ವಿಯ ಹೆರಸಾರುಸಾರೆಂದು | ಬುದ್ಧಿಗಲಿಸಿ ಕೇಳದಿರಲು |
ಗದ್ದಿಸಿ ತೆರೆಗೈಗಳಿಂದೆ ತಾಡಿಸುವಂತೆ। ಗುದ್ದಿತು ಜಲನಿಧಿ ತಟವ ॥

ವೇದತಸ್ಕರನ ತನ್ನೊಳಗಿಟ್ಟುಕೊಂಡಪ। ರಾಧಕ್ಕೆ ಪೊರಮಡಲೊಡನೆ।
ಮಾಧವ ಕರೆಸಲು ಮರಳಿ ಬಂದಂತಾಗ। ಲಾದುದು ಕಡಲೋಟಭರಿತ ॥

**ಸೂರ್ಯಾಸ್ತ.**

ಅರೆಯಟ್ಟಿಖಳರ ಖಂಡಿಸಿ ಬಿಸಿರಕುತಕೆಂ। ದೊರೆಯೊಳು ತೊಳೆದಚಕ್ರವನು |
ಒರೆಯೊಳು ಕೃಷ್ಣ ಬೈತಿಡುವಂತೆ ಪಡುವೆಟ್ಟ | ಮರೆಗೊಂಡು ರವಿ ಮುಳುಗಿದನು ॥

ಕಂಜ ಬಾಂಧವನಸ್ತಮಿಸೆ ಪಡುವೆಟ್ಟು। ಮುಂಚೇತನಗುಂದಿ ತನ್ನ।
ಮಂಜುಲವದನವ ತಂಬುಲವುಗುಳ್ದಂತೆ। ಸಂಜೆಗೆಂಪೆಸೆದಿರ್ದುದಾಗ ॥

ಸುಟಿವೆತ್ತು ಮುಗಿಲಗಲದಿ ಪರಿವಾಕಾಶ। ತಟನಿಯ ಬುದ್ಬುದದಂತೆ।
ಪಟುವಾಗಿ ನಿಖಿಲ ನಕ್ಷತ್ರ ಸಂದೋಹ ಸಂ। ಘಟಿಸಿತು ಕೇಳಾಯತಾಕ್ಷಿ ॥

**ಮಳೆ.**

ಕಡುಕೋಪದಲಿ ಜೀವಿತರಣ ನರಸಿಂಹ। ನಡುವಜ್ರಗಂಬವನೊಡೆದು।
ಘುಡುಘುಡಿಸುತ ಪೊರಮಟ್ಟಂತೆ ಮಹದಾದಿ | ಸಿಡಿಲೆರಗಿದುವು ಖೇಚರದಿ॥

ಜಂಭಾರಿತನ್ನೈರಾವತನೀರಾಟ | ಗೊಂಬುದ ನೋಡಬೇಕೆಂದು |
ಪೊಂಬಳ್ಳಿ ಗಂಟೆಯ ಬಲಿದಂತೆ ಸುರಚಾಪ | ಸಂಭ್ರಮವಾಯ್ತು ಕಣ್ಣನಕೆ॥

ತುರುಗಿದ ಕಾಯಿ ಪಣ್ಗಳ ಸಾಲವೃಕ್ಷವ। ಮುರಿದು ದೂಳಿಯಚೆಲ್ಲಿಕೊಳುತೆ।
ಸುರಿವಸೊಂಡಿಲ ನೀರ್ಗರೆಯುತ ಬಂದುದು। ಬಿರುಗಾಳಿ ಮದಗಜದಂತೆ ॥
ನರ್ತಿಪ ನವಿಲನಾಟ್ಯಕೆ ಮೆಚ್ಚಿ ಪುರುಹೂತ। ತೆತ್ತೀಸಕೋಟಿ ನಿರ್ಜರರು।
ಮುತ್ತಿನ ತ್ಯಾಗವ ಕೊಟ್ಟಂತೆ ಯಾಲಿಕಲ್। ಬಿತ್ತಿಕ್ಕಿ ಬಿರ್ದುದುರ್ವಿಯಲಿ॥

ಒರೆವಸಿಗಳಿದಿರ್ವನಿ ಮಸ್ತಕವನಿ | ತೊರೆವನಿಗಳನಾಂತು ಬಿಡದೆ |
ನೆರ್ಛವಿಶ್ವರೂಪಾದಂತೆ ಸಂತತ ಧಾರೆ | ಸುರಿದುದೀಗಳೆಯಿಳೆಯೊಳಗೆ ||
ಕೊಡೆಮೇಣಗಪ್ಪಡ ಗೊಂಗಡಿ ಬಹುರವ್ಯ | ವಡೆದಿರ್ದ ಸಕಲಾತಿದಳೆದು |
ಬಿಡಯುವಿಲ್ಲದೆ ಪುರದೊಳು ನೀರ್ಮನುಜರಂ| ತಿಡೆಯಾಡುತಿರ್ದರೂರುಗರು||

ಮಳೆಯ ಈ ವರ್ಣನೆಯು ವಸ್ತುಸ್ಥಿತಿಯನ್ನು ತೀರ ಅನ್ವಯಿಸಿರುವುದು. ಮೋಡಗಳ ಘುಡಘುಡಿಸುವ ಅಬ್ಬರ, ಸಿಡಿಲು, ಕಾಮನಬಿಲ್ಲು, ಬಿರುಗಾಳಿ, ಆಣೆಕಲ್ಲುಗಳು, ಒಂದೆಡೆಯಲ್ಲಿಯೆ ಬಂದು, ದಾಸರ ಮಳೆಯ ವರ್ಣನೆಗೆ ವಿಶೇಷ ಶೋಭೆಯನ್ನುಂಟು ಮಾಡಿವೆ.

**ಸರಾಯಿ.**

ರಂಭೆ, ಕೊ, ರತಿಯಸ್ವರೂಪೆ, ಕೊ, ಹೊಸ ಹೊನ್ನ | ಬೊಂಬೆ, ಕೊ, ನೆರೆವೆರೆ ಮೊಗದ |
ತುಂಬಿಗುರುಳ ತುರುಗೆವೆಗಣ್ಣ ಕೆಳದಿ ಕೊ | ಳ್ಳೆಂಬಮಾತಿನಲೀಂಟಿದರು ||
ನಲ್ಲ, ಕೊ, ನಾಗರೀಕನೆ ಕೊಳ್ಳೊ, ರಸದಾಳಿ | ವಿಲ್ಲನರೂಪ ಕೊಳ್ಳೆಲವೊ |
ಒಲ್ಲದೊಡೆನ್ನ ಕೊಂದಪೆಯೆನುತೀಂಟಿಸಿ | ಪಲ್ಲವಾಧರೆಯರೀಂಟಿದರು ||
ಸಂಡಿಗೆ ಸಂಭಾರಗಡಲೆ ಪ್ರಾಸಕಕುಕ್ಕು | ಟಾಂಡವನವಲಕ್ಕಿಗಳನು |
ದುಂಡರಳ್ಗಡಲೆ ಭಕ್ಷ್ಯಗಳ ಬಡ್ಡಿಸಿಕೊಳು | ತುಂಡರು ನೆರೆಸೊಕ್ಕುವನಕ ||
ಅಪ್ಪ ಕೊಳ್ಳೆಲವೊ, ಅಗ್ರಜಕೊಳ್ಳೊ, ಹಿಂಡಿಯ | ಸೊಪ್ಪ ಕೋ, ಸುಲಿ ವಣ್ಗಳವೆಕೋ |
ಚಿಪ್ಪ ಕೋ, ಕುಡಿಯೆಂದು ಕುಡಿಸಿ, ತಾ ಕುಡಿದು, ಕೈ | ಚಪ್ಪಳೆಗೊಲಿ ದಾಡುತಿಹರು ||

ಹೆಂಡ ಕುಡಿಯುವಶಾಕ್ತ ಹೆಣ್ಣುಗಂಡುಗಳ ಒಂದು ತಂಡದ ದೃಶ್ಯ ವಿದು. ಒಬ್ಬರಿಗೊಬ್ಬರು ಆಗ್ರಹ ಮಾಡಿ ತಲೆಗೇರುವ ವರೆಗೆ ಕುಡಿದು, ಮೈಮರೆತು, ಒಲೆದಾಡುತ್ತ ಬಾಯಿಗೆ ಬಂದಂತೆ ನುಡಿಯುವ ದೃಶ್ಯವನ್ನು ಸರಾಯಿಯ ಅಂಗಡಿಯ ಸಮೀಪದಲ್ಲಿ ಹಾಯ್ದುವರು ಈಗ್ಗಿಯೂ ಕಾಣ ಬಹುದು. ಹೆಂಡದ ಸಂಗಡ ಬಾಡಿಸಿಕೊಳ್ಳುವ ಪದಾರ್ಥಗಳಲ್ಲಿಯೂ ವಿಶೇಷ ಬದಲಾವಣೆಯಾದಂತೆ ತೋರುವುದಿಲ್ಲ. ಶ್ಲೋಕಗಳಾದರೋ ಹೆಂಡಕುಡಕರ

ಬಾಯಿಂದ ಬರುವ ಶಬ್ದಗಳನ್ನೇ ಒಳಗೊಂಡಿವೆ. ಹದಗಾರ ಗಮಕಿಯು ಹಾವಭಾವಗಳಿಂದ ಈ ಪದ್ಯಗಳನ್ನು ಹೇಳಿದರೆ, ಅವನು ಕುಡಕನೆಂದು ಕಂಡುಬರುವುದರಲ್ಲಿ ಸಂದೇಹವಿಲ್ಲ !

**ದ್ವಾರಕಾಪುರದ ವರ್ಣನೆ.**

ದೇಶಾಧಿಪಕೃಷ್ಣರಾಯುಂಗೆ ಖಳರಿಂದ | ವೋಸವ ಬರಗುಡೆನೆಂದು |
ಶೇಷ ಮಂಡಳಿಸಿದಂದದಿ ವಜ್ರದಾಳ್ಕೇರಿ | ಲೇಸಾದುದೇವರ್ಣ್ಣಿಸುವೆನು ||
ಬಲಿನಂದನಮುಖ್ಯಖಳರೆಂಬ ಮೃಗಕುಲ | ಚಲಸಿ ತನ್ನದಿರ್ವರೆ ಪಿಡಿದು |
ಉಲಿದುಹೊಯ್ಯುವೆನೆಂಬರೌದ್ರದಿಂಕೋಟೆಯ | ಹುಲಿಮೊಗಕಣ್ಗೆರಂಜಿಸಿತು ||

ಮಾಟಾದ ರಮ್ಯರತ್ನಗಳ ಸೊನ್ನಾರ ಕೈ | ಮಾಟಸಾನಾ ಬಂಧಗತಿಯು |
ಕೂಟಸ್ಥವಾದ ಹೊನ್ನಗಸೆಯ ತಳಿತ ಕ | ವಾಟಗಳಿರ್ದುವೇನೆಂಬೆ ||
ಸೋಮಸೂರಿಯ ವೀಧಿ ವೀಧಿಯಿಕ್ಕೆಲದಲ್ಲಿ | ಹೇಮನಿರ್ಮಿತಸೌಧದೋಳಿ |
ರಾಮಣೀಯತೆವೆತ್ತ ಕಳಸದಂಗಡಿಯಿರ್ದು | ವಾಮಹಾದ್ವಾರಕಾಪುರದೆ ||

ರಾಗರಸದೊಳನವರತ ಕಾದಲರ ಸಂ | ಬೋಗಕ್ಕೆ ಸಮವಾಗಲೆನುತ |
ಆಗಮಜ್ಞರು ಹಂಚಿಕೊಟ್ಟಂತೆ ಪೇಟೆಯು | ಭಾಗದಂಗಡಿಗಳೊಪ್ಪಿದುವು ||
ಕಲೆಯರಿದಮಲಭಾವಜ್ಞರು ತಮ್ಮ ಕಾ | ದಲೆಯರ ಕರೆವಸನ್ನೆಯಲಿ |
ಸಲೆ ಪರಿಗ್ರಹಿಸಿ ಶೋಭಿಸುತಿರ್ಪ ಲಲಿತ ಬೆ | ಳ್ಳಿಲೆಗಳಂಗಡಿಗಳೊಪ್ಪಿದುವು ||

ಸುರಗಿ ಸೇವಂತಿ ಕುಂದ ಮಂದಾರ ಪಾ | ದರಿ ಕಂಚಿ ಕಣಿಗಿಲೆ ದವನ |
ಬಿರಿದ ಕೆಂಜಾಜಿಯೆಂಬುವ ಪುಷ್ಪದಂಗಡಿ | ಪರುಠವಿಸಿರ್ದುದೇನೆಂಬೆ ||
ಇಡಿಕಿರಿದಿಹ ಪುಷ್ಪದೊಳು ಗಂಧವಿರಲಾ | ರಡಿ ತುಡುಕುವುದೆಂದು ನೆಲದೆ |
ನಿಡುವೇರಿನೊಳು ಪರಿಮಳವೆತ್ತು ರಂಜಿಪ | ಮುಡಿವಾಳವಸರವೊಪ್ಪಿದುವು ||

ಮಲ್ಲಿಗೆಯಲರ್ದಂಡೆವಿಡಿಯೆ ಬಂದೆರಗುವ | ಜಿಲ್ಲಿದುಂಬಿಗೆ ಬೆರ್ಚಿನಿಂದು |
ಸೊಲ್ಲಿಪ ಪೂಮಾಲೆಗಾರ್ತಿ ಕಾವನ ಕಬ್ಬು | ವಿಲ್ಲಿನಂತಿರ್ದಳೇನೆಂಬೆ ||
ಭೋಜಿಪ ಕರ್ಪೂರ ಕಸ್ತೂರಿ ಜೇರ್ಣಜ | ವಾಜಿ ಪುಣುಗು ಬಹುತೈಲ |
ಸೋಜಿಗವಡೆದ ಸುಗಂಧದಂಗಡಿಗಳು | ರಾಜಿಸುತಿರ್ದುವಿಕ್ಕೆಲದಿ ||
ಹೆಸರ ಪಡೆದ ದಿವ್ಯಮಾಲಿಕೆ ಪಾಷಾಣ | ರಸದ್ರವ್ಯಸಕಲ ಸಂಭರವ |
ಬೆಸಗೊಂಡು ಬೇಡಲು ತೂಗುವ ಗಂದಿಗ | ವಸರಂಗಳಿರ್ದುವಿಕ್ಕೆಲದಿ ||

ಉತ್ತುತ್ತೆ ಖರ್ಜೂರದ್ರಾಕ್ಷಿ ಸಕ್ಕರೆ ಬೆಲ್ಲ | ವುತ್ತೈಸಿದ ಕಾಯುಭಾಗ |
ಒತ್ತದೆ ಕಳಿತ ಸಮಸ್ತಪಣ್ಣಸರಂಗ | ಳೆತ್ತರದಲಿ ಮಾರುತಿಹವು ||
ಅಂಗಡಿಯೊಳು ಗೋಧಿ ಕಡಲೆ ನಾನಾ ಧಾ | ನ್ಯಂಗಳ ರಾಸಿ ರಂಜಿಸಿತು |
ಮುಂಗಡೆಯೊಳು ಚಿತ್ರಗೆಲಸಿ ಚಿಪ್ಪಿಗರಾಯು | ಧಂಗಳ ಕೇರಿಯೊಪ್ಪಿದುವು ||
ಕಂಚುಗಾರರು ಕೈದುಗಾರರು ಹೊಳೆವ ಹೊಂ | ಮಂಚಗಾರರು ಶಿಲ್ಪಿಗರು |
ಸಂಚುಗಾರರು ಸದ್ವಿದ್ಯಾಧಿಕರಾದ | ಪಂಚಾಳರಿರ್ದರಿಕ್ಕೆಲದಿ ||
ಕಳೆವೆತ್ತವಾರನಾರಿಯರ ಕನ್ನಿಕೆಯರ | ಮೊಳೆವೊಲೆಗಳ ನೋಡಿನಗುತ |
ಎಳೆಬೆರಲ್ಗಳ ಚಿಟುಕೊತ್ತಿ ಕೈದೊಡಿಸುವ | ಬಳೆಗಾರರಿದರ್ದರಿಕ್ಕೆಲದಿ ||
ಹಲವು ದೀಪ್ತಿಯ ಪಟ್ಟೆ ಝಲ್ಲಿ ನಾನಾವರ್ಣ | ದಳೆದ ಚಿತ್ರಾಂಬರ ನಿಚಯ |
ಸುಲಲಿತ ದೇವಾಂಗವಸ್ತ್ರದೊಟ್ಟೆಲಸಾಲು | ಮಳಿಗೆಗಳಿರ್ದುವಿಕ್ಕೆಲದಿ ||
ತೋರ ಮಾಣಿಕ ಪಚ್ಚೆ ವಜ್ರವೈಡೂರಿಯ | ನೇರಾಣಿಮೌಕ್ತಿಕನೀಲ |
ರಾರಾಜಿಪ ರತ್ನಭೂಷಣಂಗೈವ ಸೊ | ನ್ನಾರರಂಗಡಿಗಳೊಪ್ಪಿದುವು ||
ಸಾಣೆಯ ಮೇಲೆ ರನ್ನಗಳಿಟ್ಟು ಮಸೆದೊಪ್ಪ | ಗಾಣಿಸಿಕುಡುವ ತೇಟಿಗರು |
ಆಣಿ ಮುತ್ತಿಗೆವೆಗ್ಗಳ ಬೆಲೆಗಟ್ಟುವ | ವಾಣಿಜರಿರ್ದರಿಕ್ಕೆಲದಿ ||
ಚಪ್ಪನ್ನದೇಶದನಾಣೆಯಂಗಳ ನೋಟ | ತಪ್ಪದ ಚಪಲಸೆಟ್ಟಿಗಳು |
ಒಪ್ಪವಡೆದು ಕುಳಿತಿರ್ದರು ಹಣಹೊನ್ನ | ಕುಪ್ಪೆಯ ಮುಂದಿಟ್ಟುಕೊಂಡು ||
ಒರೆಗಲ್ಲ ರಜವ ಮೇಣದೊಳೊತ್ತಿತೆಗೆದದ | ಕರಗಿ ಸುವರ್ಣ ಬಂಡುಗವ |
ನೆರೆದ ಯಾಚಕರಿಗೆ ಹಂಚಿ ಕುಡುವಚಿನ್ನ | ವರದರೊಪ್ಪಿದರು ಕಟ್ಟೆಯಲಿ ||
ಓರಂತೆ ಮರಕಾಲರು ಹಡಗಿನವ್ಯವ | ಹಾರದಿಗಳಿಸಿದ ಹಣವ |
ಭಾರಸಂಖ್ಯೆಯಲಿ ತೂಗುವರು ಬೇಡಿದರೆ ಕು | ಬೇರಂಗೆ ಕಡವಕುಡುವರು ||
ತೋಟಕಾಡಾರಂಬ ಕರ್ಬುಗರ್ದೆಗಳೆಡೆ | ಯಾಟದ ವ್ಯವಹಾರಿ ಜನರು |
ಘೋಟಕರಥ ಹಸ್ತಿಪದಚರಾದಿಗಳ ಮಾ | ರಾಟದಂಗಡಿಗಳೊಪ್ಪಿದುವು ||
ತಾಳಮದ್ದಳೆ ಪಾವುಜಶ್ರುತಿಮುಖವೀಣೆ | ಸಾಳಂಗಶುದ್ಧಗಾನೆಯರ |
ಮೇಳನಟ್ಟುವ ನಾನಾ ವಿದ್ಯೆಗಳಗಟ್ಟೆ | ವಾಳರ ಮನೆಗಳೊಪ್ಪಿದುವು ||
ರಾರಾಜಿಸುತಿಪ್ಪ ವನಿತೆಯರುಗಳ ಶೃಂ | ಗಾರವ ಜರೆದುಲೋಭಿಸುವ |
ವಾರಾಂಗನೆಯರ ಮನೆಗಳೊಪ್ಪಿರ್ದುದಾ | ದ್ವಾರಾವತಿಯ ಬೀದಿಯಲಿ ||
ತೋರಿಯ ಭುಜವೆತ್ತು ಜಗಜಟ್ಟಿಮಸೆದ ಕ | ಠಾರಿ ಖಂಡೆಯದ ಮಾಸಾಳು |
ಭೂರಿ ಭೂಪೋತ್ತಮರಲ್ಲದೆ ಬ್ರಾಹ್ಮಣ | ಗೇರಿ ಕಣ್ಣಾನಕೆರಂಜಿಸಿತು ||

ಇದು ಸೌರಾಷ್ಟ್ರದೊಳಗಿನ ದ್ವಾರಕೆಯ ವರ್ಣನೆಯಲ್ಲ. ಕಡಲನಿಂದ ಬಳಸಿದುದಾದರೂ ಉಡುಪಿಗೆ ಕೋಟೆಯಿಲ್ಲ. ಆದುದರಿಂದ ಈ ವರ್ಣನೆಯು ಶ್ರೀಕೃಷ್ಣನ ಉಡುಪಿಗೆ ಹತ್ತುವುದಿಲ್ಲ. ವಿಜಯನಗರವು ಆ ಕಾಲದ ದೊಡ್ಡ ಪಟ್ಟಣ. ಅದರ ಸುತ್ತಲು ಕೋಟೆಕೊತ್ತಳ ಮೊದಲಾದವುಗಳಿದ್ದುವು. ಆದರೆ, ವಿಜಯನಗರದ ಸುತ್ತಲು ಸಮುದ್ರವಿಲ್ಲ. ಕಾಗಿನೆಲೆಗೆ ಭದ್ರವಾದ ಕೋಟೆ ಅಗಳುಗಳಿದ್ದುವು. ಅವುಗಳಾಚೆಗೆ ಒಂದು ಬದಿಯಲ್ಲಿ ಕಾಗಿನೆಲೆಯ ಅದ್ಭುತ ಕೆರೆಯಿದೆ. ಆದರೂ ಕಾಗಿನೆಲೆಯು ದಾಸರ ಕಾಲದಲ್ಲಿ ವಿಜಯನಗರದಷ್ಟು ವಿಸ್ತಾರವಾಗಿರಲಿಲ್ಲ. ಕನಕದಾಸರು, ಕಾಗಿನೆಲೆಯನ್ನು ಹಿಗ್ಗಿಸಿ, ಅಲ್ಲಿಯ ಕೆರೆಯನ್ನು ಕಡಲಿಗೆ ಹೊಂದಿಸಿ, ಅವೆರಡನ್ನೂ ಹಬ್ಬಿದ ವಿಜಯನಗರಕ್ಕೆ ಹೋಲಿಸಿ, ಹೃದ್ಯವಾಗಿ ದ್ವಾರಕಾಪುರದ ಈ ವರ್ಣನೆಯನ್ನು ಬರೆದಿರಬಹುದಾಗಿ ತೋರುತ್ತದೆ.

---

## ೩. ಸ್ಕಂದಪುರಾಣದೊಳಗಿನ ಕತೆ.

### ಮಾಹೇಶ್ವರ ಖಂಡದೊಳಗಣ ಕೇದಾರಖಂಡ.

### ( ಅಧ್ಯಾಯ ೨೦,೨೧ )

ತಾರಕಾಸುರನು ಬ್ರಹ್ಮನನ್ನು ಕುರಿತು ತಪವನ್ನು ಎಸಗಿದನು. ಬ್ರಹ್ಮನು ಅವನ ನೋಂಪಿಗೆ ಮನಸೋತು, ' ನೀನು ಅಜೇಯನಾಗುವೆ. ಆದರೆ ನಿನಗೆ ಸೋಲಿಸುವವನು ಅರ್ಭಕನಾಗಿರುವನು, ' ಎಂದು ಮಾತು ಕೊಟ್ಟನು. ಈ ಬಲದಿಂದ ತಾರಕನು ಇಂದ್ರಾದಿ ದೇವತೆಗಳನ್ನು ಪೀಡಿಸ ತೊಡಗಿದನು. ದೇವತೆಗಳು ಬ್ರಹ್ಮನನ್ನು ಮೊರೆಹೊಕ್ಕರು. ಆಗ್ಗೆ ನಭೋವಾಣಿಯಿಂದ ದೇವತೆಗಳಿಗೆ ಕೇಳಿಸಿದುದೇನೆಂದರೆ, " ಶಿವನಿಗೆ ಮಗನಾಗಿ ಹುಟ್ಟಿದವನು ತಾರಕನನ್ನು ಸಂಹರಿಸುವನು. " ಆ ಮೇಲೆ ದೇವತೆಗಳು ಹಿಮಾಲಯನೆಡೆಗೆ ತೆರಳಿ, ಅವನಿಗೆ ತಮ್ಮ ಕಜ್ಜವನ್ನು ಅರುಹಿದರು. ಪರೋಪಕಾರದ ಗೋಸುಗ, ಮಗಳನ್ನು ಹಡೆಯಲು ಗರ್ಭಧಾರಣ ಮಾಡಬೇಕೆಂದು ಹಿಮಾಚಲನು ತನ್ನ ಹೆಂಡತಿಯಾದ ಮೇನೆಗೆ ತಿಳಿಸಿದನು. ಆದರಂತೆ ಹಿಮಾಲಯನಿಗೆ ಮೇನೆಯ ಹೊಟ್ಟೆಯಿಂದ ಗಿರಿಜೆಯು ಹುಟ್ಟಿದಳು.

ಗೌರಿಯು ಎಂಟು ವರ್ಷದವಳಾಗುತ್ತಲೆ, ಹಿಮಾಚಲನು ಆಕೆಯನ್ನು ತಪವನ್ನಾಚರಿಸುತ್ತಿದ್ದ ಶಿವನೆಡೆಗೆ ಕರೆದುಕೊಂಡು ಹೋಗಿ ಪ್ರತಿದಿವಸ ಅವನ ಪೂಜೆಗೈಯಲು ಅಪ್ಪಣೆ ಕೇಳಿದನು. ಚಲುವೆಯಾದ ಗೌರಿಯೊಡನೆ ಹಿಮಾಲಯನು ಬರದೆ ಒಬ್ಬನೆ ಬಂದು ಹೋಗಬಹುದೆಂದು ಅವನು ಆಜ್ಞೆಮಾಡಿದನು. ಗಿರಿಜೆಯು ತನಗೆ ನಿರ್ಬಂಧ ಹಾಕಿದ ವಿಷಯದ ವೈಯರ್ಥ್ಯವನ್ನು ವಿಶದಗೊಳಿಸಿ, ಪ್ರತಿದಿವಸ ತಂದೆಯೊಡನೆ ಶಿವನ ಆರಾಧನೆಯನ್ನು ಎಸಗಲು ಪ್ರಾರಂಭಿಸಿದಳು. ಆ ಮೇಲೆ ದೇವತೆಗಳು ಶಿವನ ಮನಸ್ಸು ಉಮೆಯಲ್ಲಿ ನಡುವ ಉಪಾಯವನ್ನು ಯೋಜಿಸಬೇಕೆಂದು ಬೃಹಸ್ಪತಿಗೆ ಕೇಳಿದರು. ಬೃಹಸ್ಪತಿಯು ಮದನನ ಸಹಾಯವನ್ನು ಕೋರಬೇಕೆಂದು ದೇವತೆಗಳಿಗೆ ಸೂಚಿಸಿದನು. ಆದರಂತೆ ಕಾಮನು ರತಿಯೊಡನೆ ಇಂದ್ರನೆದುರಿನಲ್ಲಿ ಬಂದೊಡನೆ ಮುಂದಣ ಕಾರ್ಯವನ್ನು ಅವನಿಗೆ ಅರುಹಲಾಯಿತು. ಮಾರನು ರತಿವೆರಸು ಅಪ್ಸರಾದಿಗಳೊಂದಿಗೆ ಮುಕ್ಕಣ್ಣನನ್ನು ಮುತ್ತಲು ಹೊರವೊಂಟನು. ಆಗ್ಗೆ ಉಮೆಯು ತಪದಲ್ಲಿದ್ದ ಶಿವನ ಆರಾಧನೆಯಲ್ಲಿ ನಿರತಳಾಗಿದ್ದಳು. ಕಾಮನು ಪೂಬಾಣವನ್ನು ಎಸೆಯಲಾರಂಭಿಸಿದನು. ಶಿವನು ಅದನ್ನು ಕಂಡು ರೊಚ್ಚಿಗೆದ್ದು, ತನ್ನ ಮೂರನೆಯ ಕಣ್ಣಿನಿಂದ ಅವನನ್ನು ನೋಡಿ ಸುಟ್ಟು ಬಿಟ್ಟನು. ದೇವತೆಗಳಲ್ಲಿ ಹಾಹಾಕಾರವುಂಟಾಯಿತು. ಅವರು ಶಿವನೆಡೆಗೆ ಹೋಗಿ, 'ಉಮೆಯಲ್ಲಿ ನಿಮ್ಮ ಮನಸ್ಸು ನೆಲೆಗೊಳ್ಳಬೇಕೆಂದು ಕಾಮನನ್ನು ಕರೆದು ತಂದಿದ್ದೆವು. ತಾರಕನಿಂದ ತೊಂದರೆಗೊಂಡಿರುವೆವು. ಕ್ಷಮಿಸಬೇಕು,' ಎಂದು ಅವನ ಕೋಪವನ್ನು ಕಡಿಮೆಮಾಡಬೇಕೆಂದು ಪ್ರಯತ್ನಿಸಿದರೂ ಅವನು ಆ ಸ್ಥಳವನ್ನು ಬಿಟ್ಟು ಹೊರಟುಹೋದನು. ಗೌರಿಯು ದುಃಖಿಸ ತೊಡಗಿದಳು. ಅದನ್ನು ಕಂಡು ರತಿಯು, ಅಂದುದೇನಂದರೆ, 'ತಪವನ್ನಾಚರಿಸಿ ಕಾಮನನ್ನು ಮತ್ತೆ ಬದುಕಿಸುವೆನು.' ಹೀಗೆ, ನೋಂಪಿಯನ್ನು ಕೈಕೊಂಡ ರತಿಯನ್ನು ಕಂಡು ನಾರದನು ಆಕೆಯನ್ನು ಹೀಯಾಳಿಸಿ, ಸಂಸಾರದಲ್ಲಿ ಮನಸ್ಸು ಹಾಕಬೇಕೆಂದು ಹೇಳಿದನು. ರತಿಯು ರೊಚ್ಚಿಗೆದ್ದು ನಾರದನನ್ನು ನಿರ್ಭರ್ತ್ಸಿಸಿದಳು. ನಾರದನು ಶಂಬರನೆಡೆಗೆ ಹೋಗಿ ರತಿಯನ್ನು ಕೂಡಬೇಕೆಂದು ಸೂಚಿಸಿದನು. ರತಿಯು ತನ್ನೊಡನೆ ಒಗೆತನಗೈಯಲಿಕ್ಕೆ ಒಪ್ಪದಿರುವುದನ್ನು ಕಂಡು ಆಕೆಯನ್ನು ಕರೆದುಕೊಂಡು ಹೋಗಿ, ತನ್ನ ಮನೆಯ ಬಾಣಸಗಿತಿಯರ ಅಧ್ಯಕ್ಷಳನ್ನಾಗಿ ಮಾಡಿ ಮಾಯಾವತಿಯೆಂಬ ಹೆಸರಿಟ್ಟನು.



---

# ೪ ಮಹಾಭಾರತದೊಳಗಿರುವ ಕತೆ.

## ( ಸಭಾಪರ್ವ. ಅಧ್ಯಾಯ. ೬೦ )

ಬಾಣನು ಬಲಿಚಕ್ರವರ್ತಿಯ ಹಿರಿಯ ಮಗನು. ಶಿವನನ್ನುದ್ದೇಶಿಸಿ ತಪಸ್ಸು ಮಾಡಿ, ಅವನನ್ನು ಒಲಿಸಿಕೊಂಡು, ಅನೇಕ ವರಗಳನ್ನು ಪಡೆದನು. ಬಾಣಾಸುರನ ನೆಲೆವೀಡು ಶೋಣಿತಪುರ. ಬಾಣನ ಆಳಿಕೆಯಲ್ಲಿ ದೇವತೆಗಳಿಗೆ ಪೀಡೆಯಾಗತೊಡಗಿತು. ಬಾಣನಿಗೆ ಉಷೆಯೆಂಬ ಒಬ್ಬ ಮಗಳಿದ್ದಳು. ಕೃಷ್ಣನ ಮೊಮ್ಮಗನಾದ ಅನಿರುದ್ಧನು ಹೇಗೋ ಆಕೆಯನ್ನು ದೊರಕಿಸಿ, ಆಕೆಯ ಸಂಗಡ ಸರಸವಾಡುತಿದ್ದನು.

ಯೇನೋಪಾಯೇನ ಕೌಂತೇಯ ಅನಿರುದ್ಧೋ ಮಹಾದ್ಯುತಿಃ।
ಪ್ರಾದ್ಯುಮ್ನಿಸ್ತಾಮುಷಾಂ ಪ್ರಾಪ್ಯ ಪ್ರಚ್ಛನ್ನಃ ಪ್ರಮುಮೋದಹ ॥

ಅದನ್ನು ಕಂಡು ಬಾಣನು ಅವರೀರ್ವರನ್ನು ಸೆರೆಮನೆಯಲ್ಲಿರಿಸಿದನು. ಬಾಣನ ಪೆಟ್ಟು ತಗಲಿ ಅನಿರುದ್ಧನಿಗೆ ಮೂರ್ಛೆ ಬಂದಿತು. ನಾರದನು ಆ ಸುದ್ದಿಯನ್ನು ಕೃಷ್ಣನಿಗೆ ಅರುಹಿದನು. ಕೃಷ್ಣನು ಬಲರಾಮ ಪ್ರದ್ಯುಮ್ನರೊಡನೆ ಗರುಡನನ್ನೇರಿ, ಶೋಣಿತಪುರಕ್ಕೆ ಹೋದನು.

ನಾರದಸ್ಯ ವಚಃ ಶ್ರುತ್ವಾ ತತೋರಾಜನ್ ಜನಾರ್ದನಃ।
ಆಹೂಯ ಬಲದೇವಂ ಹಿ ಪ್ರದ್ಯುಮ್ನಂಚ ಮಹಾದ್ಯುತಿಂ ॥
ಆರುರೋಹ ಗರುತ್ಮಂತಂ ತಾಭ್ಯಾಂಸಹ ಜನಾರ್ದನಃ।
ತತಃಸುಪರ್ಣಮಾರುಹ್ಯ ಜಯಾಯ ಭರತರ್ಷಭ ॥
ಜಗ್ಮುಃಕ್ರುಧಾ ಮಹಾವೀರ್ಯಾ ಬಾಣಸ್ಯನಗರಂ ಪ್ರತಿ।
ಅಥಾಸಾದ್ಯ ಮಹಾರಾಜ ತತ್ಪುರಂ ದದೃಶುಶ್ಚ ತೇ ॥

ಕೃಷ್ಣನು ದ್ವಾರಪಾಲಕರನ್ನು ಗೆದ್ದು, ಉತ್ತರ ದ್ವಾರದಲ್ಲಿರುವ ಶಿವನ ಸಂಗಡ ಹೋರಾಡಿ ಅವನನ್ನು ಸೋಲಿಸಿದನು. ಕೊನೆಗೆ ಕೃಷ್ಣ ಬಾಣರ ತುಮುಲ ಯುದ್ಧವೆಸಗಿ, ಕೃಷ್ಣನು ಬಾಣನ ಸಾಸಿರ ತೋಳುಗಳನ್ನು ಚಕ್ರದಿಂದ ಕತ್ತರಿಸಿದನು.

ಚಕ್ರಮುದ್ಯಮ್ಯ ರೋಷಾದ್ವೈ ದಿವ್ಯಂ ಶಸ್ತ್ರೋತ್ತಮಂ ತತಃ |
ಸಹಸ್ರಬಾಹೂಂಶ್ಚಿಚ್ಛೇದ ಬಾಣಸ್ಯಾಮಿತತೇಜಸಃ ||
ತತೋಬಾಣೋ ಮಹಾರಾಜ ಕೃಷ್ಣೇನ ಭೃಶಪೀಡಿತಃ |
ಭಿನ್ನಬಾಹುಃ ಪಪಾತಾಶು ವಿಶಾಖ ಇವ ಪಾದಪಃ ||

ಬಾಣನು ಅಸುವನ್ನು ತೊರೆದನು. ಕೃಷ್ಣನು ಉಷಾನಿರುದ್ಧರನ್ನು ಕಾರಾಗೃಹದಿಂದ ಬಿಡಿಸಿದನು; ಬಾಣನ ಸೊತ್ತನ್ನೆಲ್ಲ ಗರುಡನ ಮೇಲೆ ಹೇರಿ, ಉಷಾನಿರುಧರನ್ನೂ ಅವರ ಸೇವಕರನ್ನೂ ಕರೆದುಕೊಂಡು ದ್ವಾರಕೆಗೆ ಬಂದನು.

---

## ೫ ಭಾಗವತದೊಳಗಿರುವ ಕತೆ.

### ( ಸ್ಕಂದ ೧೦. ಉತ್ತರಾರ್ಧ, ಅಧ್ಯಾಯ ೫೫, ೬೨, ೬೩ )

ವಾಸುದೇವಾಂಶಸಂಭೂತನಾದ ಕಾಮನು ರುಕ್ಮಿಣಿಯಲ್ಲಿ ಪ್ರದ್ಯುಮ್ನನಾಗಿ ಹುಟ್ಟಿದನು. ತನ್ನ ಹಗೆಯಾದ ಆ ಕೂಸನ್ನು ಶಂಬರಾಸುರನು ಕವರಿ ಒಯ್ದು ನೀರಲ್ಲಿ ಒಗೆದನು. ಅದನ್ನು ಒಂದು ಮೀನವು ನುಂಗಿತು. ಒಬ್ಬ ಜಾಲಗಾರನು ಆ ಮೀನವನ್ನು ಹಿಡಿದು ಶಂಬರನಿಗೆ ಕಾಣಿಕೆಯಾಗಿ ಕೊಟ್ಟನು. ಶಂಬರನ ಬಾಣಸಿಗರು ಆ ಮೀನವನ್ನು ಕೊಯ್ಯಲು, ಅದರ ಹೊಟ್ಟೆಯೊಳಗೆ ಒಂದು ಶಿಶು ಇದ್ದುದು ಕಂಡುಬಂದಿತು. ಅವರು ಅದನ್ನು ಮಾಯಾವತಿಗೆ ಹೇಳಿದರು. ನಾರದನು ಮಾಯಾವತಿಗೆ ಅದರ ವೃತ್ತಾಂತವನ್ನು ಅರುಹಿದನು.

ನಾರದೋಕಥಯತ್ಸರ್ವಂ ತಸ್ಯಾಃಶ್ಶಂಕಿತಚೇತಸಃ |
ಬಾಲಸ್ಯ ತತ್ವಮುತ್ಪತ್ತಿಂ ಮತ್ಸ್ಯೋದರನಿವೇಶನಂ ||

ಮಾಯಾವತಿಯು, ಕಾಮನ ಪುನರ್ಜನ್ಮವನ್ನು ನಿರೀಕ್ಷಿಸುತ್ತಿರುವ, ಮಾರನ ರಮಣಿಯು. ತನ್ನಲ್ಲಿ ಪ್ರೇಮವನ್ನಿಡುತ್ತಿರುವುದನ್ನು ಕಂಡು ಆ ಬಾಲಕನು ಮಾಯಾವತಿಗೆ ಅಂದುದು,

ತಾಮಾಹ ಭಗವಾನ್ಕಾರ್ಷ್ಣಿರ್ಮಾತಸ್ತೇ ಮತಿರನ್ಯಥಾ ।
ಮಾತೃಭಾವಮತಿಕ್ರಮ್ಯ ವರ್ತಸೇ ಕಾಮಿನೀ ಯಥಾ ॥

ಮಾಯಾವತಿಯ ಉತ್ತರ,

ಭವಾನ್ನಾರಾಯಣಸುತಃ ಶಂಬರೇಣಾಹೃತೋ ಗೃಹಾತ್ ।
ಅಹಂತೇಧಿಕೃತಾ ಪತ್ನೀರತಿಃ ಕಾಮೋ ಭವಾನ್ಪ್ರಭೋ ॥

ಮಾಯಾವತಿಯು, ಶಂಬರನ ಕೊಲೆಗಾಗಿ, ಕಾಮನಿಗೆ ಮಹಾಮಾಯಾ ಮಂತ್ರವನ್ನು ಕಲಿಸಿದಳು. ಅವನು ಶಂಬರಾಸುರನನ್ನೂ ಅವನ ಅನುಯಾಯಿಗಳನ್ನೂ ಸಂಹರಿಸಿ, ಬಲಾಹಕನಂತೆ ರತಿಯೊಡನೆ ದ್ವಾರಕೆಯ ಅಂತಃಪುರವನ್ನು ಸೇರಿದನು. ಅಲ್ಲಿಯ ಹೆಣ್ಣುಮಕ್ಕಳು ದಿಗಿಲು ಬಡಿದು ನಿಂತರು. ರುಕ್ಮಿಣಿಗೆ ತನ್ನ ಮಗನನ್ನು ನೋಡಿದಂತೆ ಅನಿಸತೊಡಗಿತು. ಅಷ್ಟರಲ್ಲಿ ಕೃಷ್ಣನು ಬಂದರೂ ಅವನು ಮೌನದಿಂದಲೆ ಇದ್ದನು. ನಾರದನು ಎಲ್ಲ ವೃತ್ತಾಂತವನ್ನು ಹೇಳಿದಮೇಲೆ ಎಲ್ಲರಿಗೂ ಸಂತೋಷವಾಯಿತು.

ಬಾಣಾಸುರನು ಶಿವನನ್ನು ಕುರಿತು ತಪಸ್ಸು ಮಾಡಿ ಅರಸನಾಗಬೇಕೆಂಬ ವರವನ್ನು ಸಂಪಾದಿಸಿದನು. ಒಂದುದಿನ ಬಾಣನು ಶಿವನಿಗೆ ಅಂದುದು, 'ದೇವನೇ ನಿನ್ನಹೊರತು ನನ್ನ ಸಂಗಡ ಕಾದುವವರು ಮತ್ತಾರೂ ಇಲ್ಲ. ನನ್ನ ತೋಳುಗಳ ತೀಟೆಗಾಗಿ ದಿಗ್ಗಜಗಳ ಸಂಗಡ ಕಾದ ಹೋಗಲು ಅವು ಕಾಲಿಗೆ ಬುದ್ಧಿ ಹೇಳಿದುವು.' ಅದನ್ನು ಕೇಳಿ ಶಂಕರನು, 'ನಿನ್ನ ರಥದ ಕೇತುವು ಮುರಿದು ಬಿತ್ತೆಂದರೆ, ನನ್ನಂತಹ ಕಲಿಯು ನಿನ್ನನ್ನು ಪ್ರತಿಭಟಿಸಿ, ಕಾಳೆಗ ಹೂಡವನು,' ಎಂದು ಉತ್ತರವನ್ನಿತ್ತನು.

ಬಾಣನ ಮಗಳಾದ ಉಷೆಯು ಒಂದು ದಿನ ಕನಸಿನಲ್ಲಿ ಅನಿರುದ್ಧನೊಡನೆ ಸರಸವಾಡಿದಳು. ಎಚ್ಚತ್ತು ಅವನನ್ನುದ್ದೇಶಿಸಿ ಪ್ರಲಪಿಸತೊಡಗಿದಳು. ಅದು ಆಕೆಯ ಗೆಳತಿಯಾದ ಚಿತ್ರಲೇಖೆಗೆ ಕೇಳಿಸಿತು. ಚಿತ್ರಲೇಖೆಯು ದೇವತೆಗಳಿಂದ ಮಾನವರ ವರೆಗಿರುವ ಎಲ್ಲರ ರೂಹುಗಳನ್ನು ಬರೆದು ತೋರಿಸಿದಳು. ಉಷೆಯು ಅನಿರುದ್ಧನ ಚಿತ್ರವನ್ನು ಕಂಡು ನಾಚಿಕೊಂಡಳು.

ಆ ಮೇಲೆ ಚಿತ್ರಲೇಖೆಯು ಆಕಾಶಮಾರ್ಗವಾಗಿ ದ್ವಾರಕೆಗೆ ಹೋಗಿ, ಅಲ್ಲಿ ಮಂಚದ ಮೇಲೆ ಮಲಗಿರುವ ಅನಿರುದ್ಧನನ್ನು ಶೋಣಿತಪುರಕ್ಕೆ ತಂದಳು. ಉಷೆಯೊಡನೆ ಎಷ್ಟೋ ದಿವಸ ವಾಸವಾಗಿರುವ ಅನಿರುದ್ಧನನ್ನು ಬಾಣನ ಚಾರರು ಕಂಡು ಹಿಡಿದು ಅದನ್ನು ಬಾಣನಿಗೆ ಅರುಹಿದರು. ಬಾಣನು ಅಂತಃಪುರವನ್ನು ಸೇರಿ, ಅಲ್ಲಿರುವ ಅನಿರುದ್ಧನನ್ನು ಕಂಡು ಖತಿಗೊಂಡನು. ಅನಿರುದ್ಧನು ಕಾಳಗಕ್ಕೆ ಸಿದ್ಧನಾಗಿ ಬಾಣನ ಸೈನಿಕರನ್ನು ತುಂಡರಿಸಿದನು. ಅನಿರುದ್ಧನನ್ನು ಬಾಣನು ನಾಗಪಾಶದಿಂದ ಬಿಗಿದನು. ಉಷೆಯು ವ್ಯಾಕುಲಳಾಗಿ ಅಳುತ್ತನಿಂತಳು.

ತಂ ನಾಗಪಾಶೈರ್ಬಲಿನಂದನೋ ಬಲೀ ।
ಘ್ನಂತಂ ಸ್ವಸೈನ್ಯಂ ಕುಪಿತೋ ಬಬಂಧ ಹ ॥
ಉಷಾ ಭೃಶಂ ಶೋಕವಿಷಾದವಿಹ್ವಲಾ ।
ಬದ್ಧಂ ನಿಶಮ್ಯಾಶ್ರುಕಲಾಕ್ಷ್ಯರೌದಿಷೀತ್ ॥

ಇತ್ತ ದ್ವಾರಕೆಯಲ್ಲಿ ಮಳೆಗಾಲದ ನಾಲ್ಕು ತಿಂಗಳಲ್ಲಿ ಅನಿರುದ್ಧನ ಸದ್ದು ಕೇಳದೆ ಯಾದವರು ಹಲುಬುತ್ತಿದ್ದರು. ನಾರದನು ಈ ವೃತ್ತಾಂತವನ್ನು ಕೃಷ್ಣನಿಗೆ ತಿಳಿಸಿದನು. ಕೂಡಲೆ ಯಾದವರೆಲ್ಲರು ಶೋಣಿತಪುರದ ಮೇಲೆ ಸಾಗಿ ಹೋಗಲು ಸಜ್ಜಾದರು.

ನಾರದಾತ್ತದಾಕರ್ಣ್ಯ ವಾರ್ತಾಂ ಬದ್ಧಸ್ಯ ಕರ್ಮ ಚ ।
ಪ್ರಯಯುಃ ಶೋಣಿತಪುರಂ ವೃಷ್ಣಯಃ ಕೃಷ್ಣದೇವತಾಃ ॥

ಈ ರೀತಿಯಾಗಿ ಪಯಣ ಬೆಳಸಿ, ಶೋಣಿತಪುರವನ್ನು ಮುತ್ತಿದರು. ಆ ಮೇಲೆ ಶಿವ-ಶೌರಿ ಬಲರಾಮ-ಕುಂಭಾಂಡಕೂಪಕರ್ಣ, ಸಾಂಬ-ಬಾಣ, ಸಾತ್ಯಕಿ-ಬಾಣ, ಸ್ಕಂದ-ಪ್ರದ್ಯುಮ್ನ ಮತ್ತು ಕೃಷ್ಣ-ಬಾಣರ ಕಾಳಗಗಳೆಸಗಿದುವು. ಯಾದವರಿಗೆ ಜಯವಾಯಿತು. ಬಾಣನು ಸಾಯುತ್ತಾನೆಂಬ ಅಂಜಿಕೆಯಿಂದ ಅವನ ತಾಯಿಯಾದ ಕೋಟರೆಯು, ಹೋರಾಡುತ್ತಿರುವ ಕೃಷ್ಣನ ಎದುರಿನಲ್ಲಿ ಬತ್ತಲೆಯಾಗಿ ನಿಂತಳು. ಕೃಷ್ಣನು ಕಣ್ಣು ಮುಚ್ಚಿದನು. ಬಾಣನು ವಿಶ್ರಮಿಸಿ, ಕದನಕ್ಕೆ ಮತ್ತೆ ಅಣಿಯಾದನು. ಆಗ್ಗೆ ಕೃಷ್ಣನು, ಮರದ ಕೊಂಬುಗಳನ್ನು ಕಡಿಯುವಂತೆ, ಬಾಣನ ಸಾಸಿರ ಬಾಹುಗಳನ್ನು ಚಕ್ರದಿಂದ ಕತ್ತರಿಸತೊಡಗಿದನು. ಅವನ ನಾಲ್ಕೇ ತೋಳುಗಳುಳಿದುವು.

**ತಸ್ಯಾಸ್ಯತೋಽಸ್ತ್ರಾಣ್ಯಸಕೃಚ್ಚಕ್ರೇಣ ಕ್ಷುರನೇಮಿನಾ ।**
**ಚಿಚ್ಛೇದ ಭಗವಾನ್ಬಾಹೂನ್ ಶಾಖಾ ಇವ ವನಸ್ಪತೇಃ ॥**

ಶಿವನು ತನ್ನ ಶಿಷ್ಯನಾದ ಬಾಣನಿಗಾಗಿ ಕಳವಳಗೊಂಡು, ಕೃಷ್ಣನನ್ನು ಪ್ರಾರ್ಥಿಸಿದನು. ಕೃಷ್ಣನೇ ಈಶ್ವರನೆಂದು ಹೊಗಳಿದನು. ಬಾಣನಿಗೆ ಅಭಯವು ದೊರೆಯಿತು. ಕೂಡಲೆ ಅವನು ಉಷಾನಿರುದ್ಧರನ್ನು ತಂದು ಕೃಷ್ಣನಿಗೆ ಒಪ್ಪಿಸಿದನು. ಬಾಣನು ಶಿವಭಕ್ತರಲ್ಲಿ ಮೊದಲಿಗನಾಗಿ ಉಳಿದನು.

---

## ೬. ವಿಷ್ಣು ಪುರಾಣದೊಳಗಿನ ಕತೆ.

### ( ಪಂಚಮಾಂಶ. ಅಧ್ಯಾಯ, ೨೬-೩೩. )

ರುಕ್ಮಿಣಿಗೆ ಮದನಾಂಶಸಂಭೂತನಾದ ಪ್ರದ್ಯುಮ್ನನೆಂಬ ಮಗನು ಹುಟ್ಟಿದನು. ತನ್ನನ್ನು ಕೊಲ್ಲುವನೆಂಬ ಅಂಜಿಕೆಯಿಂದ, ಶಂಬರಾಸುರನು ಆ ಶಿಶುವನ್ನು ಹುಟ್ಟಿದ ಆರುದಿವಸಗಳಲ್ಲಿಯೆ ಕದ್ದೊಯ್ದು ಅದನ್ನು ಲವಣಾರ್ಣವದೊಳಗೆ ಒಂದು ಮೊಸಳೆಯು ಎದುರಿನಲ್ಲಿ ಒಗೆದನು. ಆ ಶಿಶುವನ್ನು ಒಂದು ಮೀನವು ನುಂಗಿತು. ಒಬ್ಬ ಜಾಲಗಾರನು ಆ ಮೀನವನ್ನು ಹಿಡಿದು ಶಂಬರನಿಗೆ ಕಾಣಿಕೆಯಾಗಿ ಕೊಟ್ಟನು. ಶಂಬರಾಸುರನಿಗೆ ಮಾಯಾವತಿಯೆಂಬ ಹೆಂಡತಿಯಿದ್ದಳು. ಅಡುಗೆಗಾಗಿ ಆ ಮೀನವನ್ನು ಹೆಚ್ಚಲು ಅದರ ಹೊಟ್ಟೆಯಲ್ಲಿ ಮಗುವನ್ನು ಕಂಡು ಆಕೆಯು ಬೆರಗಾದಳು. ನಾರದನು ಅದರ ವೃತ್ತಾಂತವನ್ನು ಮಾಯಾವತಿಗೆ ಅರುಹಿದನು. ಆಕೆಯು ತನ್ನ ಮಾಯಾವಿದ್ಯೆಯನ್ನು ಆ ಮಗುವಿಗೆ ಕಲಿಸಿ, ಅವನಲ್ಲಿ ತನ್ನ ಮನಸ್ಸು ಇರಿಸಿದಳು. ಮಾತೃಭಾವವನ್ನುಳಿದು ಹೀಗೇಕೆ ವರ್ತಿಸುವೆ, ಎಂದು ಕೇಳಿದುದಕ್ಕೆ ಮಾಯಾವತಿಯು ಪೂರ್ವದ ಎಲ್ಲ ಸಂಗತಿಯನ್ನು ಅವನಿಗೆ ಅರುಹಿದಳು. ಪ್ರದ್ಯುಮ್ನನು ಶಂಬರನೊಡನೆ ಕಾದಿ ಅವನನ್ನು ಮಡುಹಿದನು. ಆ ಮೇಲೆ ಮಾಯಾವತಿಯೊಡನೆ ಆಕಾಶಮಾರ್ಗವಾಗಿ ದ್ವಾರಕೆಗೆ ತೆರಳಿದನು.

ಅರಮನೆಯೊಳಗಣ ಕೃಷ್ಣನ ಪರಿವಾರದವರು ಅವರನ್ನು ಕಂಡು ವಿಸ್ಮಯ ಗೊಂಡರು. ರುಕ್ಮಿಣಿಗೆ ಪ್ರದ್ಯುಮ್ನನನ್ನು ನೋಡಿದ ಕೂಡಲೆ ತನ್ನ ಮಗನನ್ನು ಕಂಡಂತೆ ಭಾಸವಾಗತೊಡಗಿತು. ಅಷ್ಟರಲ್ಲಿ ಕೃಷ್ಣನೊಡನೆ ಅಲ್ಲಿಗೆ ಬಂದ ನಾರದನು ಎಲ್ಲ ವೃತ್ತಾಂತವನ್ನು ತಿಳಿಸಿದನು. ಅದನ್ನು ಕೇಳಿ ಎಲ್ಲರಿಗೂ ಸಂತೋಷವಾಯಿತು. ಪ್ರದ್ಯುಮ್ನನಿಗೆ ಅನಿರುದ್ಧನೆಂಬ ಮಗನು ಹುಟ್ಟಿದನು.

ಒಂದಾನೊಂದುದಿನ ಪಾರ್ವತಿಯು ಶಂಕರನೊಡನೆ ಕ್ರೀಡಿಸುತ್ತಿರು ವುದನ್ನು ಕಂಡು, ಬಾಣಾಸುರನ ಮಗಳಾದ ಉಷೆಯೆಂಬುವವಳು, ಕಾತರ ಗೊಂಡಳು. ಪಾರ್ವತಿಯು ಅದನ್ನು ಮನಗೊಂಡು, ನಿನ್ನ ಇನಿಯನೊಡನೆ ಹೀಗೆಯೆ ಕ್ರೀಡಿಸುವೆ, ಎಂದು ಹರಿಸಿದಳು. “ ವೈಶಾಖ ಶುದ್ಧ ದ್ವಾದಶಿಯ ರಾತ್ರಿ ಕನಸಿನಲ್ಲಿ ನಿನ್ನ ಮೇಲೆ ಆವನು ಬಲಾತ್ಕಾರ ಮಾಡುವನೊ, ಅವನೇ ನಿನ್ನ ಪತಿ ” ಯೆಂದು ಪಾರ್ವತಿಯು ಹೇಳಿದಳು. ಆ ದಿನ ರಾತ್ರಿ ಉಷೆಯು ಒಂದು ಕನಸು ಕಂಡಳು. ಈ ಸುದ್ದಿಯನ್ನು ಉಷೆಯು, ಕುಂಭಾಂಡ ಮಂತ್ರಿಯ ಮಗಳಾದ, ತನ್ನ ಸಖಿ, ಚಿತ್ರಲೇಖೆಗೆ ತಿಳಿಸಿದಳು. ಚಿತ್ರ ಲೇಖೆಯು ದೇವದಾನವಮಾನವರುಗಳ ಚಿತ್ರಗಳನ್ನು ತೆಗೆದು, ಉಷೆಯು ಕನಸಿನಲ್ಲಿ ಕಂಡವನಾರೆಂದು ಗೊತ್ತುಪಡಿಸಲು, ಆಕೆಗೆ ತೋರಿಸಿದಳು. ಮಾನವರೊಳಗಣ ವೃಷ್ಣಿಗಳೆಡೆಗೆ ಉಷೆಯ ಮನವೊಲಿಯಿತು; ಕೃಷ್ಣಬಲ ರಾಮರನ್ನು ಕಂಡು ಲಜ್ಜಿತಳಾದಳು; ಪ್ರದ್ಯುಮ್ನನನ್ನು ನೋಡಿ ದೃಷ್ಟಿ ಯನ್ನು ತಿರುವಿದಳು; ಅನಿರುದ್ಧನ ರೂಹನ್ನು ಕಂಡೊಡನೆ ಲಜ್ಜೆಯನ್ನು ತೊರೆದು, “ ಇವನೇ ಅವ ” ಎಂದು ನುಡಿದಳು !

ಬಾಣಾಸುರನು ಕಡುತರ ಶಿವಭಕ್ತನು, ಪರಾಕ್ರಮಶಾಲಿಯು. ಎಲ್ಲ ರನ್ನೂ ಗೆದ್ದು ಮಲೆತಿದ್ದನು. ಒಂದು ದಿನ ಆವನು ತ್ರಿಲೋಚನನಿಗೆ ಅಂದದ್ದು, “ ಶಿವನೇ ಕದನವಿಲ್ಲದೆ ನನ್ನ ಸಹಸ್ರಬಾಹುಗಳು ನಿರ್ವಿಣ್ಣ ವಾಗಿರುವುವು. ಅವುಗಳ ತೀಟೆಯನ್ನು ತೀರಿಸಲು ಯುದ್ಧವೆಸಗುವುದೋ ? ” ಎಂದು ಕೇಳಿಕೊಂಡನು. ನಿನ್ನ ಮಯೂರಧ್ವಜವು ಭಂಗವಾದೊಡನೆ ಕದನವೆಸಗುವುದು, ಎಂದು ಶಿವನು ಉತ್ತರವನ್ನಿತ್ತನು. ಬಾಣನು ಮುಕ್ಕಣ್ಣನಿಗೆ ಪಡುಮಟ್ಟು, ಮರಳಿ ಬರುವಷ್ಟರಲ್ಲಿ, ತನ್ನ ಮಯೂರ ಧ್ವಜವು ಭಗ್ನವಾದುದನ್ನು ನೋಡಿ ಸಂತೋಷಬಟ್ಟನು.

ಚಿತ್ರಲೇಖೆಯು ಯೋಗಸಾಮರ್ಥ್ಯದಿಂದ, ದ್ವಾರಕೆಯಿಂದ ಅನಿರುದ್ಧನನ್ನು ತಂದು ಉಷೆಯ ಅರಮನೆಯಲ್ಲಿ ಇರಿಸಿದಳು. ಉಷೆಯು ಅನಿರುದ್ಧನೊಡನೆ ಸರಸವಾಡುವುದನ್ನು ಚರರು ಬಾಣನಿಗೆ ಅರುಹಿದರು. ಬಾಣ ಅನಿರುದ್ಧರ ಕಾಳಗವೆಸಗಿತು. ಬಾಣನು ಅನಿರುದ್ಧನನ್ನು ಮಾಯಾವಿದ್ಯೆಯಿಂದ ಗೆದ್ದು ಪನ್ನಗಾಸ್ತ್ರದಿಂದ ಬಿಗಿದಿರಿಸಿದನು. ನಾರದನು ಈ ವೃತ್ತಾಂತವನ್ನು ಯಾದವರಿಗೆ ತಿಳಿಸಿದನು. ಕೂಡಲೆ, ಕೃಷ್ಣನು ಶೋಣಿತಪುರದ ಮೇಲೆ ದಾಳಿಯನ್ನು ಕೈಕೊಂಡನು.

**ತತೋ ಗರುಡಮಾರುಹ್ಯ ಸ್ಮೃತಮಾತ್ರಾಗತಂ ಹರಿಃ ।**
**ಬಲಪ್ರದ್ಯುಮ್ನಸಹಿತೋ ಬಾಣಸ್ಯ ಪ್ರಯಯೌ ಪುರೀಂ ॥**

ಕೃಷ್ಣಪ್ರಮುಖರ ಯುದ್ಧವೆಸಗಿತು. ತ್ರಿಪಾದ ತ್ರಿಶಿರ ಜ್ವರದ ಸಂಗಡಲೂ ಕದನವಾಯಿತು. ವೈಷ್ಣವ ಜ್ವರಕ್ಕೆ ಗೆಲುವಾಯಿತು. ಶಂಕರ ಕಾರ್ತಿಕೇಯರು ಕೃಷ್ಣನ ಸಂಗಡ ಹೋರಾಡಿದರು. ಶಿವಶೌರಿಗಳ ಕಾಳಗದಲ್ಲಿ ಹರನನ್ನು ಮುರಹರನು ಜೃಂಭಣಾಸ್ತ್ರದಿಂದ ಮೋಹಗೊಳಿಸಿದನು. ಮುಕ್ಕಣ್ಣನು ಮುರಹರನ ರಥದೆಡೆಯಲ್ಲಿ ಸುಮ್ಮನೆ ಕುಳಿತು ಬಿಟ್ಟನು. ಆ ಮೇಲೆ ಗರುಡ ಪ್ರದ್ಯುಮ್ನರು ಹರನ ಸೈನ್ಯವನ್ನು ಚದುರಿದರು. ಕೃಷ್ಣನ ಹುಂಕಾರದಿಂದ ಗುಹನ ಶಕ್ತಿಯು ಕುಂಠಿತವಾಯಿತು. ನಂದಿಯು ಹೂಡಿದ ರಥವನ್ನೇರಿ ಬಾಣನು ಯುದ್ಧಕ್ಕೆ ಅಣಿಯಾದನು. ಬಲಭದ್ರನು ಲಾಂಗಲದಿಂದ ಬಾಣನ ಸೈನ್ಯವನ್ನು ಸೋಲಿಸಿದನು. ಆ ಮೇಲೆ ಕೃಷ್ಣ ಬಾಣರ ತುಮುಲ ಯುದ್ಧವೆಸಗಿತು. ಕೃಷ್ಣನು ಚಕ್ರದಿಂದ ಬಾಣನ ತೋಳುಗಳನ್ನು ಕತ್ತರಿಸಿದನು. ಶಿವನು ಕೃಷ್ಣನನ್ನು ವರ್ಣಿಸಿ ತನ್ನ ವರಕ್ಕೆ ನ್ಯೂನತೆಯುಂಟಾಗಬಾರದೆಂದು ಬೇಡಿಕೊಂಡನು. ಕೃಷ್ಣನು ಅಂದದು,

**ತ್ವಯಾ ಯದಭಯಂ ದತ್ತಂ ತದ್ದತ್ತಮಖಿಲಂ ಮಯಾ ।**
**ಮತ್ತೋ ವಿಭಿನ್ನಮಾತ್ಮಾನಂ ದ್ರಷ್ಟುಮರ್ಹಸಿ ಶಂಕರ ॥**
**ಯೋಽಹಂ ಸತ್ವಂ ಜಗಚ್ಚೇದಂ ಸದೇವಾಸುರಮಾನುಷಂ ।**
**ಅವಿದ್ಯಾಮೋಹಿತಾತ್ಮಾನಃ ಪುರುಷಾ ಭಿನ್ನದರ್ಶಿನಃ ॥**

ಆ ಮೇಲೆ ಕೃಷ್ಣನು ಪ್ರದ್ಯುಮ್ನನಿದ್ದೆಡೆಗೆ ಹೋದನು. ಗರುಡನ ಗಾಳಿಯಿಂದ ನಾಗಗಳು ಕಳಚಿಬಿದ್ದುವು. ಕೃಷ್ಣನು ಉಷಾನಿರುದ್ಧರನ್ನು ಗರುಡನ ಮೇಲೇರಿಸಿ ದ್ವಾರಕೆಗೆ ತೆರಳಿದನು.

---

# ೭. ಹರಿವಂಶದೊಳಗಿನ ಕತೆ.

## ( ವಿಷ್ಣುಪರ್ವ. ಅಧ್ಯಾಯ, ೧೦೪-೧೨೮ ).

ಕೃಷ್ಣನಿಗೆ ರುಕ್ಮಿಣಿಯಲ್ಲಿ ಪ್ರದ್ಯುಮ್ನನೆಂಬ ಮಗನು ಹುಟ್ಟಿದನು. ಶಂಬರನೆಂಬ ದೈತ್ಯನು, ಆ ಶಿಶುವನ್ನು, ಹುಟ್ಟಿದ ಏಳು ದಿವಸಗಳಲ್ಲಿಯೆ ಕದ್ದೊಯ್ದು, ಅದನ್ನು ಮಕ್ಕಳಿಲ್ಲದ ತನ್ನ ಹೆಂಡತಿಯಾದ ಮಾಯಾವತಿಗೆ ಕೊಟ್ಟನು. ಆ ಮಗುವು ತನ್ನ ಗಂಡನೆಂದು ಮಾಯಾವತಿಗೆ ಜ್ಞಾಪಕ ವಾಯಿತು. ಆದುದರಿಂದ ಆಕೆಯು ಆ ಶಿಶುವಿಗೆ ಮೊಲೆಯನ್ನುಣ್ಣಿಸಲಿಲ್ಲ. ದಿನವೊಂದಕ್ಕೆ ಮಾಯೆಯ ಮಾಯವು ತನ್ನಲ್ಲಿ ಬೆಳೆಯುತ್ತಿರುವುದನ್ನು ಕಂಡು ಆ ಬಾಲಕನು ಅವಳನ್ನು ಹಳಿಯಲಾರಂಭಿಸಿದನು. ಮಾಯೆಯು ನಿಜ ವೃತ್ತಾಂತವನ್ನು ಅವನಿಗೆ ಅರುಹಿದಳು. ಪ್ರದ್ಯುಮ್ನನು ಶಂಬರನೊಡನೆ ಕಾಲಕೆದರಿ ಕದನ ಹೂಡಿ ಅವನ ಧ್ವಜವನ್ನು ಕಡಿದನು. ನಾರದನು ಇಂದ್ರನಿಂದ ವೈಷ್ಣವಾಸ್ತ್ರಕವಚಗಳನ್ನು ಒದಗಿಸಿಕೊಂಡು ಅವುಗಳನ್ನು ಪ್ರದ್ಯುಮ್ನನಿಗೆ ಕೊಟ್ಟನು. ಶಂಬರ ಪ್ರದ್ಯುಮ್ನರ ಘನಘೋರ ಸಂಗ್ರಾಮ ವೆಸಗಿ ಅದರಲ್ಲಿ ಶಂಬರನು ಮರಣಹೊಂದಿದನು. ಪ್ರದ್ಯುಮ್ನನು ಮಾಯಾ ವತಿಯೊಡನೆ ದ್ವಾರಕೆಗೆ ಹೋದನು. ಅಲ್ಲಿ ಎಲ್ಲರೂ ಆಶ್ಚರ್ಯಚಕಿತ ರಾದರು. ಕೃಷ್ಣನು ವಸ್ತುಸ್ಥಿತಿಯನ್ನು ತಿಳಿಸಿದನು.

ಬಾಣಾಸುರನು ರುದ್ರನನ್ನು ಕುರಿತು ನೋಂಪಿಯನ್ನು ನೋಂತನು. ಅದರ ಸೈಪಿನ ಬಿತ್ತೆಂಬುವಂತೆ ಮುಕ್ಕಣ್ಣನು ಮೈದೋರಿ ಅವನಿಗೆ ವರ ಬೇಡಲು ಆಣತಿಯಿತ್ತನು. ಬಾಣನು ಪಾರ್ವತಿಯ ಪುತ್ರನಾಗಬೇಕೆಂಬ ವರ ಬೇಡಿದನು. ಶಂಕರನು "ಕಾರ್ತಿಕೇಯನ ತಮ್ಮನಾಗಿರುವೆ" ಎಂದು ವರ ಕೊಟ್ಟು ಅಂದುದು, "ನಿನ್ನ ಧ್ವಜವು ಭಗ್ನವಾಯಿತೆಂದರೆ, ನಿನಗೆ ಯುದ್ಧದ ಪ್ರಸಂಗವೊದಗುವುದು." ಒಂದು ದಿನ ತನ್ನ ಮಂತ್ರಿಯಾದ ಕುಂಭಾಂಡನೊಡನೆ ಮಾತಾಡುತ್ತಿರುವಾಗ್ಗೆ, ಸಿಡಿಲು ಬಡಿದು ಬಾಣನ ಧ್ವಜವು ನೆಲಕ್ಕುರುಳಿತು.

ಬಾಣನ ಮಗಳಾದ ಉಷೆಯು, ಒಂದುದಿನ ನದಿಯ ದಡದಲ್ಲಿ ಕ್ರೀಡಿಸುತ್ತಿರುವಾಗ, ಅಲ್ಲಿಯೆ, ಶಿವನು ಪಾರ್ವತಿಯೊಡನೆ ವಿಹರಿಸುತ್ತಿದ್ದನು. ಉಷೆಯು ಪಾರ್ವತಿಯನ್ನು ಸತ್ಕರಿಸಿದಳು. ಪಾರ್ವತಿಯು, 'ವೈಶಾಖ ಶುದ್ಧ ದ್ವಾದಶಿಯ ದಿವಸ ಗಂಡನನ್ನು ಪಡೆಯುವೆ' ಎಂದು ಆಶೀರ್ವದಿಸಿದಳು. ಅದರಂತೆಯೆ ಆ ದಿನ ಉಷೆಯು ಕನಸು ಕಂಡಳು. ಆಕೆಗೆ ಗಂಡನೊಡನೆ ರಮಿಸಿದಂತಾಯಿತು. ಎಚ್ಚತ್ತು ತನ್ನ ಕೌಮಾರ ವ್ರತವು ಭ್ರಷ್ಟವಾಯಿತೆಂದು ಹಲುಬತೊಡಗಿದಳು. ಕುಂಭಾಂಡನ ಮಗಳಾದ ಚಿತ್ರಲೇಖೆಯೆಂಬ ತನ್ನ ಗೆಳತಿಗೆ ಅದನ್ನು ತಿಳಿಸಿದಳು. ಚಿತ್ರಲೇಖೆಯು ಪಾರ್ವತಿಯ ವರವನ್ನು ಆಕೆಯ ಜ್ಞಾಪಕಕ್ಕೆ ತಂದುಕೊಟ್ಟಳು. ಮೇಲಾಗಿ, ಆ ರಮಣನಾರು, ಅವನು ಹೇಗಿರುವನು, ಎಂಬುದನ್ನು ತಿಳಿಯಬೇಕಾದರೆ, ಚಿತ್ರಲೇಖೆಯೆಂಬ ಅಪ್ಸರೆಯನ್ನು ಸ್ಮರಿಸಬೇಕೆಂದು ಹೇಳಿದಳು. ಉಷೆಯ ಬಯಕೆಯಂತೆ ಆ ಅಪ್ಸರೆಯು ಪ್ರಕಟಳಾಗಿ, ಏಳು ದಿವಸಗಳಲ್ಲಿ ಎಲ್ಲರ ಚಿತ್ರಗಳನ್ನು ತರುವೆನೆಂದು ಹೇಳಿ, ಅದರಂತೆ ಎಲ್ಲ ರೂಹುಗಳನ್ನು ಉಷೆಗೆ ತಲುಪಿಸಿದಳು. ಅನಿರುದ್ಧನ ಚಿತ್ರವನ್ನು ಕಂಡು ಉಷೆಯು ಕಾತರಗೊಂಡಳು. ಚಿತ್ರಲೇಖೆಯು ಆ ರೂಪವುಳ್ಳವನು ಕೃಷ್ಣನ ಮೊಮ್ಮಗನಾದ ಅನಿರುದ್ಧನೆಂದು ಹೇಳಿದಳು. ಉಷೆಯು ವಿರಹ ವಿಹ್ವಲಳಾಗಿ ಅವನನ್ನು ತಂದು ಕೊಡದಿದ್ದರೆ, ಅಸುದೊರೆಯುವೆನೆಂದು ಚಿತ್ರಲೇಖೆಗೆ ತಿಳಿಸಿದಳು. ಚಿತ್ರಲೇಖೆಯು ಆಕಾಶವನ್ನಡರಿ ದ್ವಾರಕೆಗೆ ಹೋಗಿ ಅನಿರುದ್ಧನಿಗೆ ಎಲ್ಲ ಸಂಗತಿಯನ್ನು ಹೇಳಿದಳು. ಅನಿರುದ್ಧನು ತನಗೂ ಅಂತಹ ಸ್ವಪ್ನ ಬಿದ್ದಿತೆಂದು ಹೇಳಿ ಅವಳೇ ತನ್ನ ಪತ್ನಿಯೆಂದು ನುಡಿದನು. ಚಿತ್ರಲೇಖೆಯು ಅನಿರುದ್ಧನನ್ನು ಎತ್ತಿಕೊಂಡು ಶೋಣಿತಪುರಕ್ಕೆ ಬಂದು ಉಷೆಯ ಅಂತಃಪುರವನ್ನು ಸೇರಿದಳು. ಉಷಾನಿರುದ್ಧರ ಗಾಂಧರ್ವ ವಿವಾಹವಾಯಿತು. ಈ ಸುದ್ದಿಯು ಬಾಣನಿಗೆ ತಿಳಿಯಿತು ಬಾಣನು ಸಿಟ್ಟಾದನು. ಅವನ ಸೈನಿಕರು ಯುದ್ಧಕ್ಕೆ ಸಿದ್ಧರಾದರು. ನಾರದನು ಅನಿರುದ್ಧನನ್ನು ಹುರುಪುಗೊಳಿಸಿದನು. ಬಾಣನ ಸೈನಿಕರು ಸೋತರು. ಕೊನೆಗೆ ಬಾಣಾನಿರುದ್ಧರ ಕಾಳೆಗವೆಸಗಿತು. ಕುಂಭಾಂಡನ ಹೇಳಿಕೆಯಂತೆ ಬಾಣನು ಮಾಯಾಯುದ್ಧವನ್ನು ಪ್ರಾರಂಭಿಸಿ, ಅನಿರುದ್ಧನನ್ನು ಹಾವುಗಳಿಂದ ಬಿಗಿದು ಕಟ್ಟಿದನು. ನಾರದನು ಈ ವೃತ್ತಾಂತವನ್ನು ಕೃಷ್ಣನಿಗೆ ಹೇಳಿದನು. ಕೃಷ್ಣನು ಗರುಡನ ಮೇಲೇರಿ ಬಲರಾಮ ಪ್ರದ್ಯುಮ್ನರೊಡನೆ ಶೋಣಿತ

ಪುರಕ್ಕೆ ಹೋದನು. ಅಲ್ಲಿ ಕೃಷ್ಣರುದ್ರರ ತುಮುಲಯುದ್ಧವೆಸಗಿತು. ಭೂದೇವಿಯು ಭಾರತಾಳದೆ ಬ್ರಹ್ಮನೆಡೆಗೆ ಹೋದಳು. ಬ್ರಹ್ಮನು ಬರುವಷ್ಟರಲ್ಲಿ, ಶಿವನಿಗೆ ತಾನೇ ಕೃಷ್ಣನಲ್ಲಿ ನೆಲಿಸಿದುದು ಕಂಡು ಬಂದಿತು. ಶಿವನು ಕಾಳೆಗ ನಿಲ್ಲಿಸಿದನು.

ಆತ್ಮಾನಂ ಕೃಷ್ಣಯೋನಿಸ್ಥಂ ಪಶ್ಯತೇಹ್ಯೇಕಯೋನಿಜಂ ।
ತತೋ ನಿಸೃತ್ಯ ರುದ್ರಸ್ತು ನ್ಯಸ್ತವಾದೋಭವನ್ಮೃಧೇ ॥

ಬ್ರಹ್ಮನು ಕನಸಿಲ್ಲಿ ಕಂಡುದು,

ಮಂದರಸ್ಯ ಗಿರೇಃಪಾರ್ಶ್ವೇ ನಲಿನ್ಯಾಂ ಭವಶಂಕರೌ ।
ರಾತ್ರೌ ಸ್ವಪ್ನಾಂತರೇ ಬ್ರಹ್ಮನ್ ಮಯಾ ದೃಷ್ಟೌಹರಾಚ್ಯುತೌ ॥
ಹರಂಚ ಹರಿರೂಪೇಣ ಹರಿಂಚ ಹರರೂಪಿಣಂ ।
ಶಂಖಚಕ್ರಗದಾಪಾಣಿಂ ಪೀತಾಂಬರಧರಂ ಹರಂ ॥
ತ್ರಿಶೂಲಪಟ್ಟಿಶಧರಂ ವ್ಯಾಘ್ರಚರ್ಮಧರಂ ಹರಿಂ ।
ಗರುಡಸ್ಥಂ ಚಾಪಿ ಹರಂ ಹರಿಂಚ ವೃಷಭಧ್ವಜಂ ॥

ಆಗ್ಗ ಮಾರ್ಕಾಂಡೇಯನು ಮಾಡಿದ ಸ್ತವನ,

ಶಿವಾಯ ವಿಷ್ಣುರೂಪಾಯ ವಿಷ್ಣವೇ ಶಿವರೂಪಿಣೇ ।
ಯಥಾಂತರಂ ನ ಪಶ್ಯಾಮಿ ತೇನ ತೌ ದಿಶತಶ್ಶಿವಂ ॥

ಆ ಮೇಲೆ ಗುಹನು ಕೃಷ್ಣ ಪ್ರದ್ಯುಮ್ನರನ್ನು ಪ್ರತಿಭಟಿಸಿದನು. ಕೃಷ್ಣನು ಗುಹನನ್ನು ಸಂಹರಿಸಬೇಕೆಂಬುವದರಲ್ಲಿ, ಲಂಬಾ ಎಂಬ ಹೆಸರುಳ್ಳ ಕೊಟ್ಟವೀದೇವಿಯು—ಪಾರ್ವತಿಯ ಅಷ್ಟಮಾಂಶದವಳು—ಕೃಷ್ಣನ ಮುಂದೆ ಬತ್ತಲೆ ನಿಂತಳು,

ದಿಗ್ವಾಸಾ ದೇವವಚನಾತ್ ಪ್ರವಿಷ್ಟಾ ತತ್ರಕೊಟ್ಟವೀ ।
ಲಂಬಾನಾಮ ಮಹಾಭಾಗಾ ಭಾಗೋದೇವ್ಯಾಸ್ತಥಾಷ್ಟಮಃ ॥

ಕೃಷ್ಣನು ಮೋರೆ ತಿರುವಿಕೊಂಡೊಡನೆ, ಕೊಟ್ಟವಿಯು ಗುಹನನ್ನು ಕರೆದುಕೊಂಡು ರಣರಂಗದಿಂದ ಹೊರಟು ಹೋದಳು. ಬಾಣನು ಕೃಷ್ಣನ ಸಂಮುಖದಲ್ಲಿ ನಿಂತನು. ನಂದಿಯು ರಥದೊಡನೆ ಶಿವನನ್ನು ಕರೆದುಕೊಂಡು ಹೋಗಿ,

ಆ ರಥವನ್ನು ಬಾಣನಿಗೆ ಕೊಟ್ಟನು. ಲಂಬೆಯು ಬಾಣಕೃಷ್ಣರ ನಡುವೆ ಮತ್ತೆ ನಗ್ನಳಾಗಿ ನಿಂತಳು. ಬಾಣನೂ ಸ್ಕಂದನ ತಮ್ಮನು. ಆದರೂ ಕೃಷ್ಣನು,

ಕೃತ್ವಾ ದ್ವಿಬಾಹುಂ ತಂ ಬಾಣಂ ಛಿನ್ನಶಾಖಮಿವದ್ರುಮಂ ।
ಪುನಃಕರಾಗ್ರೇ ಕೃಷ್ಣಸ್ಯ ಚಕ್ರಂ ಪ್ರಾಪ್ತಂ ಸುದರ್ಶನಂ ॥

ಬಾಣನಿಗೆ ಎರಡೇ ಕೈಗಳುಳಿದುವು. ರಣದಲ್ಲಿ ಬಿದ್ದ ಬಾಣನೆಡೆಗೆ ನಂದಿಯು ಶಿವನನ್ನು ಕೊಂಡೊಯ್ದನು. ಶಿವನು ಬಾಣನನ್ನು ಹರಿಸಿ ಅವನಿಗೆ ಅಮೃತತ್ವವನ್ನೂ ವಿದ್ರೂಪವಡಗಿದ ದೇಹವನ್ನೂ ದಯಪಾಲಿಸಿದನು.

ಕೃಷ್ಣನಾರದರು ಅನಿರುದ್ಧನ ಕಡೆಗೆ ಹೋದರು. ಗರುಡನನ್ನು ಕಂಡ ಕೂಡಲೆ ಅನಿರುದ್ಧನನ್ನು ಸುತ್ತಿದ ನಾಗಗಳು ಕಳಚಿಬಿದ್ದುವು. ಉಷಾನಿರುದ್ಧರ ವಿವಾಹವು ಅಲ್ಲಿಯೆ ಜರುಗಿತು. ಶರಣು ಬಂದ ಕುಂಭಾಂಡನಿಗೆ ಆ ರಾಜ್ಯವು ದೊರೆಯಿತು. ಗರುಡನ ಮೇಲೇರಿ ಎಲ್ಲರೊಡನೆ ಕೃಷ್ಣನು ದ್ವಾರಕೆಗೆ ತೆರಳಿದನು. ದಾರಿಯಲ್ಲಿ ವರುಣನು ಬಾಣನ ಗೋವುಗಳನ್ನು ಇಟ್ಟುಕೊಂಡುದನ್ನು ಕಂಡು ಅವನ ಸಂಗಡ ಕೃಷ್ಣನು ಯುದ್ಧ ಹೂಡಿದನು. ವರುಣನು ಬಾಣನಿಗೆ ಪ್ರಾಣಾಂತಿಕ ಸಮಯವನ್ನು ಕೊಟ್ಟುದು ಕೃಷ್ಣನಿಗೆ ತಿಳಿದ ಕೂಡಲೆ, ಅವನು ಮರಳಿ ವರುಣನಿಗೆ ಗೋವುಗಳನ್ನೊಪ್ಪಿಸಿ ಮುಂದೆ ಸಾಗಿದನು. ದ್ವಾರಕೆಯಲ್ಲಿ ವಧೂವರರಿಗೆ ಸ್ವಾಗತವಾಗಿ, ಎಲ್ಲರೂ ಸುಖದಿಂದ ಇರತೊಡಗಿದರು.

---

# ೮ ಮೋಹನತರಂಗಿಣಿಯೊಳಗಿರುವ ಕತೆ.

ಕನಕದಾಸರು ಮೋಹನತರಂಗಿಣಿಗಾಗಿ ಓದಿರಬೇಕಾದ ಕತೆಗಳ ಸಾರಾಂಶವನ್ನು ವಿವರಿಸಲಾಯಿತು. ಇಲ್ಲಿ, ದಾಸರ ಕೃಷ್ಣಚರಿತ್ರೆಯ ಕತೆಯನ್ನು ಬರೆಯಲಿದೆ. ಆ ಎಲ್ಲ ಮೂಲ ಗ್ರಂಥಗಳನ್ನು ಮುಂದಿಟ್ಟುಕೊಂಡು ಕೂಲಂಕಷವಾಗಿ ಓದಿದರೆ, ಅವುಗಳೊಳಗಿನ ಕತೆಗಳಲ್ಲಿಯೂ ತರಂಗಿಣಿಯೊಳಗಿನ ಚರಿತೆಯಲ್ಲಿಯೂ ಅನೇಕ ಸಾಮ್ಯವೈಷಮ್ಯಗಳಿರುವುದು ಕಂಡು ಬರುವುದು. ಅವುಗಳನ್ನೆಲ್ಲ ಇಲ್ಲಿ ವಿವರಿಸುವುದು ಅಸಾಧ್ಯ. ಆದುದರಿಂದ, ದಾಸರು ಮಾಡಿಕೊಂಡ ಮಾರ್ಪಾಟುಗಳು ಕೆಲಮಟ್ಟಿಗಾದರೂ ತಿಳಿಯಬೇಕೆಂದು, ಆ ಕತೆಗಳ ಸಾರಾಂಶವನ್ನು ಕೊಡಲಾಯಿತು. ಅವುಗಳಿಂದ ದಾಸರ ಕೈವಾಡದ ದಿಗ್ದರ್ಶನವಾದರೆ, ಸಾಕು.

ಒಂದು ದಿನ ಕೃಷ್ಣನು ರುಕ್ಮಿಣಿಯೊಡನೆ, ಅಂತಃಪುರದಲ್ಲಿ, ವಿನೋದದಿಂದ ಮಾತಾಡುತ್ತ ಕುಳಿತಿದ್ದನು. ಆಗ್ಗೆ ದಾಸಿಯರು ಕ್ರೀಡಾವಿಹಂಗಮಗಳನ್ನು ಅವರ ಮುಂದೆ ತಂದಿರಿಸಿದರು. ಆಗ ಪಕ್ಷಿಗಳು ತಮ್ಮ ಶಿಶುಗಳಿಗೆ ಗುಟುಕು ಕೊಡುವುದನ್ನು ರುಕ್ಮಿಣಿಯು ನೋಡಿದಳು.

ತಂಗಡಲೆಯ ಮೆಯ್ಸಿ ನೀರನೂಡಿಸುತೆ ವಿ । ಹಂಗ ಸಂತೋಷದಿ ತಮ್ಮ |
ಮುಂಗಟ್ಟಿದ ಮುದ್ದು ಮರಿಗಳ್ಗೆ ಗುಟುಕೀಯೆ | ಕಂಗೊಳಿಸಿತು ರುಕ್ಮಿಣಿಗೆ ||

ತನಗೂ ಮಗುವಾಗಬೇಕೆಂಬ ಬಯಕೆಯು ರುಕ್ಮಿಣಿಯಲ್ಲಿ ಅಂಕುರಗೊಂಡಿತು. ಆಕೆಯು ಕೃಷ್ಣನಿಗೆ ಮಗನನ್ನು ದಯಪಾಲಿಸಬೇಕೆಂದು ಬೇಡಿಕೊಂಡಳು. ರುಕ್ಮಿಣಿಗೆ ಪ್ರದ್ಯುಮ್ನನೆಂಬ ಮಗನು ಹುಟ್ಟಿದನು. ಹೆತ್ತ ಹತ್ತು ದಿವಸಗಳಲ್ಲಿಯೆ ಶಂಬರನೆಂಬ ದೈತ್ಯನು ಆ ಮಗುವನ್ನು ಕದ್ದೊಯ್ದು ಒಂದು ಜಲಾಶಯದಲ್ಲಿ ಒಗೆದನು.

ಈ ತರಳನ ಮರ್ದಿಸಿ ಭ್ರೂಣಹತ್ಯಾ | ಪಾತಕವನು ಕಟ್ಟಿ ಕೊಳಲು |
ಏತಕೆ ತನ್ನ ತಾನೇ ಸಾಯಲೆನುತೆ ಕೈ । ಸೋತಂತೆ ಬಿಸುಟನಬ್ಧಿಯಲಿ ||

ಪ್ರದ್ಯುಮ್ನನು ಕಾಮನ ಅವತಾರ. ಹಿಂದಕ್ಕೊಮ್ಮೆ ತಾರಕನ ಉಪಟಳವಾಗಲು ಬ್ರಹ್ಮನು ನಾರಾಯಣನೆಡೆಗೆ ಹೋಗಿ ದೂರ ಹೇಳಿದನು..

“ ಶಿವನಿಂದ ಹುಟ್ಟಿದ ಮಗನಿಂದ ತಾರಕನ ಲಯವಾಗುವುದು ” ಎಂದು ನಾರಾಯಣನು ಅಂತರ್ಧಾನನಾದನು. ಮನ್ಮಥನು ಶಿವನನ್ನು ಬಾಧಿಸಿದಲ್ಲಿ ಪಾರ್ವತಿಗೆ ಮಗನು ಹುಟ್ಟುವನು, ಎಂದು ಅಂದು ಬ್ರಹ್ಮನು, ಕಾಮನೆಡೆಗೆ ಹೋಗಲಿಕ್ಕೆ ಬೃಹಸ್ಪತಿಯನ್ನು ನೇಮಿಸಿದನು. ಬೃಹಸ್ಪತಿಯು ಕಾಮನನ್ನು ಕೊಂಡಾಡಿ, ಶಿವನನ್ನು ಕಾಡಲು, ಅವನನ್ನು ಹುರಿದುಂಬಿಸಿದನು. ಕಾಮನು ಶಿವನ ತಪೋವನದ ಮೇಲೆ ಸಾಗಿಹೋದನು. ಕಾಮನ ಹಾವಳಿ,

ಮಧುಮಾಸವಲ್ಲ ವಸಂತ ಬಂದಿದೆ ನೋಡಿ। ವಿಧುವು ಮೂಡಿತು ರಾತ್ರಿಯಲ್ಲಿ।
ಇದು ಮದನೋತ್ಪಾತವೆಂದು ಮುನೀಂದ್ರರು । ವಧುಗಳನವುದಪ್ಪಿದರು ॥

ಚಟುಲಕಾಮೋದ್ದೀಪನದಿಂದೆ ಕಡುಧೂರ್ತ । ವಟುಗಳರಿಸಿ ಕುವರಿಯರ |
ಬಟುವೊಲೆಗಳ ಕೈದುಡಕಿದುದು ಕೇಳಿಲೆ । ನಿಟಿಲಾಕ್ಷ ತಪದಿರ್ದ ಬನದಿ ॥

ನನೆಗೋಲನುಪಟಳದಲಿ ಭ್ರಾಂತಿಗೊಂಡಿರ್ದ । ವನಚರ ಪೂತಸಂಪಗೆಯು |
ಕೊನೆಗಳ ಮುರಿದಿಡಲಂಜಿ ತಾಪಸರೆಲೆ | ವನೆಗಾತಿಯರನಪ್ಪಿದರು ||

ಶಿವನು ಸಿಟ್ಟಾಗಿ ಕಾಮನನ್ನು ಕೆಂಗಿಡಿಗಣ್ಣಿನಿಂದ ಸುಟ್ಟು ಬೂದಿ ಮಾಡಿದನು. ರತಿಯು ವಿರಹದಿಂದ ಬೆಂದು ಮನೆಮಾರುಗಳನ್ನು ತೊರೆದು ಅಲೆದಾಡತೊಡಗಿದಳು. ಶಂಬರಾಸುರನ ಪಟ್ಟಣಕ್ಕೆ ಬಂದು ಅವನ ಮನೆಯಲ್ಲಿ ಬಾಣಸಗಿತ್ತಿಯ ಕೆಲಸ ಹಿಡಿದಳು. ಒಂದು ದಿನ ಶಂಬರನ ದೂತರು ಒಂದು ಮೀನವನ್ನು ಹೆಚ್ಚುವಾಗ್ಗೆ ಅದರ ಹೊಟ್ಟೆಯೊಳಗಿಂದ ಒಂದು ಕೂಸು ಬಂದಿತು. ಅದರ ಮೇಲೆ ರತಿಯ ಪ್ರೀತಿ ಕೂತಿತು. ಒಬ್ಬ ದಾಸಿಯು ಆ ಶಿಶುವನ್ನು ಹೆತ್ತಳೆಂದು ಶಂಬರನಿಗೆ ಹೇಳಿ, ಅದನ್ನು ಕಾಪಾಡಲು ಅಪ್ಪಣೆ ದೊರಕಿಸಿದಳು. ಆ ಬಾಲಕನು ನೆರೆತ ಮೇಲೆ ಶಂಬರನಿಂದ ಯುದ್ಧವಿದ್ಯೆಯನ್ನು ಕಲಿತು, ಅವನನ್ನೇ ಸಂಹರಿಸಿದನು. ಆ ಮೇಲೆ ರತಿಪ್ರದ್ಯುಮ್ನರು ದ್ವಾರಕೆಗೆ ಬಂದರು. ಅವರನ್ನು ವಿಜೃಂಭಣೆಯಿಂದ ಮನೆದುಂಬಿಸಿಕೊಳ್ಳಲಾಯಿತು. ಅವರೀರ್ವರಿಗೆ ಅನಿರುದ್ಧನೆಂಬ ಮಗನು ಹುಟ್ಟಿದನು.

ಮತ್ತೊಂದೆಡೆಯಲ್ಲಿ, ಬಾಣನೆಂಬ ದೈತ್ಯನು ಮಾರ್ಮಲೆತಿದ್ದನು. ಅವನ ನೆಲೆವೀಡು ಶೋಣಿತಪುರ. ಬಾಣಾಸುರನಿಗೆ ಉಷೆಯೆಂಬ ಚೆಲುವೆಯಾದ ಮಗಳಿದ್ದಳು. ಒಂದು ದಿನ ಆಕೆಯು ಕನಸು ಕಂಡು ಅದರಲ್ಲಿ ಅನಿರುದ್ಧ

ನೊಡನೆ ವಿಹರಿಸಿದಂತಾಯಿತು. ಅದನ್ನು ಆಕೆಯು ತನ್ನ ತಂದೆಯ ಮಂತ್ರಿಯಾದ ಕುಂಭಾಂಡನ ಮಗಳಿಗೆ ಹೇಳಿದಳು. ಕುಂಭಾಂಡನ ಮಗಳು ಉಷೆಯ ಜೀವದಗೆಳತಿ. ಆಕೆಯು ಚಿತ್ರಕಲೆಯಲ್ಲಿ ನಿಪುಣಳಿದ್ದಳು. ಆಕೆಯ ಹೆಸರು ಚಿತ್ರಲೇಖೆ. ಚಿತ್ರಲೇಖೆಯು ದೇವದಾನವಮನುಷ್ಯರೆ ಮುಂತಾದ ವರ ರೂಹುಗಳನ್ನು ತೆಗೆದು ಉಷೆಗೆ ತೋರಿಸಿದಳು. ಉಷೆಯು ಅನಿರುದ್ಧನ ಚಿತ್ರವನ್ನು ನೋಡಿ ಲಜ್ಜಿತಳಾದಳು. ಚಿತ್ರಲೇಖೆಯು ಅಂದುದು,

ಕದ್ದೈಸದೆ ನೋಡು ಸ್ಮರನಬಾಯೊಳಗುರ್ಚಿ । ಬಿದ್ದಂತೆ ಪಡಿಯಚ್ಚುವಡೆದ ।
ಮುಗ್ಧಾಸ್ಪದೆ ಕಮನೀಯರೂಪನನನಿ । ರುದ್ಧನ ನೋಡೆಂದಳಬಲೆ ॥

ಆ ಮೇಲೆ ಚಿತ್ರ ಲೇಖಿಯು ಆಕಾಶಮಾರ್ಗವಾಗಿ ದ್ವಾರಕೆಗೆ ಹೋಗಿ, ಉಷೆಯ ವೃತ್ತಾಂತವನ್ನು ಅನಿರುದ್ಧನಿಗೆ ಅರುಹಿ, ಅವನನ್ನು ಶೋಣಿತ ಪುರಕ್ಕೆ ತಂದು ಉಷೆಯ ಅಂತಃಪುರದಲ್ಲಿ ಇಳಿಸಿದಳು. ಉಷೆಯು ಒಬ್ಬ ಯುವಕನೊಡನೆ ಸರಸವಾಡುತ್ತಿರುವಳೆಂಬ ಸುದ್ದಿಯು ಬಾಣಾಸುರನಿಗೆ ತಲುಪಿತು. ನಾರದನು ಬಾಣನನ್ನು ಮತ್ತಿಷ್ಟು ಕೆರಳಿದನು. ನಾರದನು ಬಾಣನಿಗೆ ಅಂದುದು,

ಕೇಳಿದೊಡಾಂ ಪೇಳ್ದಪೆ ಕೇಳು ನಿನಗೀ । ವೇಳೆಯೊಳ್ ತಲೆಗುತ್ತಲಹುದು ।
ಭಾಳಾಕ್ಷನ ಸದ್ಭಕ್ತನಂದನೆಯತ್ತ ಸೂಳೆಯಾಗಿರ್ಪುದು ಸುಖವೆ ॥

ಬಾಣನು ಕೋಪಗೊಂಡುದುದನ್ನು ಕಂಡು ನಾರದನು ಉಷೆಯೊಡನೆ ಸರಸ ವಾಡುವವನ ಪರಿಚಯು ಮಾಡಿಕೊಡುವನು,

ಹೊಕ್ಕವನಾರೆಂಬುದ ಕೇಳು ಪೇಳುವೆ । ರಕ್ಕಸ ವೈರಿಯ ಮೊಮ್ಮ ।
ಕಕ್ಕಸ ನಿನಗೀದು ಹವಣಲ್ಲಭೇದಿಸೆ । ವೆಕ್ಕಸವಹುದೆಂದನಗುತೆ ॥

ಬಾಣನು ಅನಿರುದ್ಧನೊಡನೆ ಕಾಳಗ ಮಾಡಿ, ಅವನನ್ನು ಬಂಧಿಸಿದನು. ಆ ಸುದ್ದಿಯನ್ನು ನಾರದನು ಕೃಷ್ಣನಿಗೆ ತಿಳಿಸಿದನು,

ಕೃಷ್ಣನು ಚಪ್ಪನ್ನಕೋಟಿಯಾದವರೊಡನೆ ಗರುಡನನ್ನೇರಿ ಶೋಣಿತ ಪುರದ ಮೇಲೆ ಸಾಗಿಹೋದನು. ಬಾಣನು ಕಡುತರ ಶಿವಭಕ್ತನು. ಬಾಣನ ಭಕ್ತಿಗೆ ಮೆಚ್ಚಿ ಶಿವನು ಶೋಣಿತಪುರವನ್ನು ಕಾಯುತ್ತಿದ್ದನು. ಶಿವಶೌರಿಗಳ ಯುದ್ಧವಾಯಿತು. ಶಿವಗಣ-ವಿಷ್ಣುಗಣಗಳ ನಿಕರದ ಕಾಳೆಗವೆಸಗಿತು.

ಷಣ್ಮುಖ–ಪ್ರದ್ಯುಮ್ನ, ಗರುಡ–ನವಿಲು, ಗರುಡ- ನಂದಿ, ಬಲರಾಮ–ಗಣಪತಿ, ಶಿವ–ಶೌರಿ, ಕುಂಭಾಂಡ-ಬಲರಾಮ, ಕೊನೆಗೆ ಕೃಷ್ಣ–ಬಾಣಾಸುರರ ಕಾಳೆಗಗಳಾದುವು. ಬಾಣನ ಒಂಬೈನೂರ ತೊಂಬತ್ತೆಂಟು ನಿಡುದೋಳುಗಳು ಕತ್ತರಿಸಿದುವು.

ಇಡಿಕಿರಿದೊಂಬೈನೂರ ತೊಂಬತ್ತೆಂಟು। ನಿಡುದೋಳ ಕತ್ತರಿಸಿದುವು ||

ಶಿವನು ಭಕ್ತನಿಗಾಗಿ ಮಧ್ಯಸ್ಥನಾಗಿ ಕಾಳೆಗವನ್ನು ನಿಲ್ಲಿಸಿದನು,

ರಕ್ಕಸನೆರಡು ತೋಳ್ಗಳ ಕಡಿದಪೆನೆಂದು । ಚಕ್ರವ ಪುನರಪಿತುಡುಕೆ ।
ಮುಕ್ಕಣ್ಣನೈತರುತುಭಯವೀರರಿಗಡ್ಡ । ಹೊಕ್ಕನು ಮಧ್ಯಸ್ಥನಾಗಿ ||

ಶಿವನು ತನಗೂ ಕೃಷ್ಣನಿಗೂ ಭೇದವಿಲ್ಲೆಂದು ಬಾಣನಿಗೆ ಸೂಚಿಸಿದನು. ಬಾಣನು ಅದನ್ನು ಮನಗಂಡು ತನ್ನ ಮಗಳಾದ ಉಷೆಯನ್ನು ಅನಿರುದ್ಧನಿಗೆ ಕೊಡಲು ವಾಗ್ದಾನ ಮಾಡಿದನು. ತನ್ನ ಮಂತ್ರಿಯೊಡನೆ ವಿವಾಹ ಸಮಾರಂಭವನ್ನು ನೆರವೇರಿಸಬೇಕೆಂದು ಹೇಳಿ, ಹರಿಯ ನಿರೋಪಪಡೆದು ಶಿವನ ಸಂಗಡ ಕೈಲಾಸಕ್ಕೆ ತೆರಳಿದನು.

ಅರಳಿದ ಬೆಳ್ದಾವರೆಗಣ್ಣನ ಕೂಡೆ। ಮರಳಿ ಧೂರ್ಜಟಿ ಮಾತನಾಡಿ ।
ಇರಲುರಿಗಣ್ಣವ ರಹಿತಬಾಹನಕೊಂಡು। ತೆರಳಿದ ಕೈಲಾಸಪುರಕೆ ||

ಕೃಷ್ಣನು ಉಷಾನಿರುದ್ಧರನ್ನೂ ಯಾದವರನ್ನೂ ದ್ವಾರಕೆಗೆ ಕರೆದುಕೊಂಡು ಹೋಗಿ ಅಲ್ಲಿ ವಿವಾಹಸಮಾರಂಭವನ್ನು ಜರುಗಿಸಿ, ಅವರೊಡನೆ ಸೌಖ್ಯದಿಂದ್ದನು.

---

## ೬. ತರಂಗಿಣಿಯನ್ನು ಕೇಳಿದ ವ್ಯಕ್ತಿ.

ಕನಕದಾಸರು ಕಾಗಿನೆಲ್ಲಿಯ ಆದಿಕೇಶವನ ಗುಡಿಯಲ್ಲಿ ಒಬ್ಬ ಸೂಳೆಯನ್ನಿಟ್ಟುಕೊಂಡು ಇದ್ದರೆಂಬ ಒಂದು ಕತೆಯು ಕೆಲ ಜನರ ಬಾಯಿಯಲ್ಲುಂಟು. ಆದುದರಿಂದ ದಾಸರು ಬಿದೆಗಾರರಾಗಿದ್ದರೊ, ಇಲ್ಲವೊ, ಎಂಬುದನ್ನು ತಿಳಿದುಕೊಳ್ಳುವದು ಮಹತ್ವದ್ದಾಗಿದೆ. ತರಂಗಿಣಿಯನ್ನು ಬರೆಯುವಾಗ್ಗೆಯೆ ಅವರು 'ದಾಸ' ರಾಗಿದ್ದರು. ಸೂಳೆಯನ್ನಿಟ್ಟ ದಾಸರನ್ನು, ವ್ಯಾಸರಾಯರು ಪುರಂದರದಾಸರು ಮೊದಲಾದ ದಾಸರು, ಹೊಗಳಿದುದೇಕೆ? ವಾದಿರಾಜರು ಕನಕದಾಸರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡುದೇಕೆ? ಈ ವಿಷಯವನ್ನು ವಿಚಾರಿಸಿದರೆ, ದಾಸರ ಸಂಬಂಧದಲ್ಲಿರುವ ಆ ಕತೆಯು ಕಲ್ಪನೆಯ ಮಾತೆಂಬುದು ಮನವರಿಕೆಯಾಗುವುದು. ಬಹು ದಿವಸ ರೂಢಿಯಲ್ಲಿರುವ ಮಾತನ್ನು ಅಲ್ಲಗಳೆಯ ಬೇಕಾದರೆ, ಅದನ್ನು ಸಪ್ರಮಾಣವಾಗಿ ಖಂಡಿಸಬೇಕಾಗುವುದು. ಮೋಹನತರಂಗಿಣಿಯಲ್ಲಿಯೆ ಆ ವಿಷಯವಾಗಿ ಬಲವಾದ ಪ್ರಮಾಣಗಳಿವೆ. ಆದರೆ ಓದಿ ಮಾತಾಡುವರಾರು?

೧. ಕಾಗಿನೆಲ್ಲಿಯೊಳಗೆ ದಾಸರ ಜೊತೆಯಲ್ಲಿ ಒಬ್ಬ ಹೆಣ್ಣುಮಗಳಿದ್ದುದೇನೋ ನಿಜ. ಆ ಹೆಂಗಸು ಯಾರೆಂಬುದನ್ನು ತಿಳಿದುಕೊಳ್ಳುವಾ. ತಮ್ಮ ಮೋಹನತರಂಗಿಣಿಯನ್ನು ದಾಸರು ಆಕೆಗೆ ಹೇಳಿದಂತೆಯೂ ಆಕೆಯು ಅದನ್ನು ಕೇಳಿದಂತೆಯೂ ಬರೆದಿರುವರು.

ಕೃತಿವೇಳ್ದ ಕನಕದಾಸೋತ್ತಮ ಕೇಳ್ದವ। ಳತಿ ಸುಜ್ಞಾನ ವಧೂಟಿ।

ತರಂಗಿಣಿಯನ್ನು ಕೇಳಿದ ಹೆಣ್ಣುಮಗಳು ಬುದ್ಧಿವಂತಿಯಾಗಿದ್ದಳು. ಆಕೆಯು ಗುಣವಂತಿಯು; ಭಕ್ತಿಪುರಸ್ಸರವಾಗಿ ಕೃಷ್ಣಚರಿತ್ರೆಯನ್ನು ಆಲಿಸುವವಳು,

ಜತೆಯುಗಲದೆ ನಿನ್ನಂತೆ ಕೇಳುವ ಗುಣಾ। ನ್ವಿತೆಯರ ತೋರಾಯತಾಕ್ಷಿ॥

ಮೇಲಾಗಿ ಆಕೆಯು ಹೆಂಗುಸರಜಾತಿಗೆ ಅಧಿದೇವತೆ ಯಂತಿದ್ದಳು,

ಏಸು ಜನ್ಮದ ತಪಸಿನ ಫಲವಿರ್ದುದೊ। ವಾಸುದೇವನ ಪುಣ್ಯ ಕಥೆಯ।
ಲೇಸು ಬರ್ಪಂತೆ ನಾನಿನಗುಸಿರುವೆಹೆಂ। ಗೂಸುಗಳಧಿದೇವಿಕೇಳು॥

ಗುಣಾನ್ವಿತೆಯಾಗಿರುವಂತೆ, ಆಕೆಯು ಚೆಲುವೆಯೂ ಇದ್ದಳು. ವರ್ಣಿಸತಕ್ಕ ಆಕೆಯ ಎಲ್ಲ ಅಂಗಗಳನ್ನೂ ದಾಸರು ಸವಿಕಟ್ಟಾಗಿ ಹೊಗಳಿರುವರು,

ಮದನಾಗಮದ ಶ್ರೀಕಾರದಂತಿರ್ಪ । ಸುದತಿ ನಿನ್ನಯ ಶ್ರೋತ್ರಂಗಳಿಗೆ ॥
ಬಡನಡುವಿನ ಚನ್ನೆ ಭಾಮಿನಿಯರ ರನ್ನೆ । ಕೊಡಮೊಲೆ ವೆಣ್ಣೆ ಪೂಗಣ್ಣೆ ।
ಸಡಗರದಿಂದ ನಿನ್ನ ಕರ್ಣಕೆ ಕಡುರುಚಿ । ವಡಿಸುವೆ ಪೇಳಿ ಮೇಲ್ಗತೆಯ ॥

೨. ದಾಸರು, ತಮಗೂ ಆ ಹೆಂಗಸಿಗೂ ಇರುವ ಸಂಬಂಧವನ್ನೂ ಹೇಳಿರುವರು. ಅದು ಹೇಗೆಂದರೆ,

ನಾರೀನರನಾಂತ ಪೆದೆವಾಸಕೆ ಸಿಕ್ಕಿ । ತೋರಿಯ ಬಿಲ್ವಾಸದಂತೆ ।
ವಾರಿಜಗಂಧಿ ಕೇಳ್ ನಿನಗಾನೊಳಗಾಗಿ । ಸಾರಸತ್ಕೃತಿಯ ವಿಸ್ತರಿಪೆ ॥

ಇದಕ್ಕೂ ಒಂದು ಹೆಜ್ಜೆ ಮುಂದೆ ಸಾಗಿ, ದಾಸರು, ಸ್ಪಷ್ಟಗೊಳಿಸಿರುವು ದೇನೆಂದರೆ,

ಕಕ್ಕಸವೆತ್ತ ಕಾಮಿನಿಯರ ಕಂಡು ಕ । ಣ್ಣಿಕ್ಕದಂತೆನ್ನ ಚಿತ್ತವನು ।
ಅಕ್ಕೊತ್ತಿಗೊಂಡ ಭಾಮಿನಿ ರನ್ನೆ ಲಾಲಿಸು । ಸಕ್ಕರೆಯಂತ ಮಾತುಗಳ ॥

ಇಂತಹ ಸಂಬಂಧವುಳ್ಳವಳಿಗೆ ದಾಸರು ಸಂಬೋಧಿಸಿದುದು,

ಲೀಲೆಗಾತಿಯರ ಮಸ್ತಕದಲಿ ಮೆರೆವಪೂ । ಮಾಲೆ ಮದ್ವಲ್ಲಭೆ ಕೇಳು ।

ಆ ಹೆಣ್ಣುಮಗಳು ದಾಸರಿಗೆ ಸಂಬೋಧಿಸಿದುದು,

ವಾಣಿಯಧವನೆಂಬ ವ್ಯವಹಾರಿಪಟ್ಟಿಯ । ಗೋಣಿಯೊಳ್ತುಂಬಿದ ರತ್ನ ।
ಓಣಿಯೊಳ್ಚಲ್ಲಿದಂತಿದೆ ನಿನ್ನ ಕೃತಿಯೆಂಬ । ಮಾಣಿಕ ಮನ್ಮನೋನಾಥ ॥

ದಾಸರು ಆ ಹೆಂಗಸಿಗೆ "ಮದ್ವಲ್ಲಭೆ," ಎಂಬುದೂ, ಆಕೆಯು ದಾಸರಿಗೆ "ಮನ್ಮನೋನಾಥ" ಎಂದು ಸಂಬೋಧಿಸುವುದೂ ಅವರೀರ್ವರು ಗಂಡ ಹೆಂಡರಾಗಿದ್ದುದನ್ನು ಸ್ಪಷ್ಟಗೊಳಿಸುತ್ತವೆ. ಮತ್ತೊಂದೆಡೆಯಲ್ಲಿ ದಾಸರು ಆಕೆಗೆ "ಮಡದಿ," ಯೆಂದು ಕರೆದುದೂ ಉಂಟು.

ಬಡಲಾಂತು ಹರಿಯ ಕೀರ್ತನೆಗೆಯ್ಯದ ಜಿಹ್ವೆ । ಕಡಲ ನಾಲಗೆಯಾಗದಿಹುದೆ ।
ಮಡದಿ ಕೇಳದರಿಂದೆ ಕೃಷ್ಣ ಚರಿತ್ರವ । ತಡೆಯದೆ ನಿನಗೆ ವಿಸ್ತರಿಪೆ ॥

೩. ದಾಸರು ತಮ್ಮೀಪತ್ನಿಗೆ, "ರಹಿತ ಪ್ರಪಂಚಿ" ಎಂದು ಅಂದಿರುವರು. ಆಕೆಯು ಸಂಸಾರದಲ್ಲಿ ಆಸಕ್ತಿಯನ್ನು ತೊರೆದವಳಾಗಿರಬೇಕು; ಇಲ್ಲವೆ, ಪ್ರಪಂಚದ ವಿಸ್ತಾರವಿಲ್ಲದವಳು ( ಮಕ್ಕಳಿಲ್ಲದವಳು ) ಆಗಿರಬೇಕು; ಇಲ್ಲವೆ, ಅವೆರಡೂ ಪರಿಸ್ಥಿತಿಯುಳ್ಳವಳಿರಬೇಕು. ಈ ಸಾಧ್ವಿಯು ಗಂಡನೊಡನೆ ಕಾಗಿನೆಲ್ಲಿಯಲ್ಲಿ ಆದಿಕೇಶವನ ಗುಡಿಯೊಳಗೆ ನೆಲಿಸಿರಬಹುದು. ದಾಸರ ಒಂದು ಕೀರ್ತನೆಯಲ್ಲಿರುವುದು,

ನಮಗೆಲ್ಲಿ ಮನೆಗಳಯ್ಯ ನಾರಾಯಣ |
ಕಮಲ ಬ್ರಹ್ಮಾಂಡಕೋಟಿ ಒಡಲೊಳು ತಾಳಿದ ಇಂಥ ರಮಾಧವ |
ನಿಮಗೆ ನೀರೊಳು ವಾಸವಾಯಿತು ॥ ಪ ॥

ಇಂತಿಂಥವರ್ಗೆಲ್ಲ ಮನೆಯಿಲ್ಲದಿರಲು |
ಕಂತು ಜನಕ ನಿನ್ನನುನಯದಿಂದಲಿ ನಿ |
ಶ್ಚಿಂತ (ವಾಗಿಕಾಗಿ) ನೆಲೆಯಾದಿಕೇಶವ ನಿ |
ಶ್ಚಿಂತನಾಗಿ ನಿಮ್ಮ ಗುಡಿಯಲಿಪ್ಪವೆನು ॥

ಈ ಪ್ರಮಾಣಗಳನ್ನು ಹೇಳಿದರೂ ಎರಡು ಶಂಕೆಗಳು ಉಳಿಯುತ್ತವೆ (೧) ದಾಸರ ಮಡದಿಯು ಕಾವ್ಯಸೃಷ್ಟಿಯವಳು. (೨) ತಾವಿಟ್ಟುಕೊಂಡ ಸೂಳೆಯ ವಿಷಯದಲ್ಲಿ ಜನರು ತಮ್ಮನ್ನು ದೂರಿಕೊಳ್ಳಬಾರದೆಂದು, ದಾಸರು ಅವಳಿಗೆ ಮಡದಿಯೆಂದು ಸಂಬೋಧಿಸಿ, ತಮ್ಮ ವೈಗುಣ್ಯವನ್ನು ಈ ರೀತಿಯಾಗಿ ಬಚ್ಚಿಟ್ಟರು.

೧. ತಮ್ಮ ಹೆಂಡತಿಯನ್ನು ತೊರೆದಾಗಲಿ, ಇದ್ದ ಹೆಂಡತಿಯು ಮಡಿದಾಗಲಿ, ಇಲ್ಲವೆ, ಹೆಂಡತಿಯೆ ಮೂಲತಃ ಇಲ್ಲದಾಗಿಯಾಗಲಿ, ವೈರಾಗ್ಯಶಾಲಿಗಳಾದ ದಾಸರು, ಏಕಾಕಿಯಾಗಿದ್ದರೆ, ಕಾವ್ಯದಲ್ಲಿ ಆಕೆಯನ್ನು ಸೃಜಿಸಿ ಅವಳೊಡನೆ ಶೃಂಗಾರದ ಸರಸಮಾತುಗಳನ್ನಾಡುವ ಪ್ರಯೋಜನವಾವುದು? ದಾಸರು ತಮ್ಮ ಕಾವ್ಯವನ್ನು ಬೇರೆ ರೀತಿಯಿಂದ ಹೇಳಬಹುದಾಗಿತ್ತು. ದಾಸರು ಹಾಗು ಅವರ ಹೆಂಡತಿ ಇವರ ನಡುವಿನ ಪ್ರಶ್ನೋತ್ತರಗಳ ಭಾಗವು ಇಲ್ಲದಿದ್ದರೆ, ಕಾವ್ಯಕ್ಕೆ ನ್ಯೂನತೆ ಬರುವಂತಿರುವದಿಲ್ಲ.

(೨) ಕನಕದಾಸರು ಸೂಳೆಯನ್ನಿಟುಕೊಂಡದ್ದೇ ನಿಜವಾಗಿದ್ದರೆ, ಸುಮ್ಮನೆ ಕೊಡ್ರಬಹುದಾಗಿತ್ತು. ಒಂದೆರಡು ಸ್ಥಳಗಳಲ್ಲಿ ಪರಿಚಿತವಾದ

ತಮ್ಮ ಕೊರತೆಯನ್ನು ಕಾವ್ಯದಲ್ಲಿ ಬರೆದು ನಾಡೆಲ್ಲ ಹರಡಿ ಆಡಿಕೊಳ್ಳುವಂತೆ ನಗೆಗೀಡಾಗುತ್ತಿರಲಿಲ್ಲ !

ಕಲಿಯುಗದ ಮಹಿಮೆಯನು ಕಂಡಷ್ಟುಪೇಳುವೆನು || ಪ ||
ಕಮಲನಾಭನಕೃಪೆಯ ಪಡೆದವರು ಕೇಳಿ || ಅ ||
ವೇಳೆ ವೇಳೆಗೆ ಬರುವ ಹೆಂಡತಿಗೆ ಲೆಕ್ಕಿಸದೆ ।
ಸೂಳೆಯನು ಮೆಚ್ಚಿ ಕಾಲವ ಕಳೆವರಯ್ಯಾ ॥

ಕಲಿಯುಗದ ಮಹಿಮೆಯಲ್ಲಿ ಬೆದೆಗಾರಿಕೆಯನ್ನು ಹಾಕಿ ಹಳಿದ ಮಹಾನುಭಾವರಾದ ಕನಕದಾಸರು ಪರೋಪದೇಶದಲ್ಲಿ ಪಾಂಡಿತ್ಯವನ್ನು ತೋರಿಸಿರುವುದುಂಟೇ ? ಆಧ್ಯಾತ್ಮಿಕ ಉನ್ನತಿಯನ್ನು ಪಡೆದ ದಾಸರು ಸೂಳೆಗೆ ಮನಸೋತು ಅವಳೊಡನೆ ಒಗೆತನಗೈದರೆಂಬುದು, ಕಟ್ಟು, ಕತೆ; ನೀಲಿ ಕೆಟ್ಟ ಮಾತು !

---

## ೧೦ ಮೋಹನತರಂಗಿಣಿಯನ್ನು ರಚಿಸಿದ ಸ್ಥಳ.

ಕನಕದಾಸರು ತಮ್ಮ ಮೊದಲಿನ ಕಾವ್ಯವಾದ ಮೋಹನತರಂಗಿಣಿಯನ್ನು ಎಲ್ಲಿ ಬರೆದರೆಂಬುದನ್ನು ತಿಳಿದುಕೊಳ್ಳುವುದು ಕುತೂಹಲದ ವಿಷಯ. ದಾಸರ ಕೃತಿಗಳೊಳಗಿನ ಒಂದು ವೈಶಿಷ್ಟ್ಯವೆಂದರೆ, ಅವರು ರಚಿಸಿದ ಕಾವ್ಯ ಇಲ್ಲವೆ ಪದದಲ್ಲಿ ಅದನ್ನು ಬರೆದ ಸ್ಥಳದ ಇಲ್ಲವೆ ಆ ಸ್ಥಳದ ದೇವರ ನಾಮನಿರ್ದೇಶ ಮಾಡುವುದು. ಕೆಲವೆಡೆಯಲ್ಲಿ ಸ್ಥಳ ಹಾಗೂ ದೈವತಗಳನ್ನು ಹೇಳಿದುದೂ ಉಂಟು. ಹಾಗಾದರೆ ತರಂಗಿಣಿಯನ್ನು ರಚಿಸಿದ ಸ್ಥಳವಾವುದು? ಗ್ರಂಥಾವತಾರದಲ್ಲಿ ದಾಸರನ್ನುವುದು,

ಶ್ರೀಗಿರಿಜೇಶ್ವರನಾತ್ಮಾಭಿರಾಮ ಸ । ದ್ವಾಗೀಶಪಿತಪರಂಧಾಮ ।
ಕಾಗಿನೆಲೆಯರಂಗ ಸುರಸಾರ್ವಭೌಮ ಸು । ತ್ಯಾಗಿ ಪಾಲಿಸೊ ಪೂರ್ಣಕಾಮ॥

ಇಲ್ಲಿ ದಾಸರು ಸ್ಥಳದ ನಿರ್ದೇಶ ಮಾಡಿ ಆದಿಕೇಶವನ ಹೆಸರನ್ನು ಬಿಟ್ಟು ರಂಗನ ಹೆಸರನ್ನು ಹೇಳಿರುವರು. ರಂಗ ಹಾಗೂ ಆದಿಕೇಶವ ನಾಮಗಳು

ವಿಷ್ಣುವಿನವೇ; ಆ ಮಾತು ಬೇರೆ. ಸ್ಥಲನಾಮಗಳು ಬೇರೆ ಬೇರೆಯಾದಲ್ಲಿ ಸ್ಥಳದ ನಿರ್ದೇಶದಿಂದಲೆ ಆ ಸ್ಥಾನವನ್ನು ಗೊತ್ತುಪಡಿಸಬಹುದು! ತರಂಗಿಣಿಯ ಕೊನೆಯಲ್ಲಿ ದಾಸರು ಬರೆದುದು,

ಯೋಗಿಹೃತ್ಕಮಲಾಸನ ದೈತ್ಯಕಾಮಾರಿ । ರಾಗಿಪಭೋಗದೇವೇಂದ್ರ ।
ಕಾಗಿನೆಲೆಯ ನರಸಿಂಹಾದಿಕೇಶವ । ನಾಗಿಪ ಜನಮನೋರಥವ ॥

ಇಲ್ಲಿ ದಾಸರು ಕಾಗಿನೆಲೆಯನ್ನೂ ಅಲ್ಲಿಯ ಆದಿಕೇಶವನನ್ನೂ ನಿರ್ದೇಶಿಸಿರುವರು. ಆದರೆ, ಆದಿಕೇಶವನ ಹೆಸರು ನರಸಿಂಹದೇವರ ನಾಮದೊಂದಿಗೆ ಸಮಾಸರೂಪದಲ್ಲಿ ಉಪಯೋಗಿಸಲಾಗಿದೆ. ನರಸಿಂಹನ ಹೆಸರನ್ನು ಆದಿಕೇಶವನ ಮೊದಲಿಡುವುದರಲ್ಲಿ ಏನಾದರೂ ಪ್ರಯೋಜನವಿರುವುದೋ? ಅಥವಾ ದಾಸರು ತಿಳಿಯದೆ ಒಂದೇ ದೇವರ ಎರಡು ಹೆಸರುಗಳನ್ನು ಹಾಕಿ ಪ್ರಯಾಸಬಟ್ಟು ಶ್ಲೋಕವನ್ನು ಪೂರ್ತಿಗೊಳಿಸಿರುವರೋ? ಆ ಸಮಾಸದ ಅರ್ಥವಾದರೊ, "ನರಸಿಂಹನೇ ಆಗಿರುವಂತಹ ಕಾಗಿನೆಲೆಯ ಆದಿಕೇಶವನು" ಎಂದಾಗುತ್ತದೆ. ಕಾಗಿನೆಲೆಯ ಆದಿಕೇಶವನಿಗೂ ನರಸಿಂಹನಿಗೂ ಸಂಬಂಧವೇನು? ಈ ವಿಷಯವನ್ನು ತಿಳಿದುಕೊಳ್ಳಬೇಕಾದರೆ, ಕಾಗಿನೆಲ್ಲಿಗೆ ಹೋಗಿ ಅಲ್ಲಿಯ ಆದಿಕೇಶವನ ಗುಡಿ ಹಾಗೂ ಅಲ್ಲಿಯ ದೇವಸ್ಥಾನದ ಸಂಪ್ರದಾಯಗಳನ್ನು ವಿಚಾರಿಸಬೇಕಾಗುತ್ತದೆ. ಆದಿಕೇಶವನ ಗುಡಿಯ ಜೊತೆಯಲ್ಲಿಯೆ ಬಲಬದಿಗೆ ನರಸಿಂಹನ ದೇವಾಲಯುವಿದೆ. ಕಾಗಿನೆಲ್ಲಿಯಲ್ಲಿ ನರಸಿಂಹನ ದರ್ಶನ ತೆಗೆದುಕೊಂಡು, ಆದಿಕೇಶವನ ದರ್ಶನಕ್ಕೆ ಹೋಗುವ ವಾಡಿಕೆಯುಂಟು. ನೈವೇದ್ಯ ಮೊದಲಾದ ವಿಷಯಗಳಲ್ಲಿ ನರಸಿಂಹನಿಗೇ ಅಗ್ರಸ್ಥಾನ. ಕಾಗಿನೆಲ್ಲಿಯ ಆದಿಕೇಶವನ ದೇವಸ್ಥಾನಕ್ಕೆ "ಶ್ರೀಲಕ್ಷ್ಮೀನರಸಿಂಹಾದಿಕೇಶವ ದೇವಸ್ಥಾನ" ವೆಂದು ಇನಾಮಿನ ಭೂಮಿಗಳಿರುತ್ತವೆ. ದೇವಸ್ಥಾನದ ಮಹಾದ್ವಾರಕ್ಕೆ ಎದುರಾಗಿ ಶ್ರೀಲಕ್ಷ್ಮೀನರಸಿಂಹನ ಗುಡಿಯಿದೆ. ಆದಿಕೇಶವನ ದೇವಾಲಯವು ಮಹಾದ್ವಾರದ ಎದುರಿನಲ್ಲಿಲ್ಲ. ಇದರಿಂದ ತಿಳಿಯುವುದೇನಂದರೆ, ನರಸಿಂಹನು ಆದಿಕೇಶವನಿಗಿಂತ ಹಳೆಯವನು. ಆದುದರಿಂದ ದಾಸರು ಈ ತಾರತಮ್ಯವನ್ನು ತಿಳಿದು, "ಕಾಗಿನೆಲೆಯ ನರಸಿಂಹಾದಿಕೇಶವ" ನೆಂದು ಬರೆದಿರುವರು.

ನರಸಿಂಹನ ವರದಿಂದ ತಾವು ಮೋಹನತರಂಗಿಣಿಯನ್ನು ಬರೆದೆವೆಂದು ದಾಸರು ಹೇಳಿರುವರು. ದಾಸರ ಮಡದಿಯ ಮಾತು,

ಪಠಿಸಿದ ಕೃತಿಯಲ್ಲ ಕೃತಿವೇಳಲಮೃತದ । ಘುಟಿಕೆಯಂತಿದೆ ನಿನ್ನ ಕವಿತೆ ।
ಘಟಿಸಿತು ನರಕಂಠೀರವನ ಕರುಣದಿ । ತುಟಿಬಿಚ್ಚಿ ಪೇಳು ಮೇಲ್ಗತೆಯ ॥

ಪ್ರಾಸಿಂದೆನಿಖಿಳ ಚಿತ್ರಾರ್ಥಗರ್ಭಿತಭಾವ । ಲೇಸೆನೆ ಹರಿಕೊಟ್ಟ ವರದಿ ।
ತ್ರಾಸಿಂದೆ ತೂಗಿದ ಮಣಿಯೆನೆ ಮಜ್ಜೀವಿ । ತೇಶ ವಿಸ್ತರಿಸು ಮೇಲ್ಗತೆಯ ॥

ದಾಸರೇ ಒಂದೆಡೆಯಲ್ಲಂದುದು,

ರಸಪೂರಿತ ಸುಪ್ರಬಂಧವಿಲಕ್ಷಣ । ವೆಸೆವಂತೆ ಪೇಳ್ದ ಪೆನಿದನು ।
ಹಸನಾದುದೆಂದು ಯೋಗ್ಯರು ತಲೆದೂಗಲು । ಉಸಿರುವೆ ಹರಿಕೃಪೆಯಿಂದ ॥

ಮೇಲಣ ಎರಡೂ ಶ್ಲೋಕಗಳಲ್ಲಿ ಹೇಳಿದ 'ಹರಿ' ಶಬ್ದದಲ್ಲಿ 'ನರಹರಿ' ಎಂಬ ಅರ್ಥವಿರುವುದೆಂದು ತಿಳಿಯಬೇಕು.

ಮತ್ತೊಂದೆಡೆಯಲ್ಲಿ, ದಾಸರು ಅನ್ನುವುದೇನಂದರೆ,

ಕೃತಿವೇಳ್ದ ಕನಕದಾಸೋತ್ತಮ ಕೇಳ್ದವ । ಳತಿಸುಜ್ಞಾನ ವಧೂಟಿ ।
ಕೃತಿಗೆ ಕರ್ತನು ಕಾಗಿನೆಲೆಯಾದಿಕೇಶವ । ಕೃತಿಕೇಳ್ದರೆ ಪುಣ್ಯವಹುದು ॥

ಕಾಗಿನೆಲೆಯ ಆದಿಕೇಶವನು ಮೋಹನತರಂಗಿಣಿಯನ್ನು ಬರೆಯಲು ಪ್ರೇರಿಸಿದನೆಂದು ದಾಸರು ಮುಕ್ತಕಂಠವಾಗಿ ಹೇಳಿರುವರು.

ನರಸಿಂಹನ ವರ, ಹಾಗೂ ಆದಿಕೇಶವನ ಪ್ರೇರಣೆ, ಇವುಗಳಿಂದ ತಿಳಿಯುವುದೇನಂದರೆ, ನರಸಿಂಹನ ಅಧ್ಯಕ್ಷತೆಯಲ್ಲಿ ಕಾವ್ಯಶಾಸ್ತ್ರಗಳ ವ್ಯಾಸಂಗಮಾಡಿ, ಪ್ರತಿಭಾಶಾಲಿಗಳಾದ ದಾಸರು ಕಾವ್ಯವಾಣಿಯನ್ನು ಸಂಪಾದಿಸಿದರು. ಆದುದರಿಂದಲೆ, ಅವರು ಆ ವಾಣಿಯಿಂದ ಮೊದಲು "ನರಸಿಂಹಸ್ತವ" ವನ್ನು ಉಸಿರಿದರು! ಆ ಮೇಲೆ, ಆದಿಕೇಶವನ ಪ್ರೇರಣೆಯಿಂದ ಮೋಹನತರಂಗಿಣಿಯನ್ನು ರಚಿಸಿದರು! ತರಂಗಿಣಿಯು ಕಾಗಿನೆಲೆಯಲ್ಲಿಯೆ ರಚಿತವಾಯಿತೆಂಬುದು ಸೂರ್ಯನ ಪ್ರಕಾಶದಷ್ಟು ಸ್ಪಷ್ಟವಿದೆ.

---

# ೧೧. ರುಕ್ಮಿಣೀಶವಿಜಯ ಮತ್ತು ಮೋಹನತರಂಗಿಣಿ

" ಶ್ರೀವಾದಿರಾಜಸ್ವಾಮಿಗಳವರು ಕನಕದಾಸರ ಗುರುಗಳು; ಅವರು ರುಕ್ಮಿಣೀಶವಿಜಯವೆಂಬ ಸಂಸ್ಕೃತ ಕಾವ್ಯವನ್ನು ರಚಿಸಿದರು " ಎಂದು ಹೇಳಲಾಯಿತು. ರುಕ್ಮೀಣೀಶವಿಜಯಕ್ಕೂ, ಮೋಹನತರಂಗಿಣಿಗೂ ಏನಾದರೂ ಸಂಬಂಧವಿರುವುದೋ, ಇಲ್ಲವೋ ಎಂದು ಕುತೂಹಲವುಂಟಾಗುವುದು ಸ್ವಾಭಾವಿಕ. (೧) ರಾಜರ ಆ ಕಾವ್ಯದಲ್ಲಿ, ಶ್ರೀಕೃಷ್ಣನ ಜನ್ಮದಿಂದ, ರುಕ್ಮಿಣಿಯೊಡನೆ ಅವನ ಮದುವೆಯ ವರೆಗಿರುವ ಕತೆಯನ್ನು ನಿರೂಪಿಸಲಾಗಿದೆ. ಆದುದರಿಂದಲೆ, ಆ ಕಾವ್ಯಕ್ಕೆ " ರುಕ್ಮಿಣೀಶವಿಜಯ, " ಎಂಬ ಹೆಸರು. (೨) ರುಕ್ಮಿಣೀಶವಿಜಯವು ಪಾಂಡಿತ್ಯಪ್ರಚುರವಾದ ಕಾವ್ಯವು. ಅದರಲ್ಲಿ ಶಬ್ದಾಲಂಕಾರಗಳೂ ಅರ್ಥಾಲಂಕಾರಗಳೂ ತುಂಬಿಕೊಂಡಿವೆ. ಅದರೊಳಗಣ ವರ್ಣನೆಗಳು ಕವಿಸಮಯಕ್ಕೆ ಒಳಪಟ್ಟಿವೆ. ರುಕ್ಮೀಣೀಶವಿಜಯವು ಪಂಡಿತರಿಗಾಗಿ ಬರೆದ ಕಾವ್ಯ. (೩) ರಾಜರು ಸನ್ಯಾಸಿಗಳು. ಅವರ ಕಾವ್ಯದಲ್ಲಿ ಭಕ್ತಿರಸಕ್ಕಷ್ಟೇ ಮಹತ್ವದ ಸ್ಥಾನ. ಶೃಂಗಾರಾದಿ ರಸಗಳಿಲ್ಲವೆಂತಲ್ಲ. ಉಳಿದ ರಸಗಳು ಆ ಕಾವ್ಯದಲ್ಲಿ ಆನುಷಂಗಿಕವಾಗಿ ನೆಲಿಸಿಕೊಂಡಿವೆ.

ಕನಕದಾಸರಿಗೆ ರುಕ್ಮಿಣೀಶವಿಜಯವು ಪರಿಚಿತವಿರಲಿಕ್ಕೆ ಬೇಕು. ಅದರ ಪ್ರತ್ಯಕ್ಷ ಪ್ರಮಾಣಗಳನ್ನು ದಾಸರ ಕಾವ್ಯಗಳಲ್ಲಿ ತೋರಿಸಲಿಕ್ಕಾಗದು. ದಾಸರು ಅನುವಾದಕರಲ್ಲ. ಪುರಾಣಕಾವ್ಯಗಳನ್ನು ಪರಿಶೀಲಿಸಿ, ಮನನೆ ಮಾಡಿ, ಆ ಮೇಲೆ ಸ್ಫೂರ್ತಿಗೊಂಡ ನುಡಿಯಿಂದ ದಾಸರು ತಮ್ಮ ಕಾವ್ಯವನ್ನು ಉಸಿರಿದರು. ಈ ವಿಷಯದಲ್ಲಿ ದಾಸರೆ ನುಡಿದುದು,

> ನೆನೆಯಲಾತ್ಮನೊಳುದಿಸಿದ ಮಾತ ನಾಲಗೆ । ಗೊನೆಯಲ್ಲಿ ವಿಸ್ತರಗೆಯ್ದು ।
> ಇನಿಯಳೆ ಕೇಳ್ ನಿನ್ನ ಕರ್ಣರಸಾಯನ । ವೆನಲುಸಿರುವೆನೀಕೃತಿಯ ॥

ರುಕ್ಮಿಣೀಶವಿಜಯಕ್ಕೂ ಮೋಹನತರಂಗಿಣಿಗೂ ಬೇರೊಂದು ಬಗೆಯಲ್ಲಿ ಸಂಬಂಧವಿರುವುದನ್ನು ತೋರಿಸಬಹುದು. (೧) ಮೋಹನತರಂಗಿಣಿಯೊಳಗಿನ ಕೃಷ್ಣಚರಿತ್ರೆಯು ಕೃಷ್ಣ-ರುಕ್ಮಿಣಿಯರ ವಿವಾಹೋತ್ತರದ ಬಗೆತನದಿಂದ ಪ್ರಾರಂಭವಾಗಿ ಉಷಾನಿರುದ್ಧರ ಮದುವೆಯಿಂದ ಕೊನೆಗಾಣುತ್ತದೆ. (೨) ತರಂಗಿಣಿಯು ಪಂಡಿತರಿಗೂ ಪಾಮರರಿಗೂ ತಿಳಿಯತಕ್ಕಂತಹ ಕನ್ನಡ

ಕಾವ್ಯವು. ಅದರಲ್ಲಿ ಕೇವಲ ಪಂಡಿತರಿಗಷ್ಟೇ ಗಮ್ಯವಾಗುವ ಅಲಂಕಾರಗಳಿಲ್ಲ. ತರಂಗಿಣಿಯು ಪ್ರಾಡುಗಬ್ಬು; ಅದು ನಾಲಗೆಗೆ ಸುಲಭವಾಗುವಂತೆ, ಹೆಣ್ಣು ಮಕ್ಕಳಲ್ಲಿಯೂ ರೂಢವಾಗಿರುವ ಸಾಂಗತ್ಯದ ಮಟ್ಟಿನಲ್ಲಿದೆ. ಅದರೊಳಗಿನ ನುಡಿಯು ಆ ಕಾಲದ ಜನಪದ ಭಾಷೆ. (೩) ಮೋಹನತರಂಗಿಣಿಯ ರಚನೆಯ ಸಮಯದಲ್ಲಿ ದಾಸರು ಗೃಹಸ್ಥಾಶ್ರಮಿಗಳಾಗಿದ್ದರು. ಶೃಂಗಾರಾದಿ ನವರಸಗಳನ್ನು ವಿಸ್ತರಿಸಲು ಅಧಿಕಾರವುಳ್ಳವರು. ಆದುದರಿಂದ ತರಂಗಿಣಿ ಯಲ್ಲಿ ಶೃಂಗಾರವೀರಾದಿರಸಗಳಿಗೆಲ್ಲ ಸಂಪೂರ್ಣ ಅವಸರವು ದೊರೆತಿದೆ. ಕೆಲವೆಡೆಯಲ್ಲಿ ಶೃಂಗಾರ ರಸದ ಅತಿರೇಕವಾಗಿರುವುದೆಂದು ಹೇಳಬಹುದು!

ಈ ಮೂರೂ ವ್ಯತ್ಯಾಸಗಳನ್ನು ಮನಗೊಂಡರೆ, ರುಕ್ಮಿಣೀಶವಿಜಯ ಮೋಹನತರಂಗಿಣಿಗಳು ಒಂದಕ್ಕೊಂದು ಪರಿಪೋಷಕವಾಗಿರುವುವೆಂಬುದು ಕಂಡುಬರುವದುಂಟು. ಒಂದರೊಳಗಿರುವ ಕೊರತೆಯನ್ನು ಮತ್ತೊಂದು ತುಂಬಿ ತೆಗೆಯುತ್ತದೆ.

ಈ ಕಾವ್ಯಗಳಲ್ಲಿ, ಮೊದಲಿನದು ಯಾವುದೆಂಬುದು ಮತ್ತೊಂದು ಪ್ರಶ್ನೆ. ರುಕ್ಮಿಣೀಶವಿಜಯದಿಂದ ಪ್ರಾರಂಭವಾದ ಕೃಷ್ಣಚರಿತ್ರೆಯು ಮೋಹನ ತರಂಗಿಣಿಯಿಂದ ಕೊನೆಗಾಣುತ್ತದೆ. ರುಕ್ಮಿಣೀಶವಿಜಯದಲ್ಲಿ ಕೊನೆಗಂಡ ಕತೆಯ ಎಳೆಯು ಮೋಹನತರಂಗಿಣಿಯಲ್ಲಿ ಮೊದಲು ಬರುತ್ತದೆ. ವಾದಿ ರಾಜರು ದಾಸರ ಗುರುಗಳು. ವಯಸ್ಸಿನಲ್ಲಿಯೂ ಕನಕದಾಸರಿಗಿಂತ ಹಿರಿ ಯರು. ಆದುದರಿಂದ, ತಾವು ಪ್ರಾರಂಭಿಸಿದ ಕಾವ್ಯಮಯ ಕೃಷ್ಣಚರಿತ್ರೆ ಯನ್ನು ಸಂಸ್ಕೃತದಲ್ಲಿ ಬರೆದು, ಅದರ ಉತ್ತರಾರ್ಧವನ್ನು ಕನ್ನಡದಲ್ಲಿ ಬರೆಯಲು, ರಾಜರೆ ಕನಕದಾಸರಿಗೆ ಸೂಚಿಸಿರಬಹುದು. ಇಲ್ಲವೆ, ಅರ್ಧಕ್ಕೆ ನಿಂತ ರಾಜರ ಕೃಷ್ಣಚರಿತ್ರೆಯನ್ನು ಪೂರ್ತಿಗೊಳಿಸಬೇಕೆಂದು ದಾಸರೇ ಟೊಂಕ ಕಟ್ಟಿರಬಹುದು. ಕನಕದಾಸರು ಕೃಷ್ಣಚರಿತ್ರೆಯ ಉತ್ತರಾರ್ಧವನ್ನು ಕನ್ನಡದಲ್ಲಿ ಬರೆದ ಮೇಲೆ, ವಾದಿರಾಜರು, ಆ ಕತೆಯ ಪೂರ್ವಾರ್ಧವನ್ನು ಅದಕ್ಕೆ ಜೋಡಿಸಿದರೆಂಬ ವಿಚಾರಸರಣಿಯು ಯೋಗ್ಯವಾದುದಲ್ಲ. ಅಂತಹ ವಿಚಾರವೆಂದರೆ, ಬಸವನ ಮುಂದೆ ಬಂಡಿಯನ್ನು ಹೂಡುವ ಹಂಚಿಕೆ! ಆದುದರಿಂದ, ಗುರುಗಳು ಹಿಡಿದ ಕಾರ್ಯವನ್ನು ಶಿಷ್ಯರಾದ ಕನಕದಾಸರು ಕೊನೆಗಣಿಸಿದರೆಂದೆನ್ನುವುದೇ ಸಯುಕ್ತಿಕ.

---

# ೧೨. ತರಂಗಿಣಿ ಹಾಗೂ ಭರತೇಶವೈಭವ.

ರತ್ನಾಕರವರ್ಣಿಯು ಭರತೇಶವೈಭವವನ್ನು ೧೬ನೆಯ ಶತಮಾನದ ಮಧ್ಯದಲ್ಲಿ ಬರೆದನು. ಕನಕದಾಸರತ್ನಾಕರರು ಸಮಕಾಲೀನರು. ಎರಡೂ ಕಾವ್ಯಗಳು ಸಾಂಗತ್ಯದಲ್ಲಿವೆ. ಎರಡೂ ಮಹಾಕಾವ್ಯಗಳು. ಆದರೆ ರತ್ನಾಕರನು ಲಾಕ್ಷಣಿಕರನ್ನು ಲೆಕ್ಕಿಸದೆ, ಮಹಾಕಾವ್ಯದ ಎಲ್ಲ ಅಂಗಗಳು ತನ್ನ ಕಾವ್ಯದಲ್ಲಿ ಅಡಕವಾದರೆ, ಅದು ಬದನೇಕಾಯಿಯಾಗಬಹುದೆಂದು ಬಗೆದು, ವೃಂತಾಕಪಾಕಕ್ಕೆ ಬೆದರಿ, ದ್ರಾಕ್ಷಾಪಾಕವನ್ನು ನಿರ್ಮಿಸಿದನು. ಎದೆಗಾರರಾದ ದಾಸರು ಈ ವಿಚಾರವಿಲ್ಲದೆ ಹದಿನೆಂಟೂ ಲಕ್ಷಣಗಳೊಂದಿಗೆ ತರಂಗಿಣಿಯನ್ನು ರಚಿಸಿರುವರು. ರತ್ನಾಕರನು ಆಸ್ಥಾನಕವಿ, ನಾಗರಿಕಕವಿ. ಕನಕದಾಸರು ಜನಸಾಮಾನ್ಯರಕವಿ. ಭರತೇಶವೈಭವದಲ್ಲಿ ಕೆಲವೊಂದೇ ಪಾತ್ರಗಳನ್ನು, ಕೆಲವೊಂದೇ ಸನ್ನಿವೇಶಗಳನ್ನು, ಸಾದ್ಯಂತವಾಗಿ, ಕುಸುರುಕುಸುರಾಗಿ ವರ್ಣಿಸಿದುದುಂಟು. ತರಂಗಿಣಿಯ ಧ್ಯೇಯವು ಬೇರೆ. ಆದರಲ್ಲಿ ಎಲ್ಲ ವಿಷಯಗಳ ಸಮಾವೇಶವಾದುದು ಕಂಡುಬರುವದು. ತರಂಗಿಣಿಯು ದಾಸರ ಕಾಲದ ಕರ್ನಾಟಕದ ಕೈಪಿಡಿ. ಚಿತ್ರರೂಪವಾಗಿ ಎರಡೂ ಕಾವ್ಯಗಳನ್ನು ತುಲನೆ ಮಾಡಿ ಹೇಳುವುದಾದರೆ, ಹೀಗೆನ್ನಬಹುದು—ಭರತೇಶ ವೈಭವವು ಒಂದು ಅಂದವಾದ ಚಿತ್ರಪಟ. ಆದರಲ್ಲಿ ಭರತೇಶ, ಅವನ ಕೆಲ ರಾಣಿಯರು, ಅವನ ಕೆಲ ಸಂಗಡಿಗರು, ರಾಜಭವನ ರಾಜಾಸ್ಥಾನ ಮೊದಲಾದ ಕೆಲವು ರೂಹುಗಳನ್ನು ರತ್ನಾಕರನು ಒಳ್ಳೆ ಕೈವಾಡದಿಂದ ತಿಳುವಾದ ಬಣ್ಣದಿಂದ ಕೂಲಂಕಷವಾಗಿ ಕುಸುರು ಕುಸುರಾಗಿ ಬಣ್ಣಿಸಿರುವನು. ಅವುಗಳನ್ನುಳಿದರೆ, ಬೇರೆ ವಿಷಯಗಳು ಬಿಡಿ ಬಿಡಿಯಾಗಿ ಮಸಕುಮಸಕಾಗಿ ಎದ್ದು ಕಾಣುವಂತಿಲ್ಲ. ತರಂಗಿಣಿಯು ಒಂದು ಬಣ್ಣದ ಪರದೆ. ಪರದೆಯ ತುಂಬೆಲ್ಲ ದಟ್ಟವಾದ ಎದ್ದು ಕಾಣುವ ಬಣ್ಣದಿಂದ, ರಾಜರು, ರಾಜ್ಞಿಯರು, ಮಂತ್ರಿಗಳು, ಮಂಡಳಿಕರು, ರಾಜಾಸ್ಥಾನಗಳು, ಪಟ್ಟಣಗಳು, ಕೋಟೆಗಳು, ಕೊತ್ತಳಗಳು, ಅಗಳಗಳು ಅಳ್ವೇರಿಗಳು, ಉದ್ಯಾನಗಳು, ವನಗಳು, ಶಾಲಿಮಡಿಗಳು, ಬೆಳ್ಗಬ್ಬುಗಳು, ಕೆರೆಗಳು, ತೊರೆಗಳು, ಪರಿಗಾಲುವೆಗಳು, ಹೊಳೆಗಳು, ಪರ್ವತಗಳು, ವಿನೋದಗಳು, ಕದನಗಳು, ವಿವಿಧ ಸಮಾರಂಭಗಳು, ಇವೇ ಮುಂತಾದ ಚಿತ್ರಗಳನ್ನು

ಇರಿವೆಗೂ ಹೆಜ್ಜೆಯಿಡಲಿಕ್ಕೆ ಬಾರದಂತೆ ಬರೆದುದುಂಟು. ರತ್ನಾಕರನು ಪಂಜರದೊಳಗಿರಿಸಿದ ಅರಗಿಳಿ. ಕನಕದಾಸರು ಕಾಡೊಳಗಿನ ಕನ್ನಡವಕ್ಕಿ. ರತ್ನಾಕರನು ಇಂಪಾದ ಶಬ್ದಗಳನ್ನು ಜಾಗರೂಕತೆಯಿಂದ ಆಯ್ದು ತೆಗೆದು, ಪದ್ಯಗಳನ್ನು ರಚಿಸುವನು. ದಾಸರು ಅವಲಂಬಿಸಿದುದು ಕೇವಲ ಅಂತಃಸ್ಫೂರ್ತಿ. ರತ್ನಾಕರನ ಕಾವ್ಯಲಹರಿಯು, ಅಂದವಾಗಿ ನಿರ್ಮಿಸಿದ ಕಲ್ಗಟ್ಟೆನಲ್ಲಿ, ನಿರ್ದಿಷ್ಟವಾದ ದಾರಿಯಿಂದ, ಕೆಲವೆಡೆಯಲ್ಲಿ ರಾಜಭವನದಲ್ಲಿ, ಕೆಲವೆಡೆಯಲ್ಲಿ ಉದ್ಯಾನದಲ್ಲಿ, ಕೆಲವೆಡೆಯಲ್ಲಿ ಸೋಪಾನದೊಂದಿಗೆ, ಕೆಲವೆಡೆಯಲ್ಲಿ ಜಲಕ್ರೀಡೆಯ ಕೊಂಡಗಳೊಂದಿಗೆ, ತುಂಬಿತುಳುಕಿ, ಗಂಭೀರವಾಗಿ, ನೇರವಾಗಿ, ಶಾಂತವಾಗಿ, ಹರಿಯುವುದು. ಕನಕದಾಸರ ವಾಗ್ಝರಿಯು, ಕೆಲವೆಡೆಯಲ್ಲಿ ಕಾಲ ಹೊಳೆಯಾಗಿ ತಿಳಿಯಾಗಿ, ಮಡುಗಟ್ಟಿ ಸುಳಿನಾಭಿಯಾಗಿ, ನೇರವಾಗಿ, ಕೊಂಕುಕೊಂಕಾಗಿ, ದಾರಿಯೊಳಗಿನ ಕಲ್ಲುಗಳನ್ನು ದುಮ್ಮಿಕ್ಕಿ ಅಬ್ಬರಿಸಿ, ತೆಗ್ಗಿನಲ್ಲಿ ಚಿಗಿದು ಜಲಪಾತವಾಗಿ, ಕೆಲವೆಡೆಯಲ್ಲಿ ಕಾನನದ ತರುಗುಲ್ಮಗಳೊಂದಿಗೆ, ಕೆಲವೆಡೆಯಲ್ಲಿ ಪಟ್ಟಣಪಳ್ಳಿಗಳೊಳಗೆ ಸ್ವಚ್ಛಂದವಾಗಿ ನಿಸರ್ಗಸುಂದರವಾಗಿ ಹರಿಯುವುದು. ಭರತೇಶವೈಭವವು ಮಾಗಿದ ಮಾವಿನ ಗೊಂಚಲು; ಮೋಹನತರಂಗಿಣಿಯು ಪೊಂಬಾಳೆಯ ಗೊನೆ. ಮಾವಿನ ರುಚಿ ಮಾವಿಗೆ! ಬಾಳೆಯ ರುಚಿ ಬಾಳೆಗೆ! ಎರಡೂ ಮಾದರಿಯ ಫಲಗಳು !!

---

ಗಳೇ ಮೊದಲಾದವುಗಳು ಪಂಡಿತರನ್ನೂ ತಲೆದೂಗಿಸುವಂತಹವಿರುವುವು. ದಾಸರ ಕವಿತ್ವವನ್ನು ಸ್ವಲ್ಪದರಲ್ಲಿಯೆ ಮನಗಾಣಿಸಿಕೊಳ್ಳಬೇಕಾದರೆ, ಅವರ ನಳಚರಿತ್ರೆಯನ್ನೋದಬೇಕು. ನಳಚರಿತ್ರೆಯು ದಾಸರ ಪರಿಪಕ್ವ ಕಾವ್ಯ. ಮಾದರಿಯ ಚಿಕ್ಕ ಕತೆ.

ಮತ್ತೊಂದು ದೃಷ್ಟಿಯಿಂದ ನೋಡಿದರೆ, ನಳಚರಿತ್ರೆಯು ಮೋಹನ ತರಂಗಿಣಿಯ ಪುನರಾವೃತ್ತಿಯೆಂದು ಹೇಳಬಹುದು. ಮೇಲಾಗಿ, ತರಂಗಿಣಿ ಯಲ್ಲಿ ಹೆಜ್ಜೆಜ್ಜೆಗೆ ಕಂಡುಬರುವ ದಾಸರ ಉಕ್ಕುವ ಉತ್ಸಾಹವು, ನಳಚರಿತ್ರೆ ಯಲ್ಲಿ ಬೆಚ್ಚಗಾದುದು ಕಂಡು ಬರುತ್ತದೆ. ಅದಕ್ಕೆ ದಾಸರ ಪರಿಣತ ವಯಸ್ಸು ಮುಂತಾದವುಗಳು ಕಾರಣವಾಗಿರಬಹುದು. ಸುತ್ತಲಿರುವ ಸಮಾಜ ಹಾಗೂ ಸೃಷ್ಟಿಗಳೊಡನೆ ಬೆರೆತು, ಅವುಗಳನ್ನು ಮೋಹನತರಂಗಿಣಿಯಲ್ಲಿ ನಿರ್ವ್ಯಾಜ ವಾಗಿ ವರ್ಣಿಸಬಲ್ಲ ದಾಸರು, ನಳಚರಿತ್ರೆಯಲ್ಲಿ ಕವಿಸಮಯಕ್ಕೆ ಕೊಂಚ ಮನ ಸೋತು ಅವೇ ಅನುಭವಗಳನ್ನು ಮಸಕುಮಸಕಾಗಿ ಒಳ್ಳೇ ಕಾವ್ಯಕಲೆಯಿಂದ ಬರೆದಿರುವರು. ಮೋಹನತರಂಗಿಣಿಯು ನವರಸಗಳಿಂದ ತುಂಬಿ ಬಸಿಯುತ್ತದೆ. ಆದರೆ, ನಳಚರಿತ್ರೆಯಲ್ಲಿ ಕರುಣರಸವೇ ಮುಖ್ಯ.

ನಳಚರಿತ್ರೆಯ ಆದಿಯಲ್ಲಿ, ಬೇಲೂರಿನ ಚೆನ್ನಕೇಶವನನ್ನು ವರಪುರದ ಚೆನ್ನಿಗರಾಯನೆಂದೂ ಅಂತ್ಯದಲ್ಲಿ ವರಪುರದ ಆದಿಕೇಶವನೆಂದೂ ದಾಸರು ಸ್ಮರಿಸಿರುವರು. ಮೇಲಾಗಿ ನಳಚರಿತ್ರೆಯು ಬೇಲೂರ ಚೆನ್ನಕೇಶವನ ಅಂಕಿತವಾಗಿ ಇದೆ.

ರಾಯರೊಳಗಗ್ಗಳಿಯನಹ ಕೌಂ |
ತೇಯನಿಗೆ ರೋಮಶ ಮಹಾಮುನಿ |
ರಾಯ ವಿಸ್ತರಿಸಿದನು ನಳಭೂವರನ ಚರಿತೆಯನು ||
ಪ್ರೀಯದಿಂದಾಲಿಪುದು ಸುಜನರು ।
ಶ್ರೀಯರಸ ವರಪುರದ ಚೆನ್ನಿಗ |
ರಾಯನಂಕಿತವಾಗಿ ಪೇಳುವೆನೀ ಮಹಾಕಥೆಯ ||

ನಳಚರಿತ್ರೆಯು ಬೇಲೂರಿನಲ್ಲಿ ರಚಿತವಾಯಿತು.

———

## ೧೫. ನಳಚರಿತ್ರೆ ನಲೋಪಾಖ್ಯಾನಗಳು

ನಲೋಪಾಖ್ಯಾನ ನಳಚರಿತ್ರೆಗಳೊಳಗಿನ ಕತೆಯ ಮುಖ್ಯಾಂಶದಲ್ಲಿ ಹೇಳತಕ್ಕಂತಹ ವ್ಯತ್ಯಾಸವಿಲ್ಲ. ಆದರೂ, ದಾಸರು ತಮ್ಮ ಕಾವ್ಯಕ್ಕೆ ಕಳೆಯೇರಬೇಕೆಂದು ಚಿಕ್ಕಪುಟ್ಟ ಮಾರ್ಪಾಟುಗಳನ್ನು ಒದಗಿಸಿಕೊಂಡಿರುವರು. ಅಂತಹ ಬದಲಾವಣೆಗಳಲ್ಲಿ ಸಾಧಾರಣವಾಗಿ ಮೂರು ವಿಭಾಗಗಳನ್ನು ಮಾಡಬಹುದು. ೧. ನಲೋಪಾಖ್ಯಾನದಲ್ಲಿರದ ವಿಷಯಗಳು. ೨. ನಲೋಪಾಖ್ಯಾನದಿಂದ ಮಾರ್ಪಾಟು ಪಟ್ಟ ವಿಷಯಗಳು. ೩. ನಲೋಪಾಖ್ಯಾನದಲ್ಲಿ ಸಂಕ್ಷೇಪವಾಗಿರುವ ಸಂಗತಿಗಳನ್ನು ವಿವರವಾಗಿ ವರ್ಣಿಸಿದ ವಿಷಯಗಳು.

೧. ನಲೋಪಾಖ್ಯಾನದಲ್ಲಿ ನಿಷಧನಗರದ ವರ್ಣನೆಯಿಲ್ಲ. ದಾಸರು ಅದನ್ನು ಮನೋಹರವಾಗಿ ಬಣ್ಣಿಸಿರುವರು. ಮೋಹನತರಂಗಿಣಿಯೊಳಗಿನ ದ್ವಾರಕಾಪುರ ಶೋಣಿತಪುರಗಳ ಸ್ವಾಭಾವಿಕ ವರ್ಣನೆಯೊಂದಿಗೆ ನಳಚರಿತ್ರೆಯೊಳಗಿನ ನಿಷಧನಗರವನ್ನು ಹೋಲಿಸಿ ನೋಡಿದರೆ, ದಾಸರ ಕಾವ್ಯಕಲೆಯು ಬೆಳೆದಿದ್ದರೂ ಆದು ಕವಿಸಂಪ್ರದಾಯದ ಕಡೆಗೆ ಒಲಿದುದು ಕಂಡು ಬರುವಂತಿದೆ. ತರಂಗಿಣಿಯೊಳಗಿನ ದ್ವಾರಕೆಯು ದಾಸರ ಕಾಲದ ಕರ್ನಾಟಕದೊಳಗಿನ ಒಂದು ದೊಡ್ಡ ಪಟ್ಟಣ. ನಿಷಧನಗರವು ಒಂದು ಕಾಲ್ಪನಿಕ ರಾಜಧಾನಿ,

ವಸುಧೆಪತಿ ಕೇಳೀಚರಿತ್ರೆಯ ।
ನಿಷಧವೆಂಬಾ ಮಹಾಪುರ ।
ವೆಸೆದುದಗಣಿತ ಗೋಪುರ ಪ್ರಾಕಾರ ಶಿಖರದಲಿ ॥
ಮಿಸುನಿರತ್ನ ಪ್ರಭೆಗಳಲಿರಂ ।
ಜಿಸುವ ದೇವಾಲಯಗಳಿದ್ದುವು ।
ವಸುಧೆಗಚ್ಚರಿಯೆನಿಸಿತಾ ಪುರವರಸ ಕೇಳೆಂದ ॥

ಮುರಿಮುರಿವ ಕೊತ್ತಳದ ಸಾಲಿನ ।
ಪರುಠವದ ಹುಲಿಮುಖದ ಬಾಗಿಲ ।
ಮಿರುವ ಮಣಿವಜ್ರದ ಕವಾಟದ ಗಂದವಟ್ಟಿಗೆಯ ॥

ಉರುತರರದ ವೇದಿಕೆಯ ಹೇಮದಿ ।
ಮೆರೆವ ಸೋಪಾನಗಳ ನೆಲೆಯುಂ ।
ಪ್ಪರಿಗೆಗಳ ಮೇಲೆಸೆವ ಕಲಶದಕಾಂತಿ ರಂಜಿಸಿತು ॥

ಮುಗಿಲ ತುಡುಕುವ ತೆನೆಗಳಾಳ್ವೆ ।
ರಿಗಳು ಪಾತಾಳಗಳ ಖಾತಗ ।
ಳಗಳ ಬಳಸಿದ ಕೋಟಿ ಸುತ್ತಾವರಿಸಿದುನ್ನತದ ॥

ಗಗನ ವೀಧಿಯ ತಾರಕೆಯ ವೋಲ್ ।
ಸೊಗಯಿಸುವ ಕನ್ನಡಿಯ ಸಾಲ್ಗೊಂ ।
ಬೆಗಳ ರತ್ನಪ್ರಭೆಗಳಲಿ ರಂಜಿಸಿದುದಾನಗರ ॥

ರವಿಶಶಿಯವೀಧಿಗಳ ಹೇವಂದ ।
ವಿವಿಧ ಮಣಿಭಿತ್ತಿಗಳ ಕಾಂತಿಯು ।
ದಿವವನಣೆದುದು ರತ್ನನಿಚಯದ ಭದ್ರಭವನಿಕೆಯ ॥

ಯುವತಿಯರ ಸಂಗೀತವೀಣಾ ।
ರವದ ರಹಿಯಲಿ ಮನಕೆ ಸವಿದೋ ।
ರುವ ಮಹಾರಚನೆಯಲಿ ಮೆರೆದುದು ನಿಷಧವರನಗರ ॥

ವಸುಧೆಯಮರರು ಕ್ಷತ್ರಿಯರು ರಂ ।
ಜಿಸುವ ವೈಶ್ಯಚತುರ್ಥರುನ್ನತ ।
ಕುಶಲ ವಿದ್ಯಾಧಿಕರು ಕವಿಗಳು ಮಲ್ಲಗಾಯಕರು ॥

ಅಸಮರಥಿಕರು ಸಮರದಲಿಸಾ ।
ಹಸರು ಕರಿರಥತುರಗಪಾಯ್ದಳ ।
ವೆಸೆದುದಗಣಿತ ಚಾತುರಂಗದಿ ನಿಷಧವರನಗರ ॥

[1] ನಲೋಪಾಖ್ಯಾನದಲ್ಲಿ ನಲಪುಷ್ಕರರ ಯುದ್ಧದ ಸಂದರ್ಭವೇ ಇಲ್ಲ. ಆದರೆ, ದಾಸರು, ಅವರೀರ್ವರ ನಡುವೆ ಕಾಳೆಗವನ್ನು ಹಚ್ಚಿ, ವೀರರಸ ಪ್ರಿಯರಾದ ತಮ್ಮ ಕಾಲದ ಜನರಿಗೆ ತಕ್ಕ ಅನ್ನವನ್ನು ನೀಡಿರುವರು.

ಹೊಕ್ಕರಾಹವದೊಳಗೆ ಮೊನೆಯಾ ।
ಳಿಕ್ಕರಿಸಿ ಬರೆ ಕಂಡು ಮುರಘುರೇ ।
ಚುಕ್ಕೆಗಳಲಾ ಎನುತ ಹೊಯ್ದರು ಬೆರಸಿ ಪಟುಭಟರ ॥
ಇಕ್ಕಿದರು ಸುರಗಿಯಲಿ ಕರಿಗಳ ।
ತಿಕ್ಕಿ ತಿವಿದರು ತೇರುಗಳ ಮುರಿ ।
ದಿಕ್ಕಿ ಪರಿಘದೊಳೊರಸಿದರು ಕಾಲಾಳು ಮೂದಲಿಸಿ ॥

ಇಟ್ಟಣಿಸಿ ಬಹತೇಜಿಗಳ ನೆರೆ ।
ತಟ್ಟಿ ಖಂಡಿಸಿ ಸುಭಟರನು ಬೆ ।
ನ್ನಟ್ಟಿ ತಿವಿದರು ಮನ್ನೆಯರು ಹದವರಿದು ನಾಯಕರ ॥
ಹೊಟ್ಟೆಗುಟ್ಟಿದರರುಣಜಲ ಸಾ ।
ಲಿಟ್ಟುದವನಿಯೊಳಮುಮ ನೆರೆ ಜಗ ।
ಜಟ್ಟಿಗಳು ಕಾದಿದರು ರಣದಲಿ ಸುರರು ಬೆರಗಾಗೆ ॥

ಇಳೆ ಸರಳಮಯವಾಯ್ತು ಕೆಂಡದ ।
ಮಳೆಗರೆದುದೆನೆ ಪುಷ್ಕರನ ಬಲ ।
ದೊಳಗೆ ಬಿದ್ದುದನೇಕರಿಪು ನೃಪಸೈನ್ಯಸಾಗರವು ॥
ಮಲೆತವರ ಶಿರಗಳನು ಖಂಡಿಸಿ ।
ತಲೆಯ ಸೆಂಡಾಡಿದನು ರಥಿಕರ ।
ಬಲುಗುದುರೆ ಕಾಲಾಳು ನೆಗ್ಗಿತು ನಳನ ಶರಹತಿಗೆ ॥

ತೆರಹುಗೊಟ್ಟೊಳಹೊಗಿಸಿ ಸದೆದನು ।
ಬರಸಿಡಲು ಒಡಿವಂತೆ ರಿಪುಬಲ ।
ಮುರಿದು ನಿಂದುದು ಗಾಯವಡೆದರು ವೀರಪಟುಭಟರು ॥
ಹುರಿಯೊಡೆದು ವೈದೆಗೆದು ಸಲೆಕೈ ।
ಮರೆದು ಕೈದುವ ಬಿಸುಟು ಪಡೆನೊಗ ।
ದಿರುಹಲೆಚ್ಚನು ಕೊಚ್ಚಿದನು ಪುಷ್ಕರನ ಚತುರ್ಬಲವ ॥

ಮರನ ಹುತ್ತವನೇರಿದರು ಸಂ ।
ಗರದಿ ಕೈದುವನಿಳುಹಿ ಸಲೆ ವೈ ।
ಮರೆದು ತೇಜಿಯನಿಳಿದು ರಾವುತರು ಕೊರಳ ಸಲುಹೆನುತ ॥

ಕರವ ಮುಗಿದರು ಜೋಧರರು ಕೈ ।
ಮರೆದು ಕರುಣದಿ ಗಾಯದಲಿ ನೊಂ ।
ದೊರಲಿ ಬಾಯಿಲಿ ಬೆರಳನಿಟ್ಟುದು ವೈರಿಪಾಯದಳ ॥

ನಳನು ಬೇಟೆಯಾಟವನ್ನು ಮುಗಿಸಿ ಒಂದು ಕೊಳನ ತೀರದಲ್ಲಿ ವಿಶ್ರಮಿಸುವಾಗ್ಗೆ, ಹಂಸವನ್ನು ಕಂಡನೆಂದು ನಳಚರಿತ್ರೆಯಲ್ಲಿ ಹೇಳಿದೆ. ಬೇಟೆಯನ್ನು ವರ್ಣಿಸುವ ನಾಲ್ಕೈದು ಪದ್ಯಗಳಿವೆ. ಈ ಸಂದರ್ಭದಲ್ಲಿ, ನಲೋಪಾಖ್ಯಾನದೊಳಗೆ, ಬೇಟೆಯ ಸುದ್ದಿಯಿಲ್ಲ. ಮೋಹನತರಂಗಿಣಿಯಲ್ಲಿ ಬೇಟೆಯ ವಿಸ್ತಾರವಾದ ವರ್ಣನೆಯಿದೆ. ಆ ಸ್ವಾಭಾವಿಕ ದೃಶ್ಯವನ್ನು ನಳಚರಿತ್ರೆಯೊಳಗಿನ ಬೇಟೆಗೆ ಹೋಲಿಸಿ ನೋಡಬಹುದು.

೨ (ಅ) ದಾಸರು ಭಾಷಾಂತರಕಾರರಲ್ಲೆಂದು ಹೇಳಲಾಯಿತು. ಆದರೆ ಅನುವಾದದ ಒಂದೂ ಉದಾಹರಣೆಯು ದೊರೆಯುವುದಿಲ್ಲವೆಂತಲ್ಲ. ಅಂತಹ ಎರಡು ಅನುವಾದಗಳನ್ನು ನಳಚರಿತ್ರೆಯಿಂದ ಉದ್ಧರಿಸಲಿದೆ. ನಲೋಪಾಖ್ಯಾನದಲ್ಲಿ, ದಮಯಂತಿಯನ್ನು ಉದ್ದೇಶಿಸಿ ಹಂಸಗಳು ನುಡಿದುದು,

**ತ್ವಂಚಾಪಿ ರತ್ನಂ ನಾರೀಣಾಂ ನರೇಷು ಚ ನಲೋವರಃ ।**
**ವಿಶಿಷ್ಟಯಾ ವಿಶಿಷ್ಟೇನ ಸಂಗಮೋ ಗುಣವಾನ್ಭವೇತ್ ॥**

ನಳಚರಿತ್ರೆಯಲ್ಲಿ ನಳನನ್ನುದ್ದೇಶಿಸಿ,

ನಿನ್ನರೂಪಿನ ಚೆಲುವ ನಳನೃಪ ।
ನುನ್ನತದ ಸೌಂದರಿಯ ಜಗದೊಳ ।
ಗಿನ್ನು ನಾ ಸರಿಕಾಣೆ ನಿಮುಗಿರ್ವರಿಗೆ ಸಮನಹುದು ॥

ನಳನನ್ನುದ್ದೇಶಿಸಿ,

ಕ್ಷಿತಿಯೊಳಿಹ ಸತಿಯೊಳಗಮರಾ ।
ವತಿಯೊಳಿಹ ಸ್ತ್ರೀಯರಲಿ ಮೋಹಾ ।
ವಿತಳದೊಳಗಿಹ ನಾರಿಯರಲೀಕ್ಷಿಸಿದೆನವಳಿಂಗೆ ॥
ಪ್ರತಿಯ ಕಾಣೆನು ರೂಪದಲಿ ನೀ ।
ನತಿ ಚೆಲುವ ನಿನಗವಳು ಪಾಸಟಿ ।
ಸತಿಗೆ ನೀನೇ ರಮಣನಲ್ಲದೆಯಿತರರನು ಕಾಣೆ ॥

ಕಾರ್ಕೋಟಕನು ನಲನಿಗೆ ಮಾಡಿದ ಉಪದೇಶ,

**ಗಚ್ಛ ರಾಜನ್ನಿತಃ ಸೂತೋ ಬಾಹುಕೋಽಹಮಿತಿ ಬ್ರುವನ್ ।**
**ಸಮೀಪಮೃತುಪರ್ಣಸ್ಯ ಸ ಹಿ ವೇದಾಕ್ಷನೈಪುಣಮ್ ॥**
**ಅಯೋಧ್ಯಾಂ ನಗರೀಂ ರಮ್ಯಾಮದ್ಯ ವೈ ನಿಷಧೇಶ್ವರ ।**
**ಸ ತೇಽಕ್ಷಹೃದಯಂ ದಾತಾ ರಾಜಾಶ್ವಹೃದಯೇನ ವೈ ॥**

ಜನಪ ಕೇಳ್ಳೈ ಧರೆಗೆ ಋತುಪ ।
ರ್ಣನು ಮಹಾರಾಜೇಂದ್ರ ಗುಣ ।
ನಿಧಿಯಿನಕುಲಾಂಬುಧಿಚಂದ್ರನಾತನ ಪುರವಯೋಧ್ಯೆಯದು ॥
ನಿನಗೆ ಬಹುದಕ್ಷರಹೃದಯವಾ ।
ತನಲಿ ನೀನವಗಶ್ವಹೃದಯವ !
ನನುಗೊಳಿಸು ಸಾಕಿನ್ನು ಚಿಂತಿಸಬೇಡ ಹೋಗೆಂದ ॥

ಇಲ್ಲಿ "ಅಕ್ಷಹೃದಯದ," ಸ್ಥಳದಲ್ಲಿ "ಅಕ್ಷರಹೃದಯ" ವನ್ನು ದಾಸರು ಬೇಕೆಂದು ಉಪಯೋಗಿಸಿರುವರು! ಕನ್ನಡಭಾರತದಲ್ಲಿ, 'ಗೆಲಿದನು ಪುಷ್ಕಳನ ವಿದ್ಯಾತಿಮಹಿಮೆಯಲಿ' ಎಂದು ಹೇಳಿರುವುದರಿಂದ, ದಾಸರು, 'ಅಕ್ಷರಹೃದಯದ' ಸೂಚನೆಯನ್ನು ಕುಮಾರವ್ಯಾಸನಿಂದ ತೆಗೆದು ಕೊಂಡಿರಬಹುದು,

ನಳಮಹೀಪತಿಯಕ್ಷಹೃದಯವ ।
ತಳಿದು ಋತುಪರ್ಣನಲಿ ಕಾಲವ ।
ಕಳಿದು ಗೆಲಿದನು ಪುಷ್ಕಳನ ವಿದ್ಯಾತಿಮಹಿಮೆಯಲಿ ॥

೨. (ಆ) ನಲನೃಪನಲ್ಲಿ ಕಲಿ ಸೇರುವ ಸಮಯವನ್ನು ಕುರಿತು ನಲೋಪಾಖ್ಯಾನದಲ್ಲಿ ಇರುವುದು,

**ಕೃತ್ವಾ ಮೂತ್ರಮುಪಸ್ಪೃಶ್ಯ ಸಂಧ್ಯಾಮನ್ವಾಸ್ತ ನೈಷಧಃ ।**
**ಅಕೃತ್ವಾ ಪಾದಯೋಶ್ಶೌಚಂ ತತ್ರೈನಂ ಕಲಿರಾವಿಶತ್ ॥**

ನಳಚರಿತ್ರೆಯಲ್ಲಿ,

ಒಂದು ದಿವಸದೊಳಾಗ ನೃಪನಿಗೆ ।
ಬಂದುದಲ್ಪಾಚಮನ ಕಾಲದೊ ।
ಳೊಂದು ಶುದ್ಧಾಚಮನವಿಲ್ಲದೆ ಮರೆದು ನೀರ್ಗುಡಿಯೆ ॥

ಇಂದು ನನಗಿದೆ ಸಮಯವೆಂದಾ |
ನಂದದಲಿ ಕಲಿಪುರುಷ ರಾಯನ ।
ಸಂಧಿಸಿದ ವಿಧಿವಶವ ತಪ್ಪಿಸಲಾರಹವಣಿಂದ ॥

ಭೀಮನೃಪಾಲನಿಗೆ, ದಮಯಂತಿಯೆಂಬೊಬ್ಬ ಮಗಳೂ ಮೂರು ಗಂಡು ಮಕ್ಕಳೂ ಇದ್ದರೆಂದು ಭಾರತದಲ್ಲಿ ಹೇಳಿದೆ. ನಳಚರಿತ್ರೆಯಲ್ಲಿ ಭೀಮನಿಗೆ ಗಂಡುಸಂತತಿಯಿರಲಿಲ್ಲವೆಂದೂ ದಮಯಂತಿಯೊಬ್ಬಳೇ ಮಗಳೆಂದೂ ಇದೆ.

ನಳನನ್ನು ಹುಡುಕುತ್ತ ಹಳುವಿನಲ್ಲಿ ಕಳವಳಪಡುತ್ತ ಅಲೆದಾಡುತ್ತಿರುವಾಗ್ಗೆ ದಮಯಂತಿಯನ್ನು ಒಂದು ಹಾವು ಹಿಡಿದು ನುಂಗತೊಡಗಿತು. ಆಗ ನಲೋಪಾಖ್ಯಾದಲ್ಲಿ, ದಮಯಂತಿಯು ತನ್ನ ಯೋಚನೆ ಮಾಡದೆ, ಗಂಡನ ಸಂಗತಿಯನ್ನು ಸ್ಮರಿಸಿ ವಿಹ್ವಲಳಾಗುವಳು. ನಳಚರಿತ್ರೆಯಲ್ಲಿ, ದಮಯಂತಿಯು, ದೇವರನ್ನು ಪ್ರಾರ್ಥಿಸಿ ತನ್ನನ್ನು ಸಲುಹಬೇಕೆಂದು ಬೇಡಿಕೊಂಬುವಳು. ದಾಸರ ದಮಯಂತಿಗೆ ಕೊರತೆಯುಂಟಾಗಿದೆಯೆಂದು ಅನ್ನುವವರಿರಬಹುದು. ಆದರೆ, ದಾಸರ ದಮಯಂತಿಯು ಅವರ ಕಾಲದ ಮಾದರಿಯ ಹದಿಬದೆಯೆಂಬುದನ್ನು ಮರೆಯಕೂಡದು. ಹಾವಿನ ಬಾಯಿಯಲ್ಲಿ ಸಿಲುಕಿದಾಗ್ಗೆ ತನ್ನನ್ನು ಸಲುಹಲು ದೇವರನ್ನು ಪ್ರಾರ್ಥಿಸಿರುವುದೇ ಸ್ವಾಭಾವಿಕ !

ಹಾ ರಮಣ ನಳನೃಪತಿ ತನ್ನನ |
ದಾರಿಗೊಪ್ಪಿಸಿ ಕಳೆದೆ ಹರಿ ಹರಿ |
ಕ್ರೂರ ಸರ್ಪನ ಬಾಯ್ಗೆ ತುತ್ತಾದೆನೆ ಜಗನ್ನಾಥ ॥
ಆರಿಗೊರಲುವೆನಿನ್ನು ಪ್ರಾಣವ ।
ನಾರು ಕಾವವರಕಟ ಬಿಡಿಸೈ ।
ವಾರಿಜಾಕ್ಷ ಮುಕುಂದ ಸಲಹೆಂದೊರಲಿದಳು ತರಳೆ ॥

ದಮಯಂತಿಯ ಆರ್ತಸ್ವರವನ್ನು ಕೇಳಿ, ಒಬ್ಬ ಬೇಡನು ಅಲ್ಲಿಗೆ ಬಂದು ಆಕೆಯನ್ನು ಹಾವಿನ ದವಡೆಯಿಂದ ಬಿಡಿಸುವನು. ಆ ಮೇಲೆ, ಅವನು ದಮಯಂತಿಗೆ ತನ್ನೊಡನೆ ಒಗೆತನಗೈಯಲಿಕ್ಕೆ ಕೇಳುವನು. ಭಾರತದ ದಮಯಂತಿಯು, ಆ ಶಬರನ ಮೇಲೆ ಸಿಟ್ಟಾಗಿ, ಅವನನ್ನು ಶಾಪ ಕೊಟ್ಟು ಸುಟ್ಟು

ಬಿಡುವಳು. ದಾಸರ ದಮಯಂತಿಯ ಮಾತು ಬೇರೆ. ಆಕೆಯು ವ್ಯಾಧನ ಸಂಗಡ ಯುಕ್ತಿವಾದವನ್ನು ಮಾಡಿ, ಬೆದರಿಸಿ, ಕಳುಹುವಳು. ಪುಳಿಂದನು ನಾಚಿ, ನಮಸ್ಕರಿಸಿ ಹೋಗುವನು.

ಒಂದು ದಿನ ಸಂಜೆಯ ಸಮಯದಲ್ಲಿ, ದಮಯಂತಿಯು, ಅಡವಿಯೊಳಗೆ ವರ್ತಕರ ಒಂದು ಗುಂಪನ್ನು ಕಂಡು, ಅವರ ಸಂಗಡ ಆ ರಾತ್ರಿ ಅಲ್ಲಿಯೆ ಉಳಿದಳು. ಕಾಡಾನೆಗಳು ಒಮ್ಮೆಲೆ ಬಂದು, ಆ ವರ್ತಕರ ವಾಸಸ್ಥಾನದ ಮೇಲೆ ದಾಳಿ ಮಾಡಿ ಅವರನ್ನು ದಿಕ್ಕುಪಾಲಾಗಿ ಮಾಡಿದುವು. ಕಾಡಾನೆಗಳ ಈ ಹಾವಳಿಯು ನಲೋಪಾಖ್ಯಾನದಲ್ಲಿಯೂ ನಳಚರಿತ್ರೆಯಲ್ಲಿಯೂ ಉಂಟು. ದಾಸರ ಈ ವರ್ಣನೆಯು ಭಾರತದ ಅನುವಾದವಲ್ಲ. ಕಾಡಾನೆಯ ಹಾವಳಿಯ ಅನುಭವವನ್ನು ದಾಸರು ಪಡೆದಿದ್ದರೋ ಏನೋ ಎಂಬುವಂತೆ ಮನೋಹರವಾಗಿ ಬರೆದಿರುವರು.

ಅವನಿಪತಿ ಕೇಳ್ ವೈಶ್ಯಕುಲಸಂ |
ಭವರು ಹಾಯ್ಕಿದರಲ್ಲಿ ಗೂಡಾ |
ರವನು ಬಿಟ್ಟರು ಪಾಳಯವ ಮಲಗಿದರು ರಾತ್ರಿಯಲಿ ||
ಅವಧಿ ಬಂದುದನೇನನೆಂಬೆನು |
ಕವಿದು ಕಾಡಾನೆಗಳು ಮಡುವಿಗೆ |
ತವಕದಿಂದ ನೀರಡಿಸಿ ಬಂದುವು ಗಿರಿಗಳಂಬದಲಿ ||

ಮುರಿದು ತರುಗಳನಿಡುತ ಮೆಳೆಗಳ |
ನೊರಸಿ ಮೆಟ್ಟುತ ಕೋಡಿನಲಿ ಬಲು |
ಮೊರಡಿಗಳ ಕಿತ್ತಿಡುತ ಸೊಂಡಿಲ ತೂಗಿ ಮದವೇರಿ ||
ಕರಿಗಳ್ಬರೆ ಕಂಡು ಭೀತಿಯೊ |
ಳಿರದೆ ಹೊಯ್ದರು ಕೆಲರು ಧೈರ್ಯದೊ |
ಳುರುಬಿ ನಿಂದರು ಸಬಳದಲಿ ಹೊಕ್ಕಿರಿದು ಕಾದಿದರು ||

ಹೂಳಿದುವು ಮದಕರಿಗಳವರನು |
ಸೀಳಿ ಹಾಯ್ಕಿತು ಕೆಲರ ಮುಮ್ಮೊನೆ |
ಯಾಳು ಕವಿದುದು ಹೊಕ್ಕು ಕಾದಿದರಖಿಳ ಭುಜಬಲರು ||

ತಾಳಬಲ್ಲರೆಯುವರು ಕರಿಗಳ ।
ಧಾಳಿಗಿದಿರೇ ಮುರಿದು ಹಾಯ್ದರು ।
ಹೇಳಲೇನದನರಸ ತೆಗೆದೋಡಿದರು ದೆಸೆ ದೆಸೆಗೆ ॥

ತರಹರಿಸಿ ನಿಲಲರಿದು ಕರಿಗಳ ।
ವುರುಬು ಘನವಿಟ್ಟಣಿಸಿ ಕೊಲುತಿದೆ ।
ಹರಣವನು ಹೋಗಾಡಲೇಕೆಂದುಳಿದ ಪಟುಭಟರು ॥
ತೆರಳಿತಲ್ಲಿಯದಲ್ಲಿ ವಾಣಿ ।
ಜ್ಯರು ಮುರಿದು ಬರೆ ಕಾಣುತಾವೈ ।
ಶ್ಯರಿಗಧಿಪ ಚಿಂತಿಸಿದ ಹದನೇನೆಂದು ಮನದೊಳಗೆ ॥

ಕೊನೆಗೆ ಆ ಬಣಜಿಗರ ಹಿರಿಯನು, ಆನೆಗಳ ಹಾವಳಿಯನ್ನು ಹೋಗಲಾಡಿಸುವುದಕ್ಕೆ ಉಪಾಯವೇನೆಂದು ದಮಯಂತಿಗೆ ಕೇಳಲಾಗಿ, ಆಕೆಯು ದೇವರನ್ನು ಕುರಿತು ಪ್ರಾರ್ಥಿಸಿದೊಡನೆ ಆನೆಗಳು ಹೊರಟುಹೋದುವು. ದಮಯಂತಿಯು ಪ್ರಾರ್ಥಿಸಿದುದು,

ಎನುತ ಕಣ್ಣೆವೆ ಬಿಗಿದು ಮನದಲಿ ।
ನೆನೆದಳಚ್ಯುತನಂಘ್ರಿಕಮಲವ ।
ವನಜನಾಭ ಮುಕುಂದ ಸಲಹೆನೆ ಕರಿಗಳಾಕ್ಷಣಕೆ ॥
ವನಕೆ ಮರಳಿದುವವರನೆಲ್ಲರ ।
ವನಿತೆ ಸಂತೈಸಿದಳು ದೈವವ ।
ನೆನೆವ ಭಕ್ತರಿಗುಂಟೆ ಭಯವೆಲೆ ನೃಪತಿಕೇಳೆಂದ ॥

ನಲೋಪಾಖ್ಯಾನದಲ್ಲಿ, ದಮಯಂತಿಯಿಂದಲೆ ಅನಾಹುತವು ಸಂಭವಿಸಿತೆಂದು ತಿಳಿದು ವರ್ತಕರು ಆಕೆಯನ್ನು ತಳ್ಳಿಬಿಡುವರು.

ನಳಚರಿತ್ರೆಯಲ್ಲಿ, ಇಂತಹ ಎಷ್ಟೋ ಮಾರ್ಪಾಟುಗಳಿರುವುವು. ಅವೆಲ್ಲವುಗಳಿಗೆ ಇಲ್ಲಿ ಸ್ಥಳ ದೊರೆಯಲಾರದು. ದಮಯಂತಿಯ ಸ್ವಯಂವರಕ್ಕೆ ಬಂದ ದೇವತೆಗಳ ವಿಷಯದಲ್ಲಿ ಬರೆದ ನಲೋಪಾಖ್ಯಾನ ನಳಚರಿತ್ರೆಗಳೊಳಗಣ ವ್ಯತ್ಯಾಸ ಹಾಗೂ ಅದರ ಮಹತ್ವದ ಬಗ್ಗೆ ಬೇರೆಡೆಯಲ್ಲಿ ಹೇಳಿದೆ.

೩. ಕಟ್ಟಡವಿಯೊಳಗೆ ಅಲೆದಾಡುವಾಗ ನಲನು ಕಂಡ ಬೇಗೆಯ ಸಂಬಂಧದಲ್ಲಿ ಭಾರತದಲ್ಲಿರುವುದು.

೭|೩೬

**ಉತ್ಸೃಜ್ಯ ದಮಯಂತೀಂತು ನಲೋರಾಜಾ ದಿಶಾಂಪತೇ।**
**ದದರ್ಶ ದಾವಂ ರಹ್ಯಂತಂ ಮಹಾಂತಂ ಗಹನೇ ವನೇ ||**

ದಾಸರು, ಇಷ್ಟಕ್ಕೆ ತೃಪ್ತರಾಗದೆ, ನಳಚರಿತ್ರೆಯಲ್ಲಿ, ದಳ್ಳುರಿಯನ್ನು ಮೂರು-ನಾಲ್ಕು ಪದ್ಯಗಳಿಂದ ಹೃದಯಂಗಮವಾಗಿ ಬಣ್ಣಿಸಿರುವರು,

ಏನನೆಂಬೆನು ನೃಪತಿ ಕಿಚ್ಚಿನ।
ಹಾನಿಯನು ಬನದೊಳಗೆ ಬೆರಸಿತು।
ಭಾನುಮಂಡಲವಡಗೆ ಮುಸುಕಿದ ಹೊಗೆಯ ಹೊರಳಿಯಲಿ ||
ಕಾನನವನೆಡೆಗೊಂಡದಳ್ಳುರಿ।
ಗಾನಲಾಪುದೆ ತರುನಿಕರ ವೈ।
ಮಾನಿಕರು ನಡನಡುಗೆ ಬೆಂದುದು ಸಕಲವನಭೂಮಿ ||

ಬಿದಿರಮಳೆ ಧಗಧಗಿಸೆ ಘನಹೆ।
ಬ್ಬಿದಿರು ಛಟಛಟರೆನಲುವುರಿಯೊಳು।
ಕದಳಿಗಳು ಶಿಮಿಶಿಮಿಸೆ ತವ:ಗಳನುರುಹಿ ಮೆಳೆಗಳನು ||
ಗದಗದಿಸೆ ಗುಹೆಗಳಲಿ ಮೃಗತತಿ।
ಬೆದರಿ ಹಾಯ್ದುವು ಪಕ್ಷಿಸಂಕುಲ।
ವುದುರಿದುವು ಗರಿಸಹಿತ ಬೆಂದುವು ವನದ ಮಧ್ಯದಲಿ ||

ತೆಗೆದು ಹಾಯ್ದುವು ಸಿಂಹ ಶಾರ್ದೂ।
ಲಗಳು ಕರಿಗಳ ಹಿಂಡು ನಾನಾ।
ಮೃಗಗಳಗಣಿತ ಬೆಂದು ಬಿದ್ದುವು ನಿಮಿಷ ಮಾತ್ರದಲಿ ||
ಚಿಗಿದು ಹಾಯ್ದುವು ಗಂಡಭೇರುಂ।
ಡಗಳು ಮೊದಲಾದಖಿಳ ಮೃಗಪ।
ಕ್ಷಿಗಳು ಕೆಡೆದುವು ಕಿಚ್ಚಿನೊಳಗವನೀಶ ಕೇಳೆಂದ ||

ನಳನು ಪುಷ್ಕರನನ್ನು ಸೋಲಿಸಿ, ಜಯದ ಸುದ್ದಿಯನ್ನು ತನ್ನ ಮಾವ ನಾದ ಭೀಮನೃಪಾಲನಿಗೆ ಕಳುಹಿದನು. ಭೀಮನು ದಮಯಂತಿಯನ್ನು ಸತ್ಕರಿಸಿ ಬೀಳ್ಕೊಟ್ಟನು.

**ಪ್ರಶಾಂತೇ ತು ಪುರೇ ಹೃಷ್ಟೇ ಸಂಪ್ರವೃತ್ತೇ ಮಹೋತ್ಸವೇ।**
**ಮಹತ್ಯಾ ಸೇನಯಾ ರಾಜಾ ದಮಯಂತೀಮುಪಾನಯತ್॥**
**ದಮಯಂತೀಮಪಿ ಪಿತಾ ಸತ್ಕೃತ್ಯ ಪರವೀರಹಾ।**
**ಪ್ರಾಸ್ಥಾಪಯದಮೇಯಾತ್ಮಾ ಭೀಮೋ ಭೀಮಪರಾಕ್ರಮಃ॥**

ನಲೋಪಾಖ್ಯಾನದಲ್ಲಿ ದಮಯಂತಿಯು ಅನುಭವಿಸಿದ ದುಃಖಗಳನ್ನು ವಿವರವಾಗಿ ಹೇಳಿದುದರಿಂದ ಓದುಗರ ಮನಸ್ಸು ಬಹಳ ಉದ್ವಿಗ್ನಗೊಳ್ಳುವುದು. ದಮಯಂತಿಯು ಆ ಸಂಕಟಗಳಿಂದ ಪಾರಾಗಿ ಹೇಗೆ ಸುಖವನ್ನು ಅನುಭವಿಸುವಳು ಎಂಬ ಆತುರತೆಯು ಹೆಚ್ಚಾಗುವುದು ಮೇಲಾಗಿ ವಿಸ್ತಾರವಾಗಿ ಶೋಕದ ಸಂಗತಿಗಳನ್ನು ವರ್ಣಿಸಿ, ನಲನೊಡನೆ ಒಮ್ಮೆಲೆ ಬಂದು ಕೂಡಿದಳೆಂದು ಅಲ್ಲಿ ಹೇಳಿದುದರಿಂದ ವಾಚಕರ ಮನಸ್ಸಿನ ಮೇಲಾದ ದುಃಖದ ಪರಿಣಾಮವು ಒಮ್ಮೆಲೆ ಕಡಿಮೆಯಾಗುವುದಿಲ್ಲ. ಗಂಡನ ಸಂಗಡ ಸಮದುಃಖಿಯಾಗಿ ಸಂಕಟಗಳನ್ನನುಭವಿಸಿದ ಹದಿಬದೆಯು ಸುಖದ ಸಮಾರಂಭಗಳಲ್ಲಿ ಇದ್ದಳೆಂದು ಹೇಳಿದ ಪಕ್ಷಕ್ಕೆ ಓದುಗರ ಮನಸ್ಸು ತಣಿಯಲಾರದು. ಕಾವ್ಯದ ಕೊನೆಯಲ್ಲಿ ಒಂದಾವರ್ತಿಯಾದರೂ ಆ ಹದಿಬದೆಯು ಅನುಭವಿಸಿದ ಸುಖವನ್ನು ವರ್ಣಿಸಿ ವಾಚಕರ ಉದ್ವಿಗ್ನಮನಸ್ಸನ್ನು ಪ್ರಸನ್ನಗೊಳಿಸಬೇಕೆಂದು ದಾಸರು, ದಮಯಂತಿಯು ವಿಜೃಂಭಣೆಯಿಂದ ಮಾಡಿದ ನಿಷಧನಗರದ ಪ್ರವೇಶವನ್ನು ವರ್ಣಿಸಿರುವರು. ನಳನ ಮಂತ್ರಿಗಳು ದಮಯಂತಿಯ ಕಡೆಗೆ ಬಂದು ನಿಷಧನಗರಕ್ಕೆ ಕರೆಯಲು ಬಂದಿರುವೆವೆಂದು ಹೇಳಿದರು. ಆಗ್ಗೆ ದಮಯಂತಿಯು ತಂದೆಯ ಅಪ್ಪಣೆ ಪಡೆದು ಹೊರಡುವಳು. ಅದರ ಸೊಗಸಾದ ವರ್ಣನೆಯು,

ಕೇಳಿ ಹರುಷಿತೆಯಾದಳವರಿಗೆ।
ಪಾಲಿಸಿದಳಾಭರಣವಸ್ತ್ರವ।
ಲೋಲ ಲೋಚನೆ ಬಂದು ತಂದೆಗೆ ನಮಿಸಿ ವಿನಯದಲಿ॥
ನಾಳೆ ಪಯಣವ ಮಾಡಿ ನಿಷಧ ನೃ।
ಪಾಲನಲ್ಲಿಗೆ ತನ್ನ ಕಳುಹೆನೆ।
ಬಾಲಕಿಯ ನುಡಿಗೇಳಿ ತೆಗೆದಪ್ಪಿದನು ಭೀಮನೃಪ॥

ತೆಗೆಸಿದನು ಭಾಂಡಾರದಲಿ ಬಗೆ ।
ಬಗೆಯ ವಸ್ತುವ ಸುಭಟರಿಂಗೆ ಝಗ ।
ಝಗಿಪ ಹೊನ್ನಾಯುಧವ ನವರತ್ನಗಳ ತೊಡಿಗೆಗಳ ॥
ಸುಗುಣೆಯರು ಮೊದಲಾದ ಪರಿವಾ ।
ರಗಳಿಗಿತ್ತನು ಪಯಣದಲಿ ತೇ ।
ರುಗಳ ಶೃಂಗರಿಸಿದನು ಬಿರುದಿನ ಸಿಂಧಗಳ ನೆಗಹಿ ॥

ಬಿಗುಹನೇರಿಸಿ ಹಯಗಳನು ರೆಂ ।
ಚೆಗಳ ಹಮ್ಮಿದರಾನೆಯಲಿ ಸ ।
ತ್ತಿಗೆಗಳನು ಪಲ್ಲೈಸಿದರು ಮೇಲೆಸೆವ ಕಳಶದಲಿ ॥
ಸೊಗಸುದೋರುವ ಭಟರ ನೆರೆಕೈ ।
ದುಗಳ ಹೊರಹಿನನೃಪರ ಬಳಿಯಲಿ ।
ನೆಗಹಿ ಬೀಸುವ ಚೌರಿಗಳ ಸಂಭ್ರಮದೊಳೊದಗಿದರು ॥

ಮಣಿರಥಂಗಳ ನಡುವೆ ಸುಳಿವಂ ।
ದಣಿದ ರಾಯರ ಮಧ್ಯದಲಿಯರ ।
ವಣಿಪ ಮತ್ತು ಗಜಂಗಳಲಿ ಮಾವುತರ ಕಳಕಳದ ॥
ಕುಣಿವ ತೇಜಿಯ ರಾವುತರ ಸಂ ।
ದಣಿಗಳಲಿ ಚತುರಂಗ ಬಲವಿ ।
ಟ್ಟಣಿಸಿ ನಡೆದುದು ಸಾಲುಸತ್ತಿಗೆಗಳ ವಿಡಾಯದಲಿ ॥

ನಾರಿಯರ ಸಂದಣಿಯು ನೆರೆದುದು ।
ತೇರಿನಲಿ ಕೆಲವರಂದಣದಿ ಕೆಲ ।
ರೇರಿದರು ವಾಜಿಗಳ ಗಜಕಂಧರದ ಗದ್ದುಗೆಯ ॥
ಸೇರಿ ನಡೆದರು ಮುಂದೆ ಘನಗಂ ।
ಭೀರಭೇರೀಪಣವ ವಾದ್ಯವು ।
ಭೋರಿಡಲು ಹೊರವಂಟಳಂಗನೆ ಸಕಲ ವಿಭವದಲಿ ॥

ಬಂದಳಾದಮಯಂತಿ ದೇವ ಮು ।
ಕುಂದ ರಕ್ಷಿಸು ಎನುತ ತನ್ನಯ ।
ನಂದನರ ಸಹಿತೇರಿದಳು ಮಣಿಮಯವರೂಥವನು ॥

ಹಿಂದೆ ಮುಂದಿಕ್ಕೆಲದ ನಾರೀ ।
ವೃಂದ ನಡೆಯಲು ಮನದ ಹರ್ಷಾ ।
ನಂದದಲಿ ನಡೆತಂದು ಹೊಕ್ಕಳು ನಿಷಧ ಪಟ್ಟಣವ ॥

ನೋಡುತಿರ್ದರು ಪುರಜನರು ನೆಲೆ ।
ಮಾಡದುಪ್ಪರಿಗೆಯಲಿಮಿಗೆಕರು ।
ವಾಡದೆಡೆಯಲಿ ಸೌಧಗಳ ಜಾಲಂದ್ರ ಶಿಖರದಲಿ ॥
ನೋಡುವರ ತಾನೋಡಿ ನಸುನಗು ।
ತಾಡುವರ ನೃತ್ಯದಲಿ ಗಾನವ ।
ಪಾಡುವರ ಕಂಡಲ್ಲಿ ನಲಿಯುತ ಬಂದಳರಮನೆಗೆ ॥

ಬಾಗಿಲಲಿ ರಥವಿಳಿಯೆ ಸತಿಗೆ ಸ ।
ರಾಗದಿಂದ ಪಣ್ಯಾಂಗನೆಯರು ।
ದ್ಯೋಗಿಸಿದರಾರತಿಯನೆತ್ತಿದರತುಳ ವಿಭವದಲಿ ॥
ಭೋಗಿಶಯನನ ಕರುಣ ನಿಮಗುಂ ।
ಟಾಗಿ ಸುಖಿಯಾಗೆಂದು ಹರಸಿದ ।
ರಾಗ ಮುನಿನಿಕುರಂಬವಕ್ಷತೆದಳಿದರಂಗನೆಗೆ ॥

ಹರಕೆಗಳ ಕೈಕೊಳುತ ಸತಿ ಬಂ ।
ದರಮನೆಯ ಹೊಕ್ಕಳು ನೃಪಾಲನ ।
ಚರಣ ಕಮಲಕೆ ನಮಿಸಿ ಪಡೆದಳು ಪತಿಯ ಚಿತ್ತವನು ॥
ಅರಸ ಕೇಳ್ಬೆ ನಿಷಧಪತಿ ನಿಜ ।
ತರುಣಿಸುತರೊಡಗೂಡಿ ಮಂಗಳ ।
ಕರದೊಳೊಪ್ಪಿದ ಸಕಲ ದೇವಾಮರರು ನಲಿದಾಡೆ ॥

---

## ೧೬ ನಳಚರಿತ್ರೆನೈಷಧಚರಿತೆಗಳು.

'ನೈಷಧ ಚರಿತಂ' ಎಂಬ ಸಂಸ್ಕೃತ ಮಹಾಕಾವ್ಯವನ್ನು ಶ್ರೀಹರ್ಷನೆಂಬ ಕವಿಯು ರಚಿಸಿರುವನು. ಆ ಗ್ರಂಥದಲ್ಲಿಯೂ ನಲೋಪಾಖ್ಯಾನದ ಕತೆಯೆ ಅಡಕವಾಗಿದೆ. ಆದರೆ ಅದು ಸಂಪೂರ್ಣವಾಗಿರದೆ, ದಮಯಂತಿಯ ಸ್ವಯಂವರವಾದೊಡನೆ ದೇವತೆಗಳು ತಮ್ಮ ತಮ್ಮ ಸ್ಥಳಗಳಿಗೆ ಹೋಗುವುದು, ಮತ್ತು ದಾರಿಯಲ್ಲಿ ಅವರನ್ನು ಕಂಡು ಕಲಿಯು ನಲನನ್ನು ಪೀಡಿಸಲು ಉಜ್ಜುಗಿಸುವುದು, ಇಷ್ಟಕ್ಕೆ ಆ ಕಾವ್ಯವು ಮುಗಿಯುತ್ತದೆ. ನಳಚರಿತ್ರೆಯನ್ನು ಬರೆಯುವ ಮುಂಚಿತ ಕನಕದಾಸರು ನೈಷಧ ಚರಿತೆಯನ್ನು ಅವಲೋಕಿಸಿದ್ದರೆಂದು ಹೇಳಬಹುದು. ಆ ಕಾವ್ಯಗಳಲ್ಲಿ ಅನೇಕ ಬಗೆಯಾಗಿ ವಿಚಾರ ಸಾದೃಶ್ಯವಿರುವುದು ಕಂಡು ಬರುತ್ತದೆ.

೧. ನಳನ ಚೆಲುವಿನ ವಾರ್ತೆಯನ್ನು ಕೇಳಿ ದಮಯಂತಿಯು ಮನಸೋತು ಅವನ ಚಿತ್ರವನ್ನು ಬರೆಯತೊಡಗುವಳು. ಈ ವಿಚಾರವು ನಲೋಪಾಖ್ಯಾನದಲ್ಲಿರುವುದಿಲ್ಲ. ಅದು ನಳ ಚರಿತ್ರೆನೈಷಧಚರಿತೆಗಳಲ್ಲಿ ಇರವುದುಂಟು.

ನೈಷಧ ಚರಿತೆಯಲ್ಲಿ,

ಪ್ರಿಯಂ ಪ್ರಿಯಾಂ ಚ ತ್ರಿಜಗಜ್ಜಯಶ್ರಿಯೌ ।
ಲಿಖಾಧಿಲೀಲಾಗೃಹಭಿತ್ತಿಕಾವಪಿ ॥
ಇತಿ ಸ್ಮ ಸಾ ಕಾರುತರೇಣ ಲೇಖಿತಂ ।
ನಲಸ್ಯ ಚ ಸ್ವಸ್ಯ ಚ ಸಖ್ಯೇಮೀಕ್ಷತೇ ॥

ನಳ ಚರಿತ್ರೆಯಲ್ಲಿ,

ವನಜ ಮುಖಿಯಾವಾರ್ತೆಯೆಲ್ಲವ ।
ಮನವೊಲಿದು ಕೇಳಿದಳು ಬಗ್ಗುತ ।
ನನೆದುದಂತಃಕರಣ ಹೆಚ್ಚಿನ ಚಿತ್ತವೃತ್ತಿಯಲಿ ॥
ನೆನೆದು ಬರೆದಳು ನಳನರೂಪವ ।
ನನುನಯದಿ ಚಿತ್ರವನು ಸಂ ।
ಜನಿಸಿತವನಲಿ ಮೋಹವೆಲೆ ಧರಣೀಶ ಕೇಳೆಂದ ॥

೨ ನಳನು ದಮಯಂತಿಯ ವಿಷಯದಲ್ಲಿ ವಿರಹವಿಹ್ವಲನಾಗಿ, ಆರಾಮದಲ್ಲಿ ಕಾಲಕಳೆಯುತ್ತಿರುವಾಗ ರಾಜಹಂಸವನ್ನು ಕಂಡು ಅದನ್ನು ಹಿಡಿದನು. ಆ ಹಂಸವು, "ನನ್ನನ್ನು ಕೊಲಬೇಡ, ನಿನಗೆ ಹಿತವಾದುದನ್ನೇ ಮಾಡುವೆನು. ನಿನ್ನನ್ನು ದಮಯಂತಿಯ ಮುಂದೆ ಪ್ರಶಂಸಿಸುವೆನು. ಆಕೆಯ ಮನಸ್ಸು ನಿನ್ನಲ್ಲಿ ನೆಟ್ಟು, ಆಕೆಯು ನಿನ್ನ ಪತ್ನಿಯಾಗುವಂತೆ ಮಾಡುವೆನು," ಎಂದು ಅಂದುದಷ್ಟೇ ಭಾರತದಲ್ಲಿ ಅಡಕವಾಗಿದೆ. ಆದರೆ ಕನಕದಾಸ ಶ್ರೀಹರ್ಷರ ಹಂಸವು ನುಡಿದುದು ಕೊಂಚ ಬೇರೆಯಾಗಿದೆ.

ನ ಕೇವಲಂ ಪ್ರಾಣಿವಧೋ ವಧೋ ಮಮ |
ತ್ವದೀಕ್ಷಣಾದ್ವಿಶ್ವಸಿತಾಂತರಾತ್ಮನಃ ||
ವಿಗರ್ಹಿತಂ ಧರ್ಮಧನೈರ್ನಿಬರ್ಹಣಾಂ |
ವಿಶಿಷ್ಯವಿಶ್ವಾಸಜುಷಾಂ ದ್ವಿಷಾಮಪಿ ||

ಪದೇಪದೇ ಸಂತಿ ಭಟಾ ರಣೋದ್ಭಟಾ |
ನ ತೇಷು ಹಿಂಸಾರಸ ಏಷ ಪೂರ್ಯತೇ ||
ಧಿಗೀದೃಶಂ ತೇ ನೃಪತೇಃ ಕುವಿಕ್ರಮಂ |
ಕೃಪಾಶ್ರಯೇ ಯಃ ಕೃಪಣೇ ಪತತ್ರಿಣಾ ||

ತವಾಪಿ ಹಾಹಾ ವಿರಹಾತ್ ಕ್ಷುಧಾಕುಲಾಃ |
ಕುಲಾಯ ಕುಲೇಷು ವಿಲುಠ್ಯತೇಷು ತೇ ||
ಚರೇಣಲಬ್ಧ್ವಾ ಬಹುಭಿರ್ಮನೋರಥೈ |
ರ್ಗತಾಃ ಕ್ಷಣೇನಾಸ್ಫುಟಿತೇಕ್ಷಣಾ ಮಮ ||

ಸುತಾಃ ಕಮಾಹೂಯ ಚಿರಾಯ ಚೂಂಕೃತೈಃ |
ವಿಧಾಯ ಕಮ್ರಾಣಿ ಮುಖಾನಿ ಕಂ ಪ್ರತಿ ||
ಕಥಾಸು ಶಿಷ್ಯಧ್ವಮಿತಿ ಪ್ರಮೀಲ್ಯ ಸ |
ಸ್ರುತಸ್ಯ ಸೇಕಾದ್ಬುಬುಧೇ ನೃಪಾಶ್ರುಣಃ ||

ಒದರಿ ಕುಣಿಯಲು ಹಸ್ತದೊಳಗದ |
ಕದಲದಂದದಿ ಪಿಡಿಯಲರಸನ |
ವದನಕಮಲವ ನೋಡಿ ಹೆದರಿತು ಬಹಳ ಭೀತಿಯಲಿ ||

ಹೃದಯ ಕರಗುವ ಮಾತನೆಂದುದು ।
ಮದಕರಿಗೆ ನೊರಜಂತರವೆ ಕೈ ।
ಸದರ ವೀರನು ಕೊಲವುದುಚಿತವೆಯೆಂದುದಾಪಕ್ಷಿ ॥

ಕರಿಗಳನು ಮುರಿದಿಡುವ ಸಿಂಹಕೆ ।
ನರಿಗಳಿದಿರೇ ತಾನು ನಿಮಗಂ ।
ತರವೆ ಸಾಕದಂತಿರಲಿ ಕಂಡವರೆಲ್ಲ ನಗದಿಹರೆ ॥

ಅರಿಭಯಂಕರ ಶತ್ರುಗಳ ಸಂ ।
ಹರಿಸುವುದು ನೃಪನೀತಿ ನಿನಗಿದು ।
ತರವೆ ಬಿಡು ಪರಹಿಂಸೆ ದೋಷವಿದೆಂದುದಾಪಕ್ಷಿ ॥

ಬಡಬಗೌತಣವಿಕ್ಕುವಡೆಯೊ ।
ಕ್ಕುಡಿತೆ ಹಾಲೇ ಮಂಜುಸರಿಯಲಿ ।
ಕೊಡನೆ ಕೆರೆ ತುಂಬುವುದೆ ನೃಪ ನೀನೆನ್ನ ಭುಂಜಿಸಲು ॥

ಒಡಲಿಗಾಪ್ಯಾಯನವೆ ಕೇಳಿಲೆ ।
ಪೊಡವಿಪತಿ ಬಿಡು ನನ್ನ ಮನೆಯಲಿ ।
ಮಡದಿಮಕ್ಕಳ ಗೋಳ ನೋಡೆಂದೊರಲಿತಾಪಕ್ಷಿ ॥

೩. ಸ್ವಯಂವರದ ಸಮಯದಲ್ಲಿ ನಳನ ರೂಪವನ್ನು ಧರಿಸಿದ ನಾಲ್ಕು ಜನರನ್ನು ಕಂಡು ದಮಯಂತಿಯು ವಿಸ್ಮಯಗೊಂಡು, "ತೇನ ಸತ್ಯೇನ ಮೇ ದೇವಾಸ್ತಮೇವ ಪ್ರದಿಶಂತು ಮೇ" ಎಂದು ಐದು ಪದ್ಯಗಳಿಂದ ದೇವತೆಗಳನ್ನು ಪ್ರಾರ್ಥಿಸಿದಳೆಂದು ನಲೋಪಾಖ್ಯಾನದಲ್ಲಿ ಹೇಳಿದೆ. ನಳ ಚರಿತ್ರೆನೈಷಧಚರಿತೆಗಳಲ್ಲಿ ಆ ಸಂದರ್ಭದೊಳಗೆ, ಸರಸ್ವತಿಯು ಸನ್ನಿವೇಶವಿದ್ದುದು ಕಂಡು ಬರುತ್ತದೆ.

ನೈಷಧ ಚರಿತೆಯಲ್ಲಿರುವುದೇನಂದರೆ, ಭೀಮನೃಪಾಲನು ಸ್ವಯಂವರದ ಮುಂಚಿತ ತನ್ನ ಕುಲದೈವತವನ್ನು ಪ್ರಾರ್ಥಿಸುವನು. ಕುಲದೇವರು ಭೀಮನೆಡೆಗೆ ಭಾರತಿಯನ್ನು ಕಳುಹುವನು.

**ತಚ್ಚಿಂತನಾನಂತರಮೇವ ದೇವಃ ।**
**ಸರಸ್ವತೀಂ ಸಸ್ಮಿತಮಾಹ ಸಸ್ಮ ॥**
**ಸ್ವಯಂವರೇ ರಾಜಕಯೋಗವೃತ್ತ ।**
**ವಕ್ತ್ರೀಮಿಹತ್ವಾಂ ಕರವಾಣಿ ವಾಣಿ ॥**

ಸರಸ್ವತಿಯು ಸ್ವಯಂವರದಲ್ಲಿ ಸಹಾಯಕಳಾಗಿ ಕೊನೆಗೆ ಇಂದ್ರಾದಿದೇವತೆಗಳೊಂದಿಗೆ ಸ್ವಸ್ಥಾನಕ್ಕೆ ಹೊರಟುಹೋಗುವಳು. ವಾಗ್ದೇವಿಯು ದಮಯಂತಿಗೆ ಬೀಳ್ಕೊಟ್ಟುದು,

**ಸ್ವಸ್ವಾಮರೈ ರ್ನೃಪತಿಮಂಶಮಮುಂ ತ್ಯಜದ್ಭಿ ।**
**ರಂಶಚ್ಛಿದಾಕದನಮೇವ ತದಾಧ್ಯಗಾಮಿ ॥**
**ಉತ್ಕಾಸ್ಮ ಪಶ್ಯತಿ ನಿವೃತ್ಯ ನಿವೃತ್ಯ ಯಾಂತೀ ।**
**ವಾಗ್ದೇವತಾಪಿ ನಿಜವಿಭ್ರಮಧಾಮಭೈಮೀಮ್ ॥**

ನಳಚರಿತ್ರೆಯೊಳಗಣ ವಿಷಯವೆಂದರೆ, ನಳನ ರೂಪವನ್ನು ಧರಿಸಿದ ನಾಲ್ಕು ಜನರನ್ನು ಕಂಡು ದಮಯಂತಿಯು ಹಿಂತಿರಿಗಿ ತಂದೆಯೆಡೆಗೆ ಬಂದಳು. ಭೀಮನೃಪನು ಸರಸ್ವತಿಯನ್ನು ಪ್ರಾರ್ಥಿಸಿ ಮಗಳಿಗೆ ಅವಳು ಸಹಾಯಕಳಾಗಬೇಕೆಂದು ಬೇಡಿಕೊಳ್ಳುವನು. ಭಾರತಿಯು ದಮಯಂತಿಗೆ ದೇವತೆಗಳನ್ನು ಕುರಿತು ಪ್ರಾರ್ಥಿಸಲು ಹೇಳುವಳು. ದಮಯಂತಿಯು ಅನುಗ್ರಹಿಸಬೇಕೆಂದು ಇಂದ್ರನಿಗೆ ಬೇಡಿಕೊಳ್ಳುವಳು. ಆ ಮೇಲೆ ಅವರು ತಮ್ಮ ತಮ್ಮ ನಿಜಸ್ವರೂಪವನ್ನು ಧರಿಸುವರು.

೪ ಕಲಿಪುರುಷನು ನಳನನ್ನು ಪೀಡಿಸಲು ಉಜ್ಜುಗಿಸುವನಷ್ಟೆ. ಭಾರತದಲ್ಲಿ ಕಲಿಯು ನಿಷಧದೇಶದಲ್ಲಿ ಹನ್ನೆರಡು ವರ್ಷಗಳ ವರೆಗೆ ದಾರಿಯನ್ನು ನೋಡಿ ಆಮೇಲೆ ಪ್ರವೇಶ ಮಾಡಿದನೆಂದು ಹೇಳಿದೆ.

ನೈಷಧಚರಿತೆಯಲ್ಲಿ ಇರುವುದೇನಂದರೆ, ಕಲಿಯು ಎಲ್ಲಿ ನೋಡಿದರೂ ಅವನಿಗೆ ನೆಲೆಯೇ ದೊರೆಯಲಿಲ್ಲ. ನೈಷಧನ ಸದಾರಾಚರಣೆ, ಅವನ ರಾಜ್ಯದೊಳಗಣ ಧರ್ಮಾಚರಣೆ ಇವೇ ಮೊದಲಾದವುಗಳ ಮೂಲಕ ಕಲಿಯು ಬಹಳ ನೊಂದುಕೊಂಡನು. ನೈಷಧನ ರಾಜ್ಯದ ಸೊಗಸಾದ ವರ್ಣನೆಯನ್ನು ನೈಷಧ ಚರಿತೆಯು ೧೭ ನೆಯ ಸರ್ಗದಲ್ಲಿ ಅವಲೋಕಿಸಬಹುದು. ಕನಕದಾಸರೂ ಕಲಿಗೆ ನಳನ ರಾಜ್ಯದೊಳಗಿನ ಧರ್ಮಾಚರಣೆಯ ಮೂಲಕ ಚಿರ

ಕಾಲದ ವರೆಗೆ ಅವಸರವು ದೊರೆಯಲಿಲ್ಲವೆಂದು ಹೇಳಿರುವರು. ಮೇಲಾಗಿ ಶ್ರೀಹರ್ಷನಂತೆಯೆ ನಿಷಧ ರಾಜ್ಯದ ವರ್ಣನೆಯನ್ನು ದಾಸರು ತಮ್ಮ ಚೆಲುವ ಕನ್ನಡದಲ್ಲಿ ಸಂಕ್ಷೇಪವಾಗಿ ಬರೆದಿರುವರು. ನಳಚರಿತ್ರೆಯಲ್ಲಿರುವುದು,

ಇಳೆಯುತವನೀತಳಕೆಖಿಳಕುಳ |
ತಿಳಕನೆಂದನು ತನ್ನ ಭಟರಿಗೆ |
ನಳನೃಪನ ಕಟ್ಟುವದಸಾಧ್ಯವಿದೆನಗೆ ಯಾತನಲಿ ||
ಒಲಿದಿಹಳು ಜಯವಧು ಸುಶೀಲತೆ |
ನೆಲಸಿಹುದು ಮನಸಿನಲಿ ದುರ್ಗುಣ |
ತಿಳಿಯನರಸನೆನುತ್ತ ಹೊಕ್ಕನು ನಿಷಧಪಟ್ಟಣವ ||

ಮಲ್ಲಿಗೆಯ ಬನ ಸಂಪಿಗೆಯ ಬನ |
ವೆಲ್ಲ ಕೇತಕೀ ಕುಸುಮಮಯ ಮೆಳೆ |
ಯೆಲ್ಲ ರುದ್ರಾಕ್ಷಿಗಳು ಸರಸೀರುಹದ ಕೊಳಗಳವು ||
ಬೆಲ್ಲವತ್ತಗಳಿಕ್ಷುದ್ರಾಕ್ಷಿಗ |
ಳೆಲ್ಲ ಖರ್ಜೂರಾದಿ ವಸ್ತುಗ |
ಳಲ್ಲದಿಲ್ಲ ವೃಥಾನೆಲನಿಲ್ಲ ನಳನ ರಾಜ್ಯದಲಿ ||

ಇಲ್ಲವೆನ್ನರು ಬೇಡಿದರೆ ಬಿಡ |
ರಲ್ಲಿ ಪಾಡಿನ ಪಂಥಗಳ ನುಡಿ |
ಯಲ್ಲಿಯನೃತವನಾಡರಲ್ಲಿಹ ಸತ್ಯನಿರ್ಮಳರು ||
ಎಲ್ಲರೊಳಗತಿಹಿತರು ಕ್ರೋಧಗ |
ಳಿಲ್ಲದಿಹ ಸದ್ಧರ್ಮ ಜೀವಿಗ |
ಳಲ್ಲಿ ಮೆರೆವರು ಸುಜನರಾನಳನೃಪನ ರಾಜ್ಯದಲಿ ||

ಪತಿಯುಡಿಗೆ ವಂಚಿಸರು ಸತಿಯರು |
ಸುತರು ಪಿತೃಗಳ ನುಡಿಗಳೆನುತ |
ವತಿಗಳೆಯರಾಚಾರವರ್ಣಾಶ್ರಮದ ಧರ್ಮದಲಿ ||
ಮತಿಯುತರು ಹರಿಭಕ್ತಿಭಾವ |
ವ್ರತನಿಯಮನೇಮದಲಿ ಜನಸ |
ಮ್ಮತದೊಳೆಸೆದೊಪ್ಪುವರು ನೈಷಧನೃಪನ ರಾಜ್ಯದಲಿ ||

ಅಲ್ಲಿ ತಿರುಗಿದ ಬೀದಿ ಬೀದಿ ಗ।
ಳಲ್ಲಿ ಪುರಜನವರಿಯದಂತಿರ।
ಲಲ್ಲಿ ಮಾಯಾರೂಪಿನಿಂದ ಪಿಶಾಚನಂದದಲಿ ॥
ಸಲ್ಲಲಿತ ಶಿವವಿಷ್ಣುಭಕ್ತರಿ।
ಗೆಲ್ಲ ನಯವಿದರಾದ ಸುಜನರ।
ನೆಲ್ಲ ಕಾಣುತ ಬಂದನರಮನೆಗಾಗಿ ಕಲಿರಾಯ ॥

ದಾಸರ ಈ ವರ್ಣನೆಯು ಶ್ರೀಹರ್ಷನ ಅನುವಾದವಲ್ಲ. ತಮಗೆ ಬೇಕುಬೇಕಾದಲ್ಲಿ ಅವರು ಉಚಿತವಾಗಿ ಕಂಡುದನ್ನು ಸೇರ್ಪಡಿಸಿಕೊಂಡುದುಂಟು. ನೈಷಧಚರಿತೆಯಲ್ಲಿ ಕಲಿಪುರುಷನು ತಾರೆಯ ಮರದಲ್ಲಿ ನೆಲಿಸಿದನೆಂದು ಹೇಳಿದೆ.

ನಿಷ್ಪದಸ್ಯ ಕಲೇಸ್ತತ್ರ ಸ್ಥಾನದಾನಾದ್ವಿಭೀತಕಃ।
ಕಲಿದ್ರುಮಃ ಪರಂ ನಾಸೀದಾಸೀತ್ಕಲ್ಪದ್ರುಮೋಽಪಿ ಸಃ ॥

ಈ ವಿಷಯದಲ್ಲಿ ದಾಸರು ಬರೆಯುವುದು,

ಮುಂದು ನೋಡಿದನಲ್ಲಿ ತೆಂಗಿನ।
ಮರಗಳುನ್ನತ ವಿವಿಧವೃಕ್ಷದ।
ಹೊರೆಗೆಯಲಿ ಕಣ್ಗೆಸೆವನಗರೋದ್ಯಾನವೀಥಿಯಲಿ ॥
ಉರುತರದೊಳಿಹರ್ಕಪತ್ರದ।
ತರುವಿನಗ್ರದೊಳಿರ್ದಬಹುದಿನ।
ವರಸಕೇಳ್ ಕಲಿಪುರುಷನಿತ್ತಲು ರಾಜಭವನದಲಿ ॥

ಕಲಿಪುರುಷನು ಮರದಲ್ಲಿ ನೆಲಿಸುವ ವಿಚಾರವು ನೈಷಧಚರಿತೆಯಲ್ಲಿ ಮೊದಲು ಮೊಳೆಕೆಗೊಂಡಿತೆಂಬುದನ್ನು ಓದುಗರು ಮನಗೊಳ್ಳಬಹುದು. ತಾರೆಯ ಮರದ ಸ್ಥಳದಲ್ಲಿ ದಾಸರು ಎಕ್ಕಿಯ ಗಿಡವನ್ನು ಸೇರಿಸಿರುವರು. ಕನಕದಾಸರ ಕಾಲದಲ್ಲಿ ಎಕ್ಕಿಯ ಗಿಡವೇ ಕಲಿಯ ಸ್ಥಾನ!

---

# ೧೭. ದಮಯಂತಿಯ ಸ್ವಯಂವರದ ವರ್ಣನೆ.

ಮಡದಿಯರು ಬಳಸಿದರು ಸುತ್ತಲು ।
ಹಡಪಚಾಮರಗಿಂಡಿಯೊಳಿಗ ।
ಡೊಡನಿರಲು ಬಂದಳು ಸಿತಾಬ್ಜಕೆ ಲಕ್ಷ್ಮಿಯಂದದಲಿ ॥
ಎಡಬಲದೊಳಿಹ ಕಂಚುಕಿಗಳು ।
ಗ್ಗಡದ ಪಾಯವಧಾರಿನಲಿ ಮುಂ ।
ಗುಡಿಯ ಸಖಿಯರ ಗಡಣದಲಿ ನಡೆತಂದಳಿಂದುಮುಖಿ ॥

ಕುಡಿತೆಗಂಗಳ ಸಿರಿಮುಡಿಯ ಬಡ ।
ನಡುವ ಸೆಳೆವತಿ ಬೆಡಗಿನಲಿ ಪೊಂ ।
ಗೊಡಮೊಲೆಯವೈಯಾರದುಡುಗೆಯ ನೆರಿಯ ಸಡಗರದ ॥
ತೊಡರ ಝಣಝಣರವದ ಮೆಲ್ಲಡಿ ।
ಯಿಡುವಗಮನದ ಭರದಿಕಿರುಬೆಮ ।
ರಿಡುತ ಬಂದಳು ಸತಿಯರೊಡನೆ ವಿವಾಹಮಂಟಪಕೆ ॥

ಅವನಿಪತಿ ನಿಜಕುವರಿಗೆಂದನು ।
ವಿವಿಧರತ್ನದ ಮುಕುಟವರ್ಧನ ।
ಭುವನಪತಿಗಳನೇಕವಿರಲಾಸಿಂಹಪೀಠದಲಿ ॥
ಯುವತಿ ನೋಡಿತ್ತರದೊಳಿಹ ನೃಪ ।
ನಿವಹದಲಿ ನೀಹಾಯ್ಕು ಮನವಿ ।
ದ್ದವನ ಕೊರಳಿಗೆನುತ್ತ ಕೊಟ್ಟನು ಪುಷ್ಪಮಾಲಿಕೆಯ ॥

ಬಂದಳಾದಮಯಂತಿ ನೃಪಸಭೆ ।
ಗಂದು ಹೊಕ್ಕಳು ಕೆಳದಿಯರು ಮುದ ।
ದಿಂದ ತೋರಿದರಲ್ಲಿಯಿವರಿವರೆಂದು ವಿವರಿಸುತ ॥
ಮುಂದೆಬರೆ ಕೈಕಂಬಿಯರು ಬಲು ।
ಸಂದಣಿಯ ಕೆಲಕೊತ್ತಿಸುತಲಿರ ।
ಲಿಂದುಮುಖಿ ನೋಡಿದಳು ಲಜ್ಜಾಭರದೊಳವನಿಪರ ॥

ಮಾಳವಾಧಿಪನೀತಮಗಧನೃ |
ಪಾಲನೀತನು ಮತ್ಸ್ಯಕುರುನೇ |
ಪಾಳನೀತನು ಕೋಸಲಾನ್ವಯನೀತ ಬರ್ಬರನು ||
ಚೋಳನೀತನು ಸಿಂಧುರಾಜನು |
ಶೀಲನೀತ ಕಳಿಂಗ ಕುಂತಳ |
ಪಾಲಕನ ನೋಡಿತ್ತಲಮರೇಶ್ವರನವೋಲಗವ ||

ಎನ್ನನೊಲಿದಿಹಳೆಂದು ಕೆಲಬರು |
ಎನ್ನನೋಡಿದರೆಂದು ಕೆಲಬರು |
ಗನ್ನದಿಂದೀಕ್ಷಿಸುತಲಿರ್ದರು ಕೆಲರುಹುಬ್ಬಿನಲಿ ||
ಸನ್ನೆ ಮಾಡಿದಳೆಂದು ಕೆಲಬರು |
ಬಿನ್ನಣದಿಮಿಗೆವೋರೆನೋಟದ |
ಕಣ್ಣಿನಿಂದೀಕ್ಷಿಸಿದಳೆಂದಾಡಿದರು ಕೆಲಕೆಲರು ||

ಬಾಯಬಿಂಕದ ನುಡಿಯ ಸವಿಗಳ |
ರಾಯರಾಡಿದರಲ್ಲಿ ಕಮಲದ |
ಳಾಯತಾಂಬಕಿ ನಳನರೂಪಿನ ನಾಲ್ವರಿರೆ ಕಂಡು ||
ಮಾಯವಿದು ತಾನರಿಯೆನಿವರನಿ |
ಜಾಯತವನೆಂದೆನುತ ಮರಿದಾ |
ವಾಯುಗತಿಯಲಿ ಬಂದು ಹೊಕ್ಕಳು ತನ್ನ ಮಂದಿರವ ||

ಕಂಡುಪೇಕ್ಷಿಸಿ ಬಂದಳಂಗನೆ |
ಮಂಡಲಾಧಿಪರೆಲ್ಲರನುನ ಯದಿ |
ಕಂಡು ಭೀಮನೃಪಾಲತನುಜೆಯ ಬಳಿಗೆ ನಡೆತಂದು ||
ಅಂಡಲೆದು ಬೆಸಗೊಂಡೊಡಂದಾ |
ಖಂಡಲನ ಮಾಯಗಳ ವಿವರಿಸೆ |
ಪಿಂಡಬುದ್ಧಿಯನುಳ್ಳನೃಪ ಚಿಂತಿಸಿದ ಭಾರತಿಯ ||

ವಾಣಿ ನೀರಜಪಾಣಿ ಬ್ರಹ್ಮನ |
ರಾಣಿ ಪನ್ನಗವೇಣಿ ಸುಕೃತ |
ಶ್ರೋಣಿ ಸುರನಿಕುರಂಬವಂದಿತೆ ಸತ್ಯಸಂಚಾರಿ ||

ಆಣಿಸ್ತ್ರೀಕುಲರನ್ನೆ ವರಗೀ ।
ರ್ವಾಣಿ ರಕ್ಷಿಸುರಕ್ಷಿಸೆಂದಾ ।
ಕ್ಷೋಣಿಪತಿ ಕೈಮುಗಿದು ಬೇಡಿದನಾಸರಸ್ವತಿಯ ॥

ನೆನೆಯಲಾಕ್ಷಣ ಬಂದಳಲ್ಲಿಗೆ ।
ವನಜನಾಭನ ಸೊಸೆ ಜಗತ್ಪಾ ।
ವನೆ ಸುರಾರ್ಚಿತೆ ದೇವಿಭಕ್ತಾಶ್ರಿತಜನೋದ್ಧಾರಿ ॥
ಜನಪನೀನಿಂದಿನಲಿಯೆನ್ನನು ।
ನೆನೆದಹದನೇನೆನಲು ಪದಯುಗ ।
ವನಜಕಾನತನಾಗಿ ಬಿನ್ನೈಸಿದನು ಭಾರತಿಗೆ ॥

ನಿಗಮನುತೆ ಗೀರ್ವಾಣಿ ರಕ್ಷಿಸು ।
ಮುಂಗುದರನು ಕರುಣದಲಿ ನೋಡುತ ।
ಲಗಣಿತದಿ ಭೂಭುಜರು ನೆರೆದಿರೆ ತಿಳಿಯಲರಿದೆಮಗೆ ॥
ಮಗಳ ಮನ ವಿಗಡಿಸಿತು ನಾಲ್ವರು ।
ಬೆಗಡು ಗೊಳಿಸಿದರೆನಲು ಭಾರತಿ ।
ನಗುತ ನುಡಿದಳು ಕರೆದು ದಮಯಂತಿಯುಳನುಪಚರಿಸಿ ॥

ದೇವ ಮಾಯವಿದೀಗ ಕೇಳೆಲೆ ।
ದೇವಿಯಿಂದ್ರನ ಭಜಿಸೆನಲು ಸಂ ।
ಭಾವನೀಯರ ಸಭೆಗೆ ಬಂದೆರಗಿದಳು ಭಕ್ತಿಯಲಿ ॥
ದೇವಕುಲಸಂಭವರು ರಕ್ಷಿಸಿ ।
ನೀವುಮಗಳೆಂದೆನ್ನ ಭಾವಿಸಿ ।
ಪಾವನರು ತರಳೆಯನು ಪತಿ ಕರಿಸೆಂದಳಿಂದುಮುಖಿ ॥

ಘಳಿಲನೆ ಪ್ರಚ್ಛನ್ನವೇಷವ ।
ಕಳೆದು ಯಮಪವಮಾನವರುಣರು ।
ಬಳಿಕ ಸುರಪತಿ ಮೆಚ್ಚಿ ದಮಯಂತಿಯನು ಕೊಂಡಾಡಿ ॥
ನಳನೃಪನ ಕರೆಸಿದರು ಹೂವಿನ ।
ಮಳೆಯ ಕರೆದರು ದೇವದುಂದುಭಿ ।
ಮೊಳಗೆಯರಸಿನ ಕೊರಳಿಗಿಟ್ಟಳು ಪುಷ್ಪಮಾಲಿಕೆಯ ॥

---

## ೧೮. ಭಕ್ತಿಸಾರ.

ಭಕ್ತಿಸಾರವು ಭಾಮಿನೀಷಟ್ಪದಿಯಲ್ಲಿ ಬರೆದಿದೆ. ಅದರಲ್ಲಿ ೧೧೦ ಪದ್ಯಗಳಿವೆ. ಪ್ರತಿಯೊಂದು ಪದ್ಯವು, "ರಕ್ಷಿಸು ನಮ್ಮನನವರತ" ಎಂದು ಮುಗಿಯುತ್ತದೆ. ಭಕ್ತಿಸಾರದಲ್ಲಿ, ಕನಕದಾಸರು, ಭಕ್ತಿ, ನೀತಿ, ವೈರಾಗ್ಯಗಳ ತುಟ್ಟತುದಿಯನ್ನು ತಲುಪಿರುವರೆಂದು ಅನ್ನಬಹುದು. ಈ ಕಾವ್ಯವು ಭರ್ತೃಹರಿಯ ನೀತಿವೈರಾಗ್ಯಶತಕಗಳ ಕುಲಕ್ಕೆ ಸೇರಿದುದು. ಗ್ರಂಥದ ಪ್ರಾರಂಭದಲ್ಲಿ 'ಸುರಪುರ ನಿಲಯ ಚೆನ್ನಿಗರಾಯ' ನ ಸ್ತುತಿಯಿದೆ.

ಶ್ರೀಯರಸ ಗಾಂಗೇಯನುತ ಕೌಂ ।
ತೇಯವಂದಿತಚರಣಕಮಲದ ।
ಛಾಯತಾಂಬಕರೂಪಚಿನ್ಮಯ ದೇವಕೀತನಯ ॥
ರಾಯರಘುಕುಲವರ್ಯ ಭೂಸುರ ।
ಪ್ರಿಯಸುರಪುರನಿಲಯಚೆನ್ನಿಗ ।
ರಾಯ ಚತುರೋಪಾಯ ರಕ್ಷಿಸು ನಮ್ಮನನವರತ ॥

ಭಕ್ತಿಸಾರವನ್ನು ಶ್ರೀಪುರದ ಆದಿಕೇಶವಮೂರ್ತಿಗೆ ಅಂಕಿತವಾಗಿ ದಾಸರು ಬರೆದಿದ್ದಾರೆಂದು ಒಂದು ಪದ್ಯದಲ್ಲಿದೆ,

ಬಾದರಾಯಣ ಪೇಳ್ದ ಭಾರತ ।
ಕಾದಿಕರ್ತನುದಾರ ಶ್ರೀ ।
ಪುರದಾದಿಕೇಶವಮೂರ್ತಿಗಂಕಿತಮಾದ ಚರಿತೆಯನು ॥

ಮೇದಿನಿಯೊಳಿದನಾರುಹೃದಯದೊ।
ಳಾದರಿಸಿಕೇಳ್ದಪರೊ ಮುದದಲಿ।
ಆದಿಮೂರುತಿ ವರಪುರಾಧಿಪನೊಲಿವನನವರತ॥

(ಮೊದಲಿನ ಹದಿನಾರು ಪದ್ಯಗಳು ದೇವರ ಸ್ತೋತ್ರಗಳನ್ನೊಳಕೊಂಡು, ಸಂಸ್ಕೃತಮಯವಾಗಿ ಇವೆ. ಮುಂದೆ ಅವು ತಿಳಿಯಾಗುತ್ತ ಕೊನೆ ಕೊನೆಯಲ್ಲಿ ತುಂಬ ಕನ್ನಡರೂಪವನ್ನು ಪಡೆಯುತ್ತವೆ. ಪದ್ಯಗಳು ಸುಲಭವಾಗಿ ಸರಲವಾಗಿ ಇವೆ. ಪ್ರತಿನಿತ್ಯ ಮುಖದಿಂದ ಪಠಿಸಲಿಕ್ಕೆ ತಕ್ಕವುಗಳಾಗಿವೆ. ಭಕ್ತಿಸಾರದಲ್ಲಿ ಕವಿಯ ವಾಣಿಯು ಗಂಭೀರವಾಗಿ, ನೇರವಾಗಿ ಹರಿಯುತ್ತದೆ. ಪದ್ಯಗಳೊಳಗೆ, ಅಲ್ಲಲ್ಲಿ, ಆಧ್ಯಾತ್ಮಿಕವಿಚಾರಕ್ಕೊಳಪಟ್ಟ ಕೆಲ ಪಾರಿಭಾಷಿಕ ಶಬ್ದಗಳು ತಲೆದೋರುವುದುಂಟು. ಸರ್ವಸಾಧಾರಣ ವಾಚಕರಿಗೆ ಅವು ಗಡಚಾಗಿ ತೋರುವುದು ಸ್ವಾಭಾವಿಕ. ಆದರೂ ಒಟ್ಟಿನ ಮೇಲೆ ಹೇಳಬೇಕಾದರೆ, ಕವಿಗಳಾದ ದಾಸರು, ಆಧ್ಯಾತ್ಮಿಕ ವಿಷಯವು ಸಹೃದಯರಾದ ಓದುಗರಿಗೆ ನಿಲುಕಬೇಕೆಂದು, ಆದಷ್ಟು ಸುಲಭವಾಗಿ ಬರೆದಿರುವರು.

ಪಾಶ್ಚಾತ್ಯಗ್ರಂಥಗಳಲ್ಲಿ ಕವಿಯ ತತ್ವಜ್ಞಾನದ ವಿಷಯವಾಗಿ ಬರೆಯುವ ರೂಢಿಯಿದೆ. ಆ ಪದ್ಧತಿಯಂತೆ, ದಾಸರ ತತ್ವಜ್ಞಾನವನ್ನು ಕುರಿತು ನಾಲ್ಕು ಮಾತು ಬರೆಯುವುದು ಉಚಿತವೆಂದು ತೋರಬಹುದು. ಆದರೆ, ಹಿಂದುಸ್ತಾನದಲ್ಲಿ ಯಾವನಾದರು ಇಂತಹ ಧಾರ್ಮಿಕ ಪಂಥಕ್ಕೆ ಸೇರಿರುವನೆಂದು ತಿಳಿದ ಕೂಡಲೆ, ಅವನ ತತ್ವಜ್ಞಾನದ ಸಂಬಂಧವಾಗಿ ಬರೆಯುವ ಕಾರಣ ಉಳಿಯುವುದಿಲ್ಲ. ವಿಶಿಷ್ಟವಾದ ಪಂಥಕ್ಕೆ ವಿಶಿಷ್ಟ ತತ್ವಜ್ಞಾನವು ಇದ್ದೇ ಇರುತ್ತದೆ. ಕನಕದಾಸರು ರಾಮಾನುಜರು. ದಾಸರ ತತ್ವಜ್ಞಾನವನ್ನು ತಿಳಿಯ ಬೇಕಾದರೆ, ರಾಮಾನುಜ ತತ್ವಗಳನ್ನೋದಬೇಕು. ಮೇಲಾಗಿ, ಭಾಗವತರ ಪಂಥಕ್ಕೆ ಸೇರಿದ ದಾಸರು, ತತ್ವಗಳ ವಿಷಯದಲ್ಲಿ ಅಷ್ಟೊಂದು ಆಗ್ರಹ ಹಿಡಿದುದು ಕಂಡು ಬರುವುದಿಲ್ಲ. ಕನಕದಾಸರಿಗೆ, ನೀತಿ, ಭಕ್ತಿ, ವೈರಾಗ್ಯಗಳಷ್ಟೇ ಮುಖ್ಯವಿಷಯ. ಇವುಗಳ ಸಂಬಂಧವಾಗಿ ಹಂಬಲವುಳ್ಳವರು ದಾಸರ ಭಕ್ತಿಸಾರವನ್ನು ಪಠಿಸಬೇಕು.)

ಬ್ರಹ್ಮರುದ್ರರಿಗಿಂತ ಹರಿಯು ಶ್ರೇಷ್ಠನು. ಅವನೇ ಪರಮಾತ್ಮನು.

ಹಸಿವರಿತು ತಾಯ್ತನ್ನ ಶಿಶುವಿಗೆ ।
ಒಸೆದು ಮೊಲೆಕುಡಿಸುವಂತೆ ನೀ ಪೋ ।
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು ॥
ಬಸಿರೊಳಗೆ ಬ್ರಹ್ಮಾಂಡಕೋಟಿಯು ।
ಪಸರಿಸಿದ ಪರಮಾತ್ಮನೀನೆಂ ।
ದುಸುರುತಿವೆ ವೇದಗಳು ರಕ್ಷಿಸು ನಮ್ಮನನವರತ ॥

ಹಗೆಯರಿಗೆ ವರವೀವರಿಬ್ಬರು ।
ತೆಗೆಯಲರಿಯರು ಕೊಟ್ಟವರಗಳ ।
ತೆಗೆದು ಕೊಡುವ ಸಮರ್ಥರಾರೀಜಗಕೆ ನಿನ್ನಂತೆ ॥
ಸುಗುಣರಿನ್ನಾರುಂಟು ಕದನವ ।
ಬಗೆದು ನಿನ್ನೊಳು ಜೈಸುವವರೀ ।
ಜಗದೊಳುಂಟೇ ದೇವ ರಕ್ಷಿಸು × × × ॥

ಪರಮಾತ್ಮನು ವೈರಿಗಳನ್ನು ನಾಶಪಡಿಸುವನು.

ಹಸ್ತಿವಾಹನನಾದಿಯಾದ ಸ ।
ಮಸ್ತದೇವನಿಕಾಯದೊಳಗೆ ಪ್ರ ।
ಶಸ್ತನಾವನು ನಿನ್ನವೊಲು ಶರಣಾಗತರ ಪೊರೆವ ॥
ಹಸ್ತಕಲಿತಸುದರ್ಶನದೊಳರಿ ।
ಮಸ್ತಕವ ನಿಳುಹುವ ಪರಾತ್ಪರ ।
ವಸ್ತುವಲ್ಲವೆ ನೀನು ರಕ್ಷಿಸು × × × ॥

ತನಗೆ ಅಹಿತ ಬಗೆದವರಿಗೂ ಪರಮಾತ್ಮನು ಹಿತ ಮಾಡುವನು.

ಸುಮನಸರ ವೈರದಲಿ ಕೆಲವರು ।
ಕುಮತಿಗಳು ತಪದಿಂದ ಭರ್ಗನ ।
ಕಮಲಜನ ಪದಯುಗವ ಮೆಚ್ಚಿಸಿ ವರವ ಪಡೆದಿಹರು ॥
ಸಮರಮುಖದೊಳಗುಪಮೆಯಲಿ ವಿ ।
ಕ್ರಮದಿ ವೈರವ ಮಾಡಿದವರಿಗೆ ।
ಅಮರ ಪದವಿಯನಿತ್ತೆ ರಕ್ಷಿಸು × × × ॥

ಪರಮಾತ್ಮನ ಮಾಯೆಯು ಅಗಾಧವಾದುದು.

ಬವರದಲಿ ಖತಿಗೊಂಡು ಗದೆಯೊಳು ।
ಕವಿದು ನಿನ್ನ ಸುತ್ರಾಯುಧನು ಹೊ ।
ಕ್ಕವಘಡಿಸಿ ಹೊಯ್ದಾಡಿ ತನ್ನಾಯುಧದಿ ತಾ ಮಡಿದ ॥
ವಿವರವೇನೂ ತಿಳಿಯೆ ನೀ ಮಾ ।
ಯವನು ನೀನೇ ಬಲ್ಲೆ ನಿನ್ನಾ ।
ಯವನು ಬಲ್ಲವರುಂಟೆ ರಕ್ಷಿಸು × × ×॥

ಪರಮಾತ್ಮನ ಮನವೊಲಿಸದೆ ಏನು ಮಾಡಿದರೂ ವ್ಯರ್ಥ.

ಏನುಮಾಡಿದಡೇನು ಕರ್ಮವ ।
ನೀನೊಲಿಯದಿನ್ನಿಲ್ಲವಿದಕನು ।
ಮಾನವುಂಟೇ ಭ್ರಮರಕೀಟನ್ಯಾಯದಂದದಲಿ ॥
ನೀನೊಲಿಯೆ ತೃಣಪರ್ವತವು ಪುಸಿ ।
ಯೇನು ನೀಪತಿಕರಿಸೆ ಬಳಿಕಿ ।
ನ್ನೇನು ಚಿಂತಿಸಲೇಕೆ ರಕ್ಷಿಸು × × × ॥

ಪರಮಾತ್ಮನಲ್ಲಿ ಭಕ್ತಿಯನ್ನಿರಿಸಿದರೆ ಕರ್ಮಬಂಧನವು ದೂರಾಗುವುದು.

ಎಷ್ಟು ಮಾಡಲು ಮನ್ನತಾ ಪಡ ।
ದಷ್ಟೆಯೆಂಬರು ಲೋಕದೊಳು ಮತಿ ।
ಗೆಟ್ಟ ಮಾನವರಾಡುತಿಹರಾ ಮಾತದಂತಿರಲಿ ॥
ಪಟ್ಟವಾರಿಂದಾಯ್ತು ಧ್ರುವನಿಗೆ ।
ಕೊಟ್ಟವರ ತಪ್ಪಿತೆ ಕುಚೇಲಗೆ ।
ಇಷ್ಟಬಾಂಧವ ನೀನು ರಕ್ಷಿಸು × × × ॥

ಪಾಪಿಯಾದ ಭಕ್ತನಿಗೂ ಪರಮಾತ್ಮನು ಮುಕ್ತಿಕೊಡುವನು.

ಹೆತ್ತ ವಗಳನು ಮದುವೆಯಾದವ ।
ನುತ್ತಮನು ಗುರುಪತ್ನಿಗಳುಪಿದ ।
ಚಿತ್ರಜನ ಮಾವನುಕೃತಘ್ನನು ನಿನಗೆ ಮೈದನನು ॥
ಹೊತ್ತುತಪ್ಪಿಸಿ ಕಾಮದಲಿ ಮುನಿಪೋತ್ರ ।
ಮನಮುಡದಿಯ ನೆರೆದವ ।
ಗಿತ್ತೆ ಕೈವಲ್ಯವನು ರಕ್ಷಿಸು × × × ॥

ಪರಮಾತ್ಮನು ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವನೆಂದು ತಿಳಿದ ಭಾಗವತರಲ್ಲಿ ಭಕ್ತಿ ಇಡಿ.

ಇಲ್ಲಿಹನು ಅಲ್ಲಿಲ್ಲವೆಂಬೀ ।
ಸೊಲ್ಲುಸಲ್ಲದು ಹೊರಗೊಳಗೆ ನೀ ।
ನಿಲ್ಲದಿಲ್ಲನ್ಯತ್ರವೆಂಬುದನೆಲ್ಲ ಕೆಲಕೆಲರು ॥
ಬಲ್ಲರಿಳೆಯೊಳು ಭಾಗವತರಾ ।
ದೆಲ್ಲರಿಗೆ ವಂದಿಸದ ಕುಜನರಿ ।
ಗಿಲ್ಲ ಸದ್ಗತಿ ನೋಡಿ ರಕ್ಷಿಸು × × × ॥

ಈ ಸಂಸಾರವು ಕ್ಷಣಭಂಗುರ, ಭಕ್ತಿಯಿಂದ ಬಾಳುವುದು ಲೇಸು.

ಕೇಳುವುದು ಕಡುಕಷ್ಟ ಕಷ್ಟದ ।
ಬಾಳುವೆಯ ಬದುಕೇನು ಸುಡುಸುಡು ।
ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು ॥
ಬಾಳಬೇಕೆಂಬುವಗೆ ನೆರೆ ನಿ ।
ಮ್ಮೊಳಗವ ಮಿಗೆ ಮಾಡಿ ಭಕ್ತಿಯೊ ।
ಳಾಳಿ ಬದುಕುವುದುಚಿತ ರಕ್ಷಿಸು × × × ॥

ಈ ಆಯುಷ್ಯದೊಳಗೆ ಭಕ್ತಿಗೆ ಸಾಕಷ್ಟು ಅವಧಿಯಿಲ್ಲ.

ವರುಷ ನೂರಾಯುಷ್ಯವದರೊಳ ।
ಗಿರುಳು ಕಳೆದೈವತ್ತನೈವ ।
ತ್ತರಲಿ ವಾರ್ಧಿಕ ಬಾಲ್ಯಕೌಮಾರದಲಿ ಮೂವತ್ತು ॥
ಇರದೆ ಸಂದುದು ಬಳಿಕ ಇಪ್ಪ ।
ತ್ತೊರುಷವದರೊಳಗಾದುದಂತಃ ।
ಕರಣ ನಿನ್ನೊಳು ತೋರಿ ರಕ್ಷಿಸು × × × ॥

ದೇಹದಲ್ಲಿ ಅಭಿಮಾನವನ್ನಿಡಕೂಡದು.

ಹೊಡಿದೆಲು ಮರ ಮಟ್ಟು ಮಾಂಸದ ।
ಗೋಡೆ ಚರ್ಮದ ಹೊದಿಕೆ ನರಗಳ ।
ಕೂಡೆಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು ॥

ಬೀಡು ತೊಲಗಿದ ಬಳಿಕಲಾ ಸುಡು |
ಗಾಡಿನಲಿ ಬೆಂದುರಿವ ಕೊಂಪೆಯ |
ನೋಡಿ ನಂಬಿರಬಹುದೆ ರಕ್ಷಿಸು × × × ||

ಸತ್ತವರಿಗಳಲೇಕೆ ? ತನ್ನನು |
ಹೊತ್ತವರು ಹೆತ್ತವರುಗಳು ತಾವ್ |
ಸತ್ತುಹೋಗುವರಲ್ಲದುಳಿವರೆ ? ಮರುಗಲೇಕಿನ್ನು ||
ಮೃತ್ಯುಬೆನ್ನಿಸೊಳಹುದು ತಾವಿ |
ನ್ನತ್ತು ಮಾಡುವುದೇನು ಪೂರ್ವದ |
ತೆತ್ತಿಗನು ನೀನೀಗ ರಕ್ಷಿಸು × × × ||

ಮಣ್ಣು ಮಣ್ಣಿನೊಳುದಿಸಲದರಲಿ |
ಮಣ್ಣು ಬೊಂಬೆಗಳಾಗಿ ರಂಜಿಸಿ |
ಮಣ್ಣಿನಾಹಾರದಲಿ ಜೀವವ ಹೊರೆದು ಉಪಚರಿಸಿ ||
ಮಣ್ಣಿನಲಿ ಬಂಧಿಸಿದ ದೇಹವ |
ಮಣ್ಣು ಕೂಡಿಸಬೇಡ ಜ್ಞಾನದ |
ಕಣ್ಣು ದೃಷ್ಟಿಯ ನಿತ್ತು ರಕ್ಷಿಸು × × × ||

ಮೊದಲು ಜನನವನರಿಯೆ ಮರಣದ |
ಹದನ ಕಡೆಯಲಿ ತಿಳಿಯೆನಾ ಮ |
ಧ್ಯದಲಿ ಸಿಕ್ಕಿನಾನಿಪುಣನೆಂಬುದು ಬಳಿಕ ನಗೆಗೇಡು ||
ಮೊದಲು ಕಡೆಮಧ್ಯಗಳ ಬಲ್ಲವ |
ಮದನ ಜನಕನು ನೀನು ನಿನ್ನಯ |
ಪದಯುಗವ ಬಯಸುವೆನು ರಕ್ಷಿಸು × × × ||

ಬಾಹ್ಯಾಡಂಬರಗಳಲ್ಲಿ ಅರ್ಥವಿಲ್ಲ; ಅಂತಃಶುದ್ಧಿ ಬೇಕು; ನಿಜ ಭಕ್ತಿ ಬೇಕು.

ತೊಲಗುವರು ಕಡೆಕಡೆಗೆ ತಾ ಹೊಲೆ |
ಹೊಲೆಯೆನುತ ಕಳವಳಿಸಿ ಮೂತ್ರದ |
ಬಿಲದೊಳಗೆ ಬಂದಿಹುದ ಕಾಣದೆ ಬರಿದೆ ಮನನೊಂದು ||

ಜಲದೊಳಗೆ ಮುಳುಗಿದರೆ ಹೊಲಗದು ।
ಹೊಲೆಗೆಲಸವೀದೇಹದೊಳು ನೀ ।
ನೆಲೆಸಿರಲು ಹೊಲೆಯುಂಟೆ ರಕ್ಷಿಸು × × × ॥

ಬರಿದಹಂಕಾರದಲಿ ತತ್ವದ ।
ಕುರುಹು ಕಾಣದೆ ನಿನ್ನ ದಾಸರ ।
ಜರೆದು ವೇದ ಪುರಾಣ ಶಾಸ್ತ್ರಗಳೋದಿ ಫಲವೇನು ॥

ನರರು ದುಷ್ಕರ್ಮದಲಿ ಮಾಡಿದ ।
ದುರಿತವಡಗಲು ನಿನ್ನನಾಮ ।
ಸ್ಮರಣೆಯೊಂದೇ ಸಾಕು ರಕ್ಷಿಸು × × × ॥

ಎಂಜಲೆಂಜಲು ಎಂಬರಾನುಡಿ ।
ಎಂಜಲಲ್ಲವೆ ವಾರಿಜಲಚರ ।
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನ್ನಿಸದೆ ॥

ಎಂಜಲೆಲ್ಲಿಯದೆಲ್ಲಿಯುಂಪರ ।
ರೆಂಜಲಲ್ಲವೆ ಬೇರೆಭಾವಿಸ ।
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ ॥

ಕನಕದಾಸರು ತಮ್ಮ ಈ ಕಾವ್ಯಕ್ಕೆ 'ಭಕ್ತಿಸಾರ' ಎಂದು ಕರೆದುದುಂಟು. ಕೊನೆಯ ಕೆಲವು ಪದ್ಯಗಳು ಪ್ರಕ್ಷಿಪ್ತವಾಗಿರಬಹುದೆಂದು ತೋರುತ್ತದೆ. ಕಾರಣವೇನೆಂದರೆ,

೧. ಭಕ್ತಿಸಾರದ ೧೮ನೆಯ ಪದ್ಯದಲ್ಲಿ ಹೇಳಿದ ವಿಷಯುವನ್ನೇ ಅವು ಮತ್ತೆ ಮತ್ತೆ ಉಚ್ಚರಿಸುತ್ತವೆ. ಆದರಿಂದ ಕಾವ್ಯಕ್ಕೆ ಪುನರುಕ್ತಿದೋಷವು ತಟ್ಟುವುದುಂಟು.

ಆ ಪದ್ಯವು,

ಭಕ್ತಿಸಾರದ ಚರಿತೆಯನು ಹರಿ ।
ಭಕ್ತರಾಲಿಸುವಂತೆ ರಚಿಸುವೆ ।
ಯುಕ್ತಿಯಲಿ ಬರೆದೋದಿದವರಿಷ್ಟಾರ್ಥಸಿದ್ಧಿಪುದು ॥

ಮುಕ್ತಿಗಿದು ನೆಲೆದೋರುವುದು ಹರಿ ।
ಭಕ್ತರನುಲಾಲಿಪುದು ನಿಜಮತಿ ।
ಭಕ್ತಿಗೊಲಿವಂದದಲಿ ರಕ್ಷಿಸು ನಮ್ಮನನವರತ ॥

೨. ದಾಸರ ಕಾವ್ಯ ಹಾಗೂ ಪದಗಳಲ್ಲಿ ಒಂದು ವೈಶಿಷ್ಟ್ಯವು ಕಂಡು ಬರುವುದು. ಕಾವ್ಯಗಳ ಕೊನೆಮೊದಲಲ್ಲಿ, ಪದಗಳ ಕೊನೆಯಲ್ಲಿ, ದಾಸರು ರಚಿಸಿದ ಸ್ಥಳದ ನಿರ್ದೇಶಮಾಡಿ, ಆದಿಕೇಶವ, ಇಲ್ಲವೆ ಆ ಸ್ಥಳದ ಅಧಿದೈವತ, ಇಲ್ಲವೆ ವಿಷ್ಣುವಿನ ಅವುದೊಂದು ಹೆಸರು ಹಾಕಿರುವ ವಾಡಿಕೆಯು ಇದ್ದಂತೆ ತೋರುತ್ತದೆ. ಭಕ್ತಿಸಾರದ ಕೊನೆಯ ಪದ್ಯಗಳಲ್ಲಿ ಅನೇಕ ಸ್ಥಳಗಳನ್ನೂ ಅಲ್ಲಿಯ ದೇವರನ್ನೂ ಸ್ಮರಿಸಿದುದು ಕಂಡು ಬರುತ್ತದೆ. ಅದು ದಾಸರ ಪದ್ಧತಿಯಲ್ಲವೆಂದು ಹೇಳಬಹುದು.

---

# ಕನಕದಾಸರ ವಿವಿಧ ವೈಶಿಷ್ಟ್ಯಗಳು.

ಕುವಲಯದಳನೇತ್ರೆ ಕೇಳು ಕೇವಲ ವೈ | ಷ್ಣವರಾಯರುಗಳಿರ್ದೆಸೆಯ ||
ಪವನ ಬಂದೆರಗೆ ಸನ್ನುತಿವೆತ್ತು ಪೇಳುವೆ | ಶ್ರವಣಕಾನಂದವೆಂದೆನಿಸೆ ||
ಹರಿಶರಣರಚ್ಚು ಬುಧಜನರಿಗೆ ಪೆಚ್ಚು | ದುರಿತವನಕೆ ಕಾಳ್ಕಿಚ್ಚು ||
ವಿರಹಿಗಳ್ಗೆ ಪುಚ್ಚು ವೀರರ್ಗೆ ನುಚ್ಚು ಕೇ | ಳ್ವರಿಗಿದು ತನಿಬೆಲ್ಲದಚ್ಚು ||

ಕನಕದಾಸ..

## ೧. ಕನಕದಾಸರ ಸಂಪ್ರದಾಯ.

ಕನಕದಾಸರು ವಾದಿರಾಜಸ್ವಾಮಿಗಳ ಶಿಷ್ಯರಾದುದರಿಂದ ಅವರು ಮಾಧ್ವಸಂಪ್ರದಾಯದವರಿದ್ದರೆಂದು ಇತ್ತಣ ಜನರಲ್ಲಿ ಪ್ರತೀತಿಯಿದೆ. ಆದರೆ, ಈ ಮೊದಲೆ ಹೇಳಿದಂತೆ, ಅವರು ಮೋಹನತರಂಗಿಣಿಯಲ್ಲಿ ವಾದಿರಾಜರ ಕಿಂತಲು ಮೊದಲು ರಾಮಾನುಜಗುರುಗಳಾದ ತಾತಾಚಾರ್ಯರನ್ನು ಕೊಂಡಾಡಿರುವರು. ಆದುದರಿಂದ, ದಾಸರ ಮತವನ್ನು ಗೊತ್ತುಪಡಿಸುವದು ಅವಶ್ಯಕವಿದೆ.

ತರಂಗಿಣಿಯ ಮೊದಲಿನ ಪದ್ಯದಲ್ಲಿ ಕಾಗಿನೆಲೆಯ ರಂಗನ ಸ್ತುತಿಯಿದೆ ಯಷ್ಟೆ. ಅನುಕ್ರಮವಾಗಿರುವ ಅದರ ಕೆಳಗಣ ಮೂರು ಪದ್ಯಗಳು,

ಶ್ರೀಮದ್ಗುರುರಾಯ ದುರಿತವಿಜೇಯ ದು। ಷ್ಕಾಮವಿಚ್ಛೇದನಾಹ್ಲಾದ ।
ತಾಮಸಗುಣನಾಶ ಸಾತ್ವಿಕೋಲ್ಲಾಸ ಶ್ರೀ। ರಾಮಾನುಜಮುನಿ ಶರಣು ॥

ಅರ್ಕನೊಳಾಟವೆ ತಮಕೆ ತಾರ್ಕ್ಷ್ಯನಕೂಡೆ । ಕಾರ್ಕೋಟಕ ಮೇಳವಿಪುದೆ ।
ತರ್ಕಕೆ ರಾಮಾನುಜರೊಳು ವಾದಿ ಸಂ। ಪರ್ಕನಿಲ್ವುದೆ ನಿಲ್ಲಲರಿಯ ॥

ಈ ರೀತಿ ಪೆಂಪುವಡೆದ ಸದ್ಗುರುಕರ । ವಾರಿಜೋದ್ಭವಶಿಷ್ಯಜನರ ।
ಪೇರಿಸಿ ನಾಲ್ವಗೆ ಫಲವೀವ ತಾತಾ । ಚಾರಿಯರಡಿಗೆರಗುವೆನು ॥

ರಂಗನ ಸ್ತುತಿಯಾದ ಕೂಡಲೆ, 'ಸದ್ಗುರುರಾಯರಾ' ದ ರಾಮಾನುಜಾ ಚಾರ್ಯರಿಗೆ ದಾಸರು ಶರಣೆಂದು ಅಂದರು. ಮುಂದೆ ರಾಮಾನುಜ ಸುತ ತ್ವಗಳ ಪೆರ್ಮೆಯನ್ನು ಹೊಗಳಲಾಯಿತು. ಇದರ ಮೇಲಿಂದ ದಾಸರು ರಾಮಾನುಜ ತತ್ವವನ್ನರಿತಿದ್ದರಷ್ಟೇ ಅಲ್ಲದೆ, ಆ ಮತವೇ ತರ್ಕಶುದ್ಧವಾದು ದೆಂದು ಅವರ ಮನವರಿಕೆ ಯಾಗಿತ್ತೆಂದು ತಿಳಿಯಬಹುದು. ಪೂರಸೆಯು

ಪದ್ಯದಲ್ಲಿ, ಆ ಕಾಲದಲ್ಲಿ, ರಾಮಾನುಜ ಗುರುಗಳಾಗಿದ್ದ, ತಾತಾಚಾರ್ಯರಿಗೆ ದಾಸರು ವಂದನೆಗಳನ್ನು ಅರ್ಪಿಸಿರುವರು. ಈ ಮೂರೂ ಪದ್ಯಗಳೊಳಗಣ ಮಥಿತಾರ್ಥವನ್ನು ಮನಗೊಂಡರೆ, ದಾಸರು ರಾಮಾನುಜ ಮತದವರಾಗಿದ್ದ ರೆಂದೆನ್ನುವದರಲ್ಲಿ ಸಂದೇಹವಿಲ್ಲ.

ಕೃಷ್ಣನ ದ್ವಾರಕೆಯಲ್ಲಿ ರಾಮಾನುಜ ಭೂಸುರರನ್ನೇ ದಾಸರು ಹೆಚ್ಚಾಗಿ ಹೊಗಳಿರುವರು,

ರಾಮಾನುಜವ್ಯಾಖ್ಯಾನಸುತತ್ವದ । ಭೂಮಿಸುರರು ಸಂದಣಿಸಿ ।
ಸಾಮಾಮ್ನಾಯ ಘೋಷಣೆ ವಿಷ್ಣುಪ್ರೀತ್ಯರ್ಥ । ಹೋಮವ ಮಾಳ್ಪರುತ್ಸವದಿ॥

ಸ್ವಯಂಪ್ರತಿಷ್ಠಿತರಾದ ಆ ರಾಮಾನುಜರು, ಇತರರ ಕಡೆಯಿಂದ ಅನ್ನವನ್ನು ಗ್ರಹಿಸದೆ, ತಾವೇ ದೊಡ್ಡವರೆಂದೂ ಶೀಲವಂತರೆಂದೂ ತಿಳಿದು, ತಾವೇ ಅಡಿಗೆಯನ್ನು ಮಾಡಿಕೊಂಡು ಊಟಮಾಡುತ್ತಿದ್ದರೂ, ದಾಸರು, ಅಂಥವ ರನ್ನು ಹೊಗಳಿರುವರು.

ಲೋಕದೊಳತಿಶೀಲವಂತ ಶ್ರೀವೈಷ್ಣವ । ರೇಕವ್ರತದ ಭೂಸುರರು ।
ಏಕಾಂತನಿಳಯದೊಳೇಕವಾಗಿರೆ ಸ್ವಯಂ । ಪಾಕವ ಮಾಡಿ ಭುಂಜಿಪರು ॥

ಇದಲ್ಲದೆ ಅಲ್ಲಲ್ಲಿ, ಶ್ರೀವೈಷ್ಣವರ ಅಗ್ಗಳಿಕೆಯನ್ನೇ ಹೇಳಲಾಗಿದೆ. ಬಾಣಾಸುರನ ಒಡ್ಡೋಲಗದಲ್ಲಿಯೂ ಶ್ರೀವೈಷ್ಣವರಿದ್ದರು,

ಚಿಂದಿಯ ತೆಗೆದು ಕೌಂಕುಳೊಳಿಟ್ಟು ನಿಟಿಲದೊ । ಳೊಂದಿದ ತ್ರೈಪುಂಡ್ರ ದ್ವಿಜರು ।
ಬಂದಿದೆ ತಾಕುತಾಕಲಿ ತಿದ್ದಿ ಕಳುಹುವೊ । ಡೆಂದಿಗುಂ ತೀರದೆಂಬಂತೆ ॥

ನಳಚರಿತ್ರೆಯಲ್ಲಿ ಭೀಮನೃಪನಿಂದ ದಮಯಂತಿಯನ್ನು ಹುಡುಕಲಿಕ್ಕೆ ಅಯೋಧ್ಯೆಗೆ ಕಳುಹಲಾದ ಸುದೇವನೆಂಬ ಬ್ರಾಹ್ಮಣನೂ, ಶ್ರೀವೈಷ್ಣವನೇ. ಅವನು "ಫಣೆಯೊಳಗೆ ಎಸೆವ ಮಟ್ಟೆಯನ್ನು ಇಟ್ಟು" ಕೊಂಡಿದ್ದನೆಂದು ಹೇಳಿದೆ.

ದಾಸರ ಕೃತಿಗಳಲ್ಲಿ, ಈ ರೀತಿಯಾಗಿ ಶ್ರೀವೈಷ್ಣವರಿಗೆ ಪ್ರಾಧಾನ್ಯವು ದೊರೆತುದಾದರೂ, ಕೃಷ್ಣನ ದ್ವಾರಕೆಯಲ್ಲಿ ಮತತ್ರಯದೆಲ್ಲರಿಗೂ ಸ್ಥಾನವಿದೆ.

ಘನಪಟ್ಟೆನಾಮದೆ ತಿರುಚೂರ್ಣಗೋಪಿಚಂ । ದನ ಪಂಚಮುದ್ರೆಗಳೊಡನೆ ।
ಮನಗೊಂಬ ಭಸಿತಗಂಧಾಕ್ಷತೆ ಭಾಳಲಾಂ । ಛನವೆತ್ತುದವನೀಸುರರು ॥

ಇಲ್ಲಿ ಮೂರು ಮತದ ಬ್ರಾಹ್ಮಣರ ಹಣೆಯಲ್ಲಿರುವ ಚಿನ್ಹಗಳಿಂದ ಅವರನ್ನು ಸೂಚಿಸಲಾಗಿದೆ. ರಾಮಾನುಜರು ಘನವಾದ ಪಟ್ಟೆನಾಮವನ್ನು ಹಚ್ಚಿ ಅದರ ಮಧ್ಯದಲ್ಲಿ ಕೆಂಪಾದ ತಿರುಚೂರ್ಣ ಹಚ್ಚುವರು. ಮಾಧ್ವರು ಗೋಪಿ ಚಂದನದಿಂದ ನಾಮ, ಶಂಖಚಕ್ರ ಮುಂತಾದ ಐದು ಮುದ್ರೆಗಳನ್ನು ಹಚ್ಚು ವರು. ಶಾಂಕರಮತಾನುಯಾಯಿಗಳು ಭಸಿತಗಂಧಾಕ್ಷತೆಗಳನ್ನು ಧರಿಸುವರು. ಮತತ್ರಯದವರನ್ನು ಒಂದೇ ಶ್ಲೋಕದಲ್ಲಿ ವಿವರಿಸಿದುದಾದರೂ, ದಾಸರು, ಶ್ರೀವೈಷ್ಣವರನ್ನು ಮೊದಲು ಹೇಳಿದುದನ್ನು ಮರೆಯಕೂಡದು!

"ರಾಮಾನುಜ ಮತದಂತೆ, ವೈಕುಂಠದಲ್ಲಿ ಲಕ್ಷ್ಮೀಸಹಿತನಾದ ನಾರಾಯಣನು, ಗರುಡ, ಅನಂತ ಮೊದಲಾದ ನಿತ್ಯಸೂರಿಗಳಿಂದ (ಸಂಸಾರ ಬಂಧನವಿಲ್ಲದ ಜೀವರಾಶಿಗಳಿಂದ) ಸಮೇತನಾಗಿರುವನೆಂದೂ ಮುಕ್ತ ಜೀವಾತ್ಮರೆಲ್ಲರೂ, ಅಲ್ಲಿ, ಭಗವಂತನ ನಿತ್ಯಕೈಂಕರ್ಯ ಮಾಡುತ್ತ ನಿತ್ಯಾನಂದ ವನ್ನು ಅನುಭವಿಸುವುದೇ ಜೀವಾತ್ಮಸ್ವರೂಪವೆಂದೂ ಹೇಳಿದೆ. ನಿತ್ಯಸೂರಿ ಗಳಾದ ಗರುಡ ಅನಂತರು ಅನುಭವಿಸುವ ಆನಂದದಲ್ಲಿಯೂ ಮುಕ್ತ ಜೀವ ಗಳು ಅನುಭವಿಸುವ ಆನಂದದಲ್ಲಿಯೂ ತಾರತಮ್ಯವಿಲ್ಲ." ಗರುಡ ಅನಂತರು ಪರಮ ಭಾಗವತರು, ಆದುದರಿಂದ, ದಾಸರು, ಅವರಿಬ್ಬರಿಗೆ, ಒಂದೊಂದು ಪದ್ಯವನ್ನು ಬರೆದು, ಅವರಿಂದ ಕರುಣೆ ರಕ್ಷಣೆಗಳನ್ನು ಕೋರಿರುವರು.

ಅಗಣಿತಲೋಕಾದಿಲೋಕಂಗಳುದರದಿ। ಸೊಗಯಿಪ ನಾರಾಯಣನ।
ಹೆಗಲೊಳು ಹೊತ್ತು ಖೇಚರದೆ ಸಂಚರಿಸುವ। ಖಗರಾಜ ಕರುಣಿಪುದೆಮಗೆ॥
ವರದುಗ್ಧಾಬ್ಧಿಯ ಮಥನದಿಂ ತುಸುಮಾತ್ರ। ಗರಳವ ಬಿಡಲಾಕ್ಷಣದಿ।
ಸುರಮುಖ್ಯರ ಭೀತಿವಡಿಸಿದ ಧರಣೀ। ಧರ ಫಣಿರಾಜ ರಕ್ಷಿಪುದು॥

ಮೇಲಾಗಿ ದಾಸರು ತರಂಗಿಣಿಯಲ್ಲಿ ಗರುಡನ ಅದ್ಭುತ ಪರಾಕ್ರಮವನ್ನು ಹೇಳಲು ಒಂದು ಸಂಧಿಯನ್ನೇ ಮೀಸಲಾಗಿರಿಸಿರುವರು.

ಕನಕದಾಸರು ರಾಮಾನುಜಮತದ ಮಹತಿಯನ್ನು ಮನಗಂಡು ಅದನ್ನು ಸ್ವೀಕರಿಸಿದ್ದರೂ ಅವರಲ್ಲಿ ದುರಾಗ್ರಹವು ಎಳ್ಳಷ್ಟೂ ಇರಲಿಲ್ಲ. ತಮ್ಮ ಮೇಲೆ, ರಾಮಾನುಜ ಹಾಗೂ ಮಾಧ್ವ ಮತಗಳ ಗುರುಗಳ ಪರಿಣಾಮ ವಾಗಿದ್ದಿತೆಂದು ಅವರು ಪರ್ಯಾಯವಾಗಿ ಹೇಳಿರುವರು. ಹೆಂಡತಿಗೆ ಉತ್ತರ ವನ್ನೀಯುವಾಗ್ಗೆ, ತರಂಗಿಣಿಯಲ್ಲಿ ಒಮ್ಮೆ ಅಂದುದು,

ಕುವಲಯದಳನೇತ್ರೆ ಕೇಳು ಕೇವಲ ವೈ। ಷ್ಣವರಾಯರುಗಳಿರ್ದೆಸೆಯ।
ಪವನ ಬಂದೆರಗೆ ಸನ್ಮತಿವೆತ್ತು ಪೇಳುವೆ। ಶ್ರವಣಕಾನಂದವೆಂದೆನಿಸೆ ॥

ಎರಡು ದಿಕ್ಕುಗಳಲ್ಲಿರುವ ವೈಷ್ಣವರಾಯರೆಂದರೆ, ಪೂರ್ವದಿಕ್ಕಿನಲ್ಲಿರುವ ವಿಜಯನಗರದ ಶ್ರೀವೈಷ್ಣವಗುರುಗಳಾದ ತಾತಾಚಾರ್ಯರು ಮತ್ತು ಪಶ್ಚಿಮ ದಿಕ್ಕಿನಲ್ಲಿರುವ ಉಡುಪಿಯೊಳಗಿನ ಸೋದೆಯ ಮಠದ ವೈಷ್ಣವ ಗುರುಗಳಾದ ಶ್ರೀವಾದಿರಾಜರು. ದಾಸರು ಈ ಪದ್ಯವನ್ನು ಬರೆಯುವಾಗ್ಗೆ ಕಾಗಿನೆಲ್ಲಿಯಲ್ಲಿ ನೆಲಿಸಿದ್ದರೆಂಬುದನ್ನು ಮರೆಯಕೂಡದು.

ಕನಕದಾಸರ ಮಡದಿಯು 'ಸುಜ್ಞಾನವಧೂಟಿ.' ದಾಸರು ಪರ್ಯಾಯದಿಂದ ಹೇಳಿದ ವಿಷಯವನ್ನು ವಿಶದಪಡಿಸಬೇಕೆಂದು ತರಂಗಿಣಿಯೊಳಗೆ ಮತ್ತೊಂದೆಡೆಯಲ್ಲಿ, ಅವರಿಗೆ "ತ್ರಿವಿಕ್ರಮದಾಸಸ್ಯದಾಸ" ಎಂದು ಸಂಬೋಧಿಸಿದಳು. ದಾಸರಿಗೆ ದಿಗಿಲುಬಿದ್ದಿತು. ತಾವು ತಾತಾಚಾರ್ಯರ ಶಿಷ್ಯರೆಂದು, ಮೊದಲು ಹೇಳಿದ್ದಾಯಿತು. ದಾಸರು ವಾದಿರಾಜರ ಶಿಷ್ಯರಾಗಿದ್ದುದೂ ನಿಜ. ಆದರೆ, ಆ ಇಬ್ಬರೂ ಗುರುಗಳು ಅನುಸರಿಸುವ ಸಂಪ್ರದಾಯ ಬೇರೆ; ಮತ ಬೇರೆ. ದಾಸರು ಜಾಣಾಕ್ಷರು. ಸುಜ್ಞಾನವಧೂಟಿಯ ಗಂಡಂದಿರು. ಹೆಂಡತಿಯ ಪ್ರಶ್ನೆಗೆ ಯೋಗ್ಯವಾದ ಉತ್ತರಕೊಟ್ಟು ಅವಳನ್ನು ಸಮಾಧಾನಗೊಳಿಸಿದರು. ದಾಸರ ಉತ್ತರವೇನೆಂದರೆ, "ಗ್ರಂಥಾವತಾರದಲ್ಲಿ, ನಾನು ರಾಮಾನುಜ ಗುರುಗಳಾದ ತಾತಾಚಾರ್ಯರ ಶಿಷ್ಯನೆಂದು ಹೇಳಿದುದು ನಿಜ. ನೀನೆನ್ನುವಂತೆ, ನಾನು ಮಾಧ್ವಗುರುಗಳಾದ ವಾದಿರಾಜರ ಶಿಷ್ಯನಾದುದೂ ನಿಜ. ವಾದಿರಾಜರಷ್ಟೇಕೆ–ಅವರಂತೂ ದೊಡ್ಡವರೇ ಇರುವರು–ಬೇಕಾದವರಿರಲಿ; ಅವರು ಹರಿಶರಣರಿದ್ದರೆ ಸಾಕು; ಅವರ ಮತಗಳನ್ನೆಣಿಸುವವನಲ್ಲ; ಅವರ ಪಾದರಜವನ್ನು ನನ್ನ ನೆತ್ತಿಯಲ್ಲಿ ಧರಿಸಲಿಕ್ಕೆ ನಾನೆಂದೂ ಹೆದರುವವನಲ್ಲ. ಅದೂ ನನಗೆ ಸಂತೋಷದ ವಿಷಯ." ಮೋಹನತರಂಗಿಣಿಯೊಳಗೆ ಈ ಸಂದರ್ಭದಲ್ಲಿರುವ ಪ್ರಶ್ನೋತ್ತರ,

ನಕ್ರಕಂಟಕವನುತ್ತರಿಸಿ ಗಜೇಂದ್ರನ। ವಕ್ತ್ರವ ಶಿರ್ಕಣೆ ಗೈದ।
ಚಕ್ರಪಾಣಿಯ ಕೂರ್ತು ಕೃತಿವೇಳು ತನಗೆ ತ್ರಿ। ವಿಕ್ರಮದಾಸಸ್ಯದಾಸ ॥

ಹರಿಶರಣರ ಪಾದರಜವ ಮಸ್ತಕದಲ್ಲಿ। ಧರಿಸಿ ರಾಮಾನುಜಾಗಮವ।
ಸ್ಮರಿಸಿ ಮನೋನುರಾಗವನಾಂತು ಕೃತಿಯ ಬಿ। ತ್ತರಿಸುವೆ ಕೇಳಾಯತಾಕ್ಷಿ ॥

ವಾದಿರಾಜರ ಶಿಷ್ಯರಾಗಿದ್ದರೂ ದಾಸರು ರಾಮಾನುಜ ಮತಾನುಯಾಯಿಗಳೇ ಇದ್ದರೆಂದು ಈ ಪದ್ಯವು ಸ್ಪಷ್ಟಗೊಳಿಸುತ್ತದೆ.

ಮಾಧ್ವರಲ್ಲಿ ವಾಯುದೇವತೆಗೆ ಬಹಳ ಮಹತ್ವವುಂಟು. ಹನುಮ, ಭೀಮ, ಮಧ್ವರು ವಾಯುವಿನ ಅವತಾರ. ವಾಯುವು ಬ್ರಹ್ಮ ಪದವಿಗೇರ ತಕ್ಕವನು. ಹೀಗಿದ್ದರೂ, ರಾಮಾನುಜಮತಾನುವರ್ತಿಗಳಾದ ದಾಸರು, ಮೋಹನತರಂಗಿಣಿಯಲ್ಲಿ, ವಾಯುವಿಗೆ ಗರುಡ ಅನಂತರಷ್ಟು ಮಹತ್ವ ಕೊಡದಿರುವುದು ಸ್ವಾಭಾವಿಕ. ವಾಯುವನ್ನು ಅನೇಕ ದೇವತೆಗಳೊಂದಿಗೆ ಪೋಣಿಸಿ ಒಂದು ಶ್ಲೋಕವಲ್ಲಿ ಹಾಕಿರುವುದು ಕಂಡು ಬರುತ್ತದೆ.

ಸುರಪತಿಶಿಖಿಕಾಲನಿಋುತಿವರುಣವಾಯು | ಹರಸಖನೀಶಾನಮುಖ್ಯ ।
ವರಮುನಿ ಮುನಿಜನರುಗಳೆನ್ನ ಚಿತ್ತಕೆ | ಪರಮಸಂತಸವ ಪಾಲಿಪುದು ||

ಬರಬರುತ್ತ ಕನಕದಾಸರ ಮೇಲೆ ಮಾಧ್ವರ ವಾಯುವಿನ ಪರಿಣಾಮ ವಾಗತೊಡಗಿದಂತೆ ತೋರುತ್ತದೆ. ನಲೋಪಾಖ್ಯಾನದಲ್ಲಿ ದಮಯಂತಿಯ ಸ್ವಯಂವರಕ್ಕೆ ಇಂದ್ರ ವರುಣ ಯಮ ಅಗ್ನಿಗಳು ಬಂದರೆಂದು ಹೇಳಿದೆ. ನಳಚರಿತ್ರೆಯಲ್ಲಿ ಇಂದ್ರ ಯಮ ವರುಣ ವಾಯುಗಳು ಬಂದರೆಂದು ಹೇಳಿದೆ. ಸ್ವಯಂವರಕ್ಕೆ, ನಲೋಪಾಖ್ಯಾನದಲ್ಲಿ, ಎಲ್ಲ ದೇವತೆಗಳು ಸಿದ್ಧರಿದ್ದರು. ನಳ ಚರಿತ್ರೆಯಲ್ಲಿ ಇಂದ್ರನೊಬ್ಬನೇ ವರನು; ವಾಯುವರುಣರು ನಿರೀಕ್ಷಕರು.

ಮೋಹನತರಂಗಿಣಿಯಲ್ಲಿಯೂ ನಳಚರಿತ್ರೆಯಲ್ಲಿಯೂ ದಾಸರು ನಭೋವಾಣಿಯ ಸಹಾಯವನ್ನು ಪಡೆದ ಸಂದರ್ಭಗಳುಂಟು. ಆದರೂ, ನಳ ಚರಿತ್ರೆಯೊಳಗೆ ಒಂದೆಡೆಯಲ್ಲಿ, ವಾಯುವಿಗೆ ವಾರ್ತಾಹಾರಕನ ಕೆಲಸ ಕೊಟ್ಟಿದುಂಟು. ಭೀಮನೃಪಾಲನ ಮನೆಯಲ್ಲಿ, ನಳದಮಯಂತಿಯರ ಸಂದರ್ಶನವಾದೊಡನೆ ನಳನು ದಮಯಂತಿಯ ಬಗ್ಗೆ ಕೊಂಚ ಸಂಶಯ ಗೊಂಡನು. ಅದಕ್ಕೆ ದಮಯಂತಿಯು ಯಮ ವರುಣ ಅನಿಲ ಮುಂತಾ ದವರೇ ಸಾಕ್ಷಿ ಎಂದೊಡನೆ,

ಇದಕೆ ಯಮವರುಣಾನಿಲೇಂದ್ರರು ।
ಮದನ ಜನಕನು ಸಾಕ್ಷಿಯೆನೆ ಮೇ ।
ಘದಲಿ ನುಡಿದನು ವಾಯು ನಳನೃಪನೊಡನೆ ಸತ್ಯವನು ||

ಚದುರ ಕೇಳ್ದಮಯಂತಿ ಲೋಕದ ।
ಸುದತಿಯೇ ತಿಳಿ ಲೋಕಪಾವನೆ ।
ಇದಕೆ ಸಂಶಯವೇಕೆ ಪಾಲಿಸು ಸತಿಯ ನೀನೆಂದು ॥

ಪವನನಾಡಿದ ನುಡಿಯ ಕೈಕೊಂ ।
ಡವನಿಪತಿ ಬಿನ್ನೈಸಿದನು ಕೈ ।
ತವಕದಲಿ ಕಲಿಯಿಂದ ನೊಂದೆನು ನಿಮ್ಮ ದರುಶನದಿ ॥
ಬವಣಿ ಹಿಂಗಿ ಕೃತಾರ್ಥನಾದೆನು ।
ಯೆನಗೆಯಿನ್ನೇನೆನುತ ಪಕ್ಷಿಯ ।
ಹವಣ ಮನದಲಿ ನೆನೆಯೆ ಬಂದುದು ದಿವ್ಯಮಯ ವಸನ ॥

ಕೊನೆಗೆ ಕನಕದಾಸರಿಗೆ ಮಾರುತನು ಬ್ರಹ್ಮಪದವಿಗೇರತಕ್ಕವನೆಂಬುದೂ ಮನವರಿಕೆಯಾದಂತೆ ತೋರುತ್ತದೆ. ಭಕ್ತಿಸಾರದಲ್ಲಿ ದಾಸರನ್ನುವುದು,

ವೀರರಾವಣನೊಡನೆ ಹೋರಿದ ।
ವೀರರಗ್ಗದ ಕಪಿಗಳ ।
ವರೊಳು ಮಾರುತ ನಮಗೇನು ಧನ್ಯನೊ ಬ್ರಹ್ಮಪಟ್ಟದಲಿ ॥
ಸೇರಿಸಿದೆ ನಿನ್ನಂತೆ ಕೊಡುವ ।
ದಾರಿಯಾವನು ತ್ರಿಜಗದೊಳಗಾ ।
ಕಾರಣದಿ ನಂಬಿದೆನು ರಕ್ಷಿಸು ನಮ್ಮನನವರತ ॥

## ೨. ಕನಕದಾಸರ ಸಮನ್ವಯವಾದ.

ಮತತ್ರಯದ ತತ್ವಗಳೂ ಅವುಗಳೊಳಗಿನ ಸಾಮ್ಯ ವೈಷಮ್ಯಗಳೂ ಪಂಡಿತರಿಗಷ್ಟೇ ತಿಳಿಯುವ ವಿಷಯ. ದೇವತಾರ್ಚನೆಯ ಪದ್ಧತಿ, ವ್ರತ ನಿಯಮ, ಭಕ್ಷ್ಯಾಭಕ್ಷ್ಯ, ಮತೀಯ ಲಾಂಛನ, ಇವೇ ಮೊದಲಾದ ಆಯಾ ಮತದ ಸಂಪ್ರದಾಯಗಳು ಸರ್ವಸಾಧಾರಣ ಜನರಲ್ಲಿ ರೂಢವಾದುದು ಕಂಡುಬರುತ್ತದೆ. ಕಾಲಾನುಸಾರವಾಗಿ ಮತಗಳ ತತ್ವಗಳು ಮಸಕುಮಸಕಾಗಿ, ಆಚರಣೆಯಲ್ಲಿ ಕಂಡುಬರುವ ಸಂಪ್ರದಾಯಗಳಷ್ಟೇ ಎದ್ದು ತೋರಲಾರಂಭಿಸಿದುವು.

ಶಾಂಕರ ಮತಾನುಯಾಯಿಗಳು ಶೈವರು. ಇತ್ತೀಚೆಗೆ ಅವರಲ್ಲಿ ಕೆಲವರು ಭಾಗವತ ಸಂಪ್ರದಾಯವನ್ನು ಅಂಗೀಕರಿಸಿದುದಾದರೂ, ಅವರೆಲ್ಲರೂ ಶೈವರೇ. ಅವರ ತತ್ವದಂತೆ ಹರಿಹರ ವಿರಿಂಚರಲ್ಲಿ ಭೇದವಿಲ್ಲ. ಆದರೂ ಶಿವನಿಗೆ ಹೆಚ್ಚು ಪ್ರಾಧಾನ್ಯ. ಶಿವನ ಉದ್ದೇಶವಾಗಿ ವ್ರತನಿಯಮಗಳನ್ನು ಆಸ್ಥೆಯಿಂದ ಕೈಕೊಳ್ಳುವರು. ವಿಷ್ಣು ಬ್ರಹ್ಮರ ವಿಷಯದಲ್ಲಿ ದ್ವೇಷಕ್ಕೆ ಎಳ್ಳಷ್ಟೂ ಎಡೆಯಿಲ್ಲ.

ರಾಮಾನುಜರಲ್ಲಿ ವಿಷ್ಣುವೊಬ್ಬನೇ ಪರದೈವತ. ಉಳಿದವರೆಲ್ಲರು ಅವನ ಕಿಂಕರರು. ವಿಷ್ಣುವಿನ ಆರಾಧನೆಯನ್ನು ಕೈಕೊಂಡು ರಾಮಾನುಜ ಮತೀಯನು, ನಿತ್ಯಸೂರಿಯಾಗಿ ಆ ಪರಮಾತ್ಮನ ಕಿಂಕರನಾಗಿ, ನಿತ್ಯಸೂರಿಗಳೊಡನೆ ವೈಕುಂಠದಲ್ಲಿ ಸಮಾನಸ್ಕಂಧನಾಗಿ ಬಾಳಲಿಕ್ಕೆ ಅಧಿಕಾರವುಳ್ಳವನು. ಆದುದರಿಂದ ವಿಷ್ಣುವೊಬ್ಬನೇ ಪೂಜೆಗೆ ಅರ್ಹನು.

ಮಾಧ್ವಮತವು ತಾರತಮ್ಯಪ್ರಚುರವಾದುದು. ಮಾಧ್ವರಲ್ಲಿ ವಿಷ್ಣುವೇ ಪರಾತ್ಪರನು. ಶಿವಬ್ರಹ್ಮರಿಗೆ ವಿಷ್ಣುವಿನ ಸ್ಥಾನವಿಲ್ಲ. ಇಷ್ಟೇ ಅಲ್ಲ. ಶಿವ ಬ್ರಹ್ಮರಿಗೆ ತಾರತಮ್ಯದ ತತ್ವದ ಅನುಸಾರವಾಗಿ ಬೇರೆ ಬೇರೆ ಸ್ಥಾನಗಳಿವೆ. ಭಕ್ತಿಪರನಾದ ಮಾಧ್ವನು, ತಾರತಮ್ಯಕ್ಕೊಳಪಟ್ಟ ತನ್ನ ವೈಯಕ್ತಿಕ ಜೀವದ ಅಧಿಕಾರದಂತೆ, ಮುಕ್ತಿ ಪಡೆಯುವನು. ಅವರವರ ತಾರತಮ್ಯಕ್ಕೆ ತಕ್ಕಂತೆ ಮಾಧ್ವನು ಶಿವಬ್ರಹ್ಮರಿಗೆ ಪೂಜೆಗೈಯ್ಯುವನು.

ನಿಜವಾಗಿ ಪರಿಸ್ಥಿತಿಯು ಈ ರೀತಿಯಾಗಿದ್ದರೂ ತಿಳಿಗೇಡಿಗಳಾದ ಕೆಲವು ಜನರು ಈ ದೈವತಗಳಲ್ಲಿ ದ್ವೇಷಬುದ್ಧಿಯನ್ನು ತಳೆದುದು ಕಂಡು ಬರುವುದುಂಟು. ಶೈವರು ವಿಷ್ಣುವನ್ನು ಹೀಯಾಳಿಸುವುದೂ ವೈಷ್ಣವರು ಶಿವನನ್ನು ದೂರಿಕೊಂಬುದೂ ಅಲ್ಲಲ್ಲಿ ತಲೆದೋರುವುದು. ಕನಕದಾಸರ ಕಾಲದಲ್ಲಿಯೂ ಈ ದುಷ್ಟಪದ್ಧತಿಯು ನೆಲೆಗೊಂಡಿದ್ದಿತೆಂದು ತೋರುತ್ತದೆ. ಆ ಕಾಲದ ಪುರಾಣ, ಕಾವ್ಯಗಳನ್ನೋದಿದರೆ ಈ ವಿಷಯವು ಮನದಟ್ಟಾಗುವದುಂಟು. ಶೈವರ ಗ್ರಂಥಗಳಲ್ಲಿ ಶಿವನಿಗೂ ಬ್ರಹ್ಮವಿಷ್ಣುಗಳಿಗೂ ಕಾಳೆಗವೆಸಗಿ ಅದರಲ್ಲಿ ಶಿವನು, ಬ್ರಹ್ಮವಿಷ್ಣುಗಳನ್ನು ಹೆಜ್ಜೆಜ್ಜೆಗೆ ಸೋಲಿಸಿ, ಪೊಡಮಡಿಸಿಕೊಂಡುದು ಕಂಡುಬರುತ್ತದೆ. ಅದರಂತೆ, ವೈಷ್ಣವರ ಹೊತ್ತಿಗೆಗಳಲ್ಲಿ ವಿಷ್ಣುವಿಗೂ ಶಿವನಿಗೂ ಯುದ್ಧ ನಡೆದು, ಅದರಲ್ಲಿ ಶಿವನು ಸೋತು, ವಿಷ್ಣುವಿನ ಅಧಿದೈವತದ ಅಧಿಕಾರವನ್ನು ಒಪ್ಪುವನು. ಈ ವಿಷಯವು ಶೈವಪುರಾಣಗಳಿಂದಲೂ ಭಾಗವತಾದಿ ಗ್ರಂಥಗಳಿಂದಲೂ ಬಂದುದಾದರೂ ದಾಸರ ಕಾಲದಲ್ಲಿ ಕನ್ನಡ ವಾಙ್ಮಯದಲ್ಲಿ ಅದು ಪ್ರಾಧಾನ್ಯ ಪಡೆದುದನ್ನು ಮರೆಯಕೂಡದು.

ಕನಕದಾಸರು ರಾಮಾನುಜರು, ಮಾಧ್ವಸಂಪ್ರದಾಯದ ಗಾಳಿ ಸೋಂಕಿದವರು, ಎಂದು ಹೇಳಲಾಯಿತು. ಆದುದರಿಂದ, ಅವರು ಹರಿಹರ ವಿರಿಂಚರಲ್ಲಿ ಯಾವ ದೃಷ್ಟಿಯನ್ನಿಟ್ಟಿದ್ದರೆಂಬುದನ್ನು ತಿಳಿದುಕೊಳ್ಳುವುದು ಮಹತ್ವದ ಕೆಲಸವಾಗಿದೆ.

ಶ್ರೀಮದ್ಭಾಗವತವು ಮಾಧ್ವರಾಮಾನುಜರಿಗೆ ಮಾನ್ಯಗ್ರಂಥ. ಭಾಗವತ ಗ್ರಂಥದಲ್ಲಿ ಶಿವನೇ, ಕೃಷ್ಣನು ಪರಮಾತ್ಮನೆಂದು ನುಡಿದು, ಅವನ ಸ್ತೋತ್ರ ಮಾಡಿದುದುಂಟು. ಕೃಷ್ಣನು ಶೋಣಿತಪುರವನ್ನು ಮುತ್ತಿದಾಗ ಅವನಿಗೂ ಶಿವನಿಗೂ ತುಮುಲ ಯುದ್ಧವಾಯಿತು.

**ಆಸೀತ್ಸುತುಮುಲಂ ಯುದ್ಧಮದ್ಭುತಂ ರೋಮಹರ್ಷಣಂ ।**
**ಕೃಷ್ಣಶಂಕರಯೋರಾಜನ್ ಪ್ರದ್ಯುಮ್ನಗುಹಯೋರಪಿ ॥**

ಕೃಷ್ಣನು ಶಿವನನ್ನು ಜೃಂಭಣಾಸ್ತ್ರದಿಂದ ಮೂರ್ಛೆಗೊಳಿಸಿದನು.

**ಮೋಹಯಿತ್ವಾತುಗಿರಿಶಂ ಜೃಂಭಣಾಸ್ತ್ರೇಣಜೃಂಭಿತಂ ।**
**ಬಾಣಸ್ಯಪೃತನಾಂ ಶೌರಿರ್ಜಘಾನಾಸಿಗದೇಷುಭಿಃ ॥**

ಬಾಣನಿಗೂ ಕೃಷ್ಣನಿಗೂ ಯುದ್ಧವೆಸಗಿ, ಕೃಷ್ಣನು ಬಾಣನ ಬಾಹುಗಳನ್ನು ಮರಗಳ ಟೊಂಗೆಗಳಂತೆ ಕಡಿಯತೊಡಗಿದನು. ಶಿವನು ಕಳವಳಗೊಂಡು ಕೃಷ್ಣನನ್ನುದ್ದೇಶಿಸಿ ಸ್ತುತಿ ಮಾಡಿದನು

ತ್ವಂಹಿ ಬ್ರಹ್ಮ ಪರಂಜ್ಯೋತಿರ್ಗೂಢಂ ಬ್ರಹ್ಮಣಿವಾಙ್ಮಯೇ ।
ಯಂ ಪಶ್ಯಂತ್ಯಮಲಾತ್ಮಾನ ಆಕಾಶಮಿವ ಕೇವಲಂ ॥

" ಬ್ರಹ್ಮನೇ ನೀನಾಗಿರುವಿ ನಿರ್ಮಲ ಅಂತಃಕರಣವುಳ್ಳ ಸಾಧುಗಳು ಆಕಾಶದಂತಹ ರೂಪದಿಂದಲೇ ನಿನ್ನನ್ನು ತಿಳಿದುಕೊಳ್ಳುವರು. "

ತವಾವತಾರೋಯಮಕುಂಠಧಾಮನ್ ।
ಧರ್ಮಸ್ಯಗುಪ್ತ್ಯೈ ಜಗತೋಭವಾಯ ॥
ವಯಂ ಚ ಸರ್ವೇ ಭವತಾನುಭಾವಿತಾ ।
ವಿಭಾವಯಾಮೋ ಭುವಾನಿ ಸಪ್ತ ॥

" ಎಲೈ, ಕೃಷ್ಣನೇ, ನಿನ್ನ ಅವತಾರವು ಧರ್ಮದ ರಕ್ಷಣೆಗಾಗಿ ಇದೆ. ಅಂದರೆ, ಜಗತ್ತಿನ ಉತ್ಕರ್ಷಕ್ಕಾಗಿ ಇದೆ. ನೀನು ನಮ್ಮನ್ನು ಸಂರಕ್ಷಿಸಿದರೆ, ನಾವು ಏಳು ಭುವನಗಳನ್ನು ಸಂರಕ್ಷಿಸಬಲ್ಲೆವು. "

ತ್ವಮೇಕ ಆದ್ಯಃ ಪುರುಷೋದ್ವಿತೀಯ ।
ಸ್ತುರ್ಯಃ ಸ್ವದೃಗ್ಘೇತುರಹೇತುರೀಶಃ ॥
ಪ್ರತೀಯಸೇಥಾಪಿ ಯಥಾವಿಕಾರಂ ।
ಸ್ವಮಾಯಯಾ ಸರ್ವಗುಣಪ್ರಸಿದ್ಧ್ಯೈ ॥

" ನೀನು ಅದ್ವಿತೀಯನಾದ ಆದಿಪುರುಷನು. ನಿನಗೆ ಸಮಾನರು ಮತ್ತಾರೂ ಇಲ್ಲ. ನೀನು ಮೋಕ್ಷಸ್ವರೂಪಿಯು; ಸ್ವಯಂಪ್ರಕಾಶಿತನು; ಎಲ್ಲರಿಗೆ ಶ್ರೇಷ್ಠನು. ಹೀಗಿದ್ದರೂ, ಎಲ್ಲ ವಿಷಯಗಳ ಪ್ರಕಾಶಕ್ಕಾಗಿ ಮಾಯೆಯ ಯೋಗದಿಂದ, ನೀನು ಪ್ರತಿಯೊಂದು ಶರೀರದಲ್ಲಿ, ಪ್ರತ್ಯಯಕ್ಕೆ ಬರುವಿ. "

ಅದೇ ಅಧ್ಯಾಯದ ಕೊನೆಯಲ್ಲಿ ಬರೆದಿರುವುದೇನಂದರೆ, "ಮುಂಜಾವಿನಲ್ಲೆದ್ದು, ಕೃಷ್ಣನ ಈ ಗೆಲುವು, ಹಾಗೂ ಕೃಷ್ಣಶಂಕರರ ಕಾಳಗ, ಇವುಗಳನ್ನು ಸ್ಮರಿಸುವವನಿಗೆ ಸೋಲು ಸಂಭವಿಸಲಾರದು. "

ಇಲ್ಲಿ "ಹರಿಸರ್ವೋತ್ತಮ" ತತ್ವವೇ ಪ್ರತಿಪಾದಿಸಲಾಗಿರುವುದೆಂಬುದು ಸೂರ್ಯನ ಪ್ರಕಾಶದಷ್ಟು ಸ್ಪಷ್ಟವಿದೆ.

ಮೋಹನತರಂಗಿಣಿಯಲ್ಲಿ, ಶೋಣಿತಪುರದ ಕಾಳೆಗದಕಿಂತಲೂ ಮುಂಚಿತ ಸಂಧಿಯ ಕೆಲ ಮಾತುಗಳು ಪ್ರಾರಂಭವಾಗುತ್ತವೆ. ಅಗ್ಗೆ ಕುಂಭಾಂಡನು ಬಾಣನಿಗೆ, ಕೃಷ್ಣನ ಸಂಬಂಧವಾಗಿ, ಅಂದುದೇನಂದರೆ,

" ಹರನೊಳು ವಿಶ್ವಾಸವನು ಬಿಡದಿರು ಚಕ್ರಧರನೊಳು ಬಕುತಿಯ ರಚಿಸು. " ಕುಂಭಾಂಡನ ಉಪದೇಶದ ಮಥಿತಾರ್ಥವೇನೆಂದರೆ, ಶಿವನನ್ನಷ್ಟೇ ಭಜಿಸಿದರೆ ಸಾಲದು. ವಿಷ್ಣುವಿನಲ್ಲಿಯೂ ಭಕ್ತಿಯನ್ನು ಇರಿಸುವುದು ಉಚಿತವು. ಬಾಣನು ಇದಕ್ಕೆ ಲಕ್ಷಕೊಡದೆ ಕೃಷ್ಣನ ಸಂಗಡ ಕಾಳೆಗ ನಡಿಸುವನು. ಬಾಣನ ೯೯೮ ತೋಳುಗಳು ಕತ್ತರಿಸಿದುವು. ಶಿವನು ಭಕ್ತನಿಗಾಗಿ, ಬಂದು, ಉಪದೇಶಿಸಿದುದು,

ಕೇಶವನೆಡೆಗೆನ್ನೆಡೆಗಾವನೋರ್ವನು | ದ್ವೇಷಬುದ್ಧಿಯ ಮಾಡಿದಡೆ |
ದೋಷ ಸಂಭವಿಸುವುದೆಂದು ಧೂರ್ಜಟಿ ದೈ | ತ್ಯೇಶಗೆ ವಿಸ್ತರಿಸಿದನು ||

ಒಬ್ಬ ದೇವರಲ್ಲಿ ಉತ್ಕಟ ಭಕ್ತಿಯನ್ನಿರಿಸಿ, ಮತ್ತೊಬ್ಬ ದೇವರಲ್ಲಿ ದ್ವೇಷ ತೋರಿಸುವುದರಿಂದ ಪಾಪಕ್ಕೆ ಗುರಿಯಾಗಬೇಕಾಗುತ್ತದೆಂಬುದನ್ನು ಶಿವನು ಹೇಳಿ, ಬಾಣನಿಗೆ ಕೃಷ್ಣನ ದ್ವೇಷ ಕಟ್ಟಿಕೊಳ್ಳಬಾರದೆಂದು ಉಪದೇಶಿಸಿದನು. ಬಾಣನಿಗೆ ಶಿವನಲ್ಲಿ ಉತ್ಕಟಭಕ್ತಿ. ಅವನು ಶಿವನ ವಾಕ್ಯಗಳನ್ನು ಮನಗೊಂಡನು. ಕೃಷ್ಣನ ವಿಷಯದಲ್ಲಿರುವ ಅವನ ದ್ವೇಷವು ಲಯವಾಯಿತು. ಶಿವನಂತೆಯೆ ಕೃಷ್ಣನಲ್ಲಿಯೂ, ಬಾಣನು ಭಕ್ತಿದಳೆದು, ತನ್ನ ಶಿರವನ್ನು ಬಾಗಿಸಿದನು.

ಫುಲ್ಲದಳಾಯತಾಕ್ಷ ನೀನತಿದೈವವೆಂಬುದ | ಬಲ್ಲ ಮತ್ಪಿತನು ನಾನರಿಯೆ |
ಹೊಲ್ಲೆಹವನು ತೀರ್ಕಣಿಸೆಂದುಭಯಪಾಣಿ | ಪಲ್ಲವದಿಂದೆ ವಂದಿಸಿದ ||

ಮುಂದೆ ಶಿವಶೌರಿಗಳಲ್ಲಿ ಭೇದವಿಲ್ಲವೆಂಬುದನ್ನು ಮನಗಂಡು, ಕೃಷ್ಣನ ಮೊಮ್ಮಗನಾದ ಅನಿರುದ್ಧನಿಗೆ ತನ್ನ ಮಗಳನ್ನು ಕೊಡಲು ವಾಗ್ದಾನ ಮಾಡಿದನು.

ಭೋಧಾರುಹನಾದ ಪರಮೇಶ ನಿಮ್ಮೊಳು | ಭೇದವಿಲ್ಲೆಂದು ಸೂಚಿಸಲು |
ರೋದನ ತೀರ್ಕಣಿಸಿತು ನಿಮ್ಮ ಮೊಮ್ಮಗೆ | ಮಾಧವ ಕೊಟ್ಟೆ ನಮತ್ಸುತೆಯ ||

ಶಿವನ ಸಂಬಂಧವಾಗಿ, ಕನಕದಾಸರಲ್ಲಿ, ರಾಮಾನುಜರ ಔದಾಸೀನ್ಯವಿಲ್ಲ! ಮಾಧ್ವರ ತಾರತಮ್ಯವಿಲ್ಲ! ಶಿವಶೌರಿಗಳ ಐಕ್ಯವನ್ನು ದಾಸರು ಮುಕ್ತಕಂಠವಾಗಿ ನುಡಿದಿರುವರು!

ಶಾಸ್ತ್ರಗಳ ಆಧಾರವಿಲ್ಲದ ಯಾವ ವಿಷಯಗಳಿಗೂ ದಾಸರ ಕಾಲದಲ್ಲಿ ಮಹತ್ವವಿರಲಿಲ್ಲ. ಕನಕದಾಸರೊ, ದೊಡ್ಡ ದೊಡ್ಡ ಪಂಡಿತರ ಸಂಗಡ ಇದ್ದವರು. ಅಂಥವರು, ಶಾಸ್ತ್ರದ ಬೆಂಬಲವಿಲ್ಲದೆ, ಯಾವುದಾದರೊಂದು ವಿಷಯವನ್ನು ಪ್ರತಿಪಾದಿಸುವುದು ಅಸಂಭವ.

ಬುಧರಾಮ್ನಾಯ ಶಾಸ್ತ್ರಾರ್ಥವ ತಿಳಿದು ನಾ | ನಿದ ಪೇಳ್ವೆ ಕೇಳಾಯ ತಾರ್ಕ್ಷಿ | ಎಂದು, ತರಂಗಿಣಿಯ ಪೀಠಿಕಾ ಸಂಧಿಯಲ್ಲಿಯೇ ಹೇಳಿರುವರು. ಆದುದರಿಂದ, ಶಿವಶೌರಿಗಳ ಐಕ್ಯವನ್ನು ಪ್ರತಿಪಾದಿಸುವ ಸರ್ವಸಮ್ಮತ ಗ್ರಂಥವು ಆವುದಾದರೂ ಇರುವುದೋ? ಅಹುದು ಇವೆ; ಹರಿವಂಶ ವಿಷ್ಣು ಪುರಾಣಗಳಲ್ಲಿ, ಇದೇ ಸಂದರ್ಭದೊಳಗೆ, ಹರಿಹರರ ಐಕ್ಯವನ್ನು ಹೇಳಿದೆ. ದಾಸರು ಆ ಆಧಾರವನ್ನು ಒದಗಿಸಿಕೊಂಡು, ತಮ್ಮ ಕಾಲದಲ್ಲಿ, ವ್ಯರ್ಥವಾಗಿ ವಾದಕ್ಕೆ ಗುರಿಯಾದ ಪ್ರಶ್ನೆಯನ್ನು, ಹಗುರಾಗಿ ಬಿಡಿಸಿದರು. ಶೈವವೈಷ್ಣವರ ನಡುವೆ ವಾದಭೂಮಿಯಾದ, ಹರಿಹರರ ಯೋಗ್ಯತಾಯೋಗ್ಯತೆಯ ವಿಷಯದಲ್ಲಿ, ಆ ದೇವರ ಭಕ್ತರು, ತಳೆದಿರುವ ಮೂದಲಿಕೆಯ ಮುಳ್ಳನ್ನು, ದಾಸರು, ತೆಗೆದೊಗೆಯಲಿಕ್ಕೆ ಮನಮುಟ್ಟಿ ಪ್ರಯತ್ನಿಸಿದರೆಂದು ಹೇಳಬಹುದು. ಇದೊಂದು, ದಾಸರು ನೇರವೇರಿಸಿದ ಸಮಾಜಸೇವೆಯು! ಇದುವೆ, ದಾಸರ ನವಸಂದೇಶ!

---

## ೩ ಕನಕದಾಸರ ರಸೋತ್ಪಾದನ ಶಕ್ತಿ.

"ವಾಕ್ಯಂ ರಸಾತ್ಮಕಂ ಕಾವ್ಯಂ" ಎಂದರೆ, ರಸವೇ ಕಾವ್ಯದ ಜೀವ, ಎಂದು ಲಾಕ್ಷಣಿಕರು ಅನ್ನುವುದುಂಟು. ಕವಿತಾಕಾಮಿನಿಗೆ ಅಲಂಕಾರಗಳು ವಸ್ತ್ರ-ಒಡವೆಗಳಂತೆ. ರಸಗಳು ಎಂಟು ವಿಧವಾಗಿ ಇವೆ. ಅವಾವುವೆಂದರೆ, ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ. ಇವುಗಳಿಗೆ ಶಾಂತವೆಂಬ ರಸವನ್ನು ಜೋಡಿಸಿ, ಅವುಗಳಿಗೆ ನವರಸಗಳೆಂದು ಕರೆಯುವುದುಂಟು. ಪ್ರತಿಯೊಂದು ಕಾವ್ಯದಲ್ಲಿ ಈ ಒಂಬತ್ತು ರಸಗಳಿರ ಬೇಕೆಂತಲ್ಲ. ಪ್ರಾಧಾನ್ಯವಾಗಿದ್ದ ರಸದಿಂದ, ಆ ಕಾವ್ಯಕ್ಕೆ ಇಂತಹ ರಸದ ಕಾವ್ಯವೆಂದು ಸಂಬೋಧಿಸಲಾಗುತ್ತದೆ.

ಮೋಹನತರಂಗಿಣಿಯಲ್ಲಿ ಶೃಂಗಾರ ವೀರರಸಗಳಿಗೆ ಪ್ರಾಧಾನ್ಯವಿದ್ದುದು ಕಂಡುಬರುತ್ತದೆ. ಇತರ ರಸಗಳು ಆ ಕಾವ್ಯದಲ್ಲಿ ಇಲ್ಲವೆಂತಲ್ಲ. ತರಂಗಿಣಿಯೊಳಗೆ ಹದಿನೆಂಟೂ ವರ್ಣನೆಗಳೊಂದಿಗೆ ಒಂಬತ್ತೂ ರಸಗಳು, ಹಾಸು ಹೊಕ್ಕುಗಳಾಗಿ ಪರಿಣಮಿಸಿರುಪ್ಪುವು. ಕಾವ್ಯದ ಜೀವಾಳವಾದ ರಸಕ್ಕೆ ದಾಸರು ಯೋಗ್ಯ ಸ್ಥಾನವನ್ನು ಕೊಟ್ಟಿರುವರೆಂದು ಹೇಳಬಹುದು. ಒಂಬತ್ತೂ ರಸಗಳನ್ನು ಇಲ್ಲಿ ಉದಾಹರಿಸುವುದಿಲ್ಲ. ಸಮಯೋಚಿತವಾಗಿ ಕಂಡಲ್ಲಿ ಒಂದೇ ರಸದ ಹೆಚ್ಚು ಅವತರಣಿಕೆಗಳನ್ನೂ ಕೊಡಬಹುದು.

೧. ಕನಕದಾಸರು ಶೃಂಗಾರರಸವನ್ನು ಮಿತಿಮೀರಿ ಬೆಳೆಸಿರುವರೆಂದು ಅನ್ನಬಹುದು. ಭಾಗವತರಾದ ದಾಸರು ಆ ರಸಕ್ಕೆ ಅಷ್ಟು ಪ್ರಾಧಾನ್ಯ ಕೊಟ್ಟುದು ಅನುಚಿತ, ಅಪ್ರಶಸ್ತವೆಂದು ಕೆಲ ಜನರ ಆಕ್ಷೇಪಣೆಯಿರ ಬಹುದು. ರಸವತ್ಕಾವ್ಯ ಬರೆಯುವ ದಾಸರ ಹೊಣೆ, ಅವರ ಕಾಲದ ಜನರ ಅಭಿರುಚಿ ಇವೇ ಮೊದಲಾದವುಗಳನ್ನು ಮನದಂದರೆ, ಆ ಆಕ್ಷೇಪಣೆಗೆ ಸ್ಥಾನವುಳಿಯುವುದಿಲ್ಲ ಕೃಷ್ಣರುಕ್ಮಿಣಿ, ರತಿಪ್ರದ್ಯುಮ್ನ, ರತಿಕಾಮ, ಉಷಾನಿದ್ಧರ ಶೃಂಗಾರವನ್ನು ಸವಿಯಬೇಕಾದರೆ ಮೋಹನತರಂಗಿಣಿಯನ್ನು ಪಠಿಸಬೇಕು. ಇಲ್ಲಿ, ಉಷೆಯ ಶೃಂಗಾರದ ಒಂದೇ ದೃಶ್ಯವನ್ನು ಕೊಡಲಿದೆ.

ಚಿತ್ರಲೇಖೆಯು ಅನಿರುದ್ಧನ ರೂಹು ತೆಗೆದು ಉಷೆಗೆ ತೋರಿಸಿ—

ಕದ್ದೈಸದೆ ನೋಡು ಸ್ಮರನ ಬಾಯೊಳಗುರ್ಚಿ । ಬಿದ್ದಂತೆ ಪಡಿಯಚ್ಚುವಡೆದ ।
ಮುಗ್ಧಾಕ್ಷಿಪದೆ ಕಮನೀಯರೂಪನನನಿ । ರುದ್ಧನ ನೋಡೆಂದಳಬಲೆ ॥

ಒಮ್ಮೊಂದೊಮ್ಮೆ ನೋಡಲು ಮೆಯ್ಯರೋಮವು | ಜುಮ್ಮೆಂದು ಮನದ ಮೂರ್ಛೆಯಲಿ |
ಹಮ್ಮೈಸಿದಳು ಚಿತ್ರದ ಮೇಲಣಾಸೆಯ | ಪೆರ್ಮೆಯನೇನ ಬಣ್ಣಿಸುವೆ ||
ಕಂದೆರೆದಳು ಪುನರಪಿ ನೋಡಿ ಚರಣಾರ | ವಿಂದದಿ ನೊಸಲ ಚಾಚಿದಳು |
ತಂದು ಬಲ್ಮಲೆಗೊತ್ತಿಕೊಂಡು ತಕ್ಕೈಸಿ ಹಾ | ಯೆಂದು ಸಂತಸದೆ ಹಿಗ್ಗಿದಳು ||
ಅಹುದಿಂದು ಪ್ರಾಣಕಾಂತನ ಚಿತ್ರವ ಕಂಡೆ | ಬಹುದುಃಖ ಬಿಡುಗಡೆಯಾಯ್ತು |
ಇಹುದಾವ ಪುರ ಪೆಸರೇನಾರ ಮಗನೆಂದು | ಸಹಜದೆ ಕೇಳಿದಳವಳ ||
ದ್ವಾರಕಾಪುರವರಾಧೀಶಕೃಷ್ಣನ ಸತ್ಕು | ಮಾರಕನಾತ್ಮಸಂಭವನ |
ತೋರ ಕುಚಾನ್ವಿತೆ ಕೇಳ್ ನಿನ್ನದುಃಖ ನಿ | ವಾರಕ ನಾಮಾನಿರುದ್ಧ ||

೨. ಕನಕದಾಸರ ಕಾವ್ಯಗಳಲ್ಲಿ ಯುದ್ಧದ ಸಂದರ್ಭಗಳು ವಿಶೇಷವಾಗಿ ದೊರೆಯುವುವು. ಇದಕ್ಕೂ ಆ ಕಾಲದ ಜನರ ರುಚಿಯೇ ಕಾರಣ. ದಾಸರ ಕಾಲದ ಇತಿಹಾಸವನ್ನೋದಿದರೆ, ವಿಜಯನಗರದವರು ರಾಕ್ಷಸದಂಗಡಿಯ ವರೆಗೆ, ಉತ್ತರೋತ್ತರ ಅಭಿವೃದ್ಧಿಯನ್ನು ಪಡೆಯುತ್ತಲೆ ಇದ್ದುದು ಕಂಡುಬರುವುದು. ಅದಕ್ಕೆ ವಿಜಯನಗರದ ಅರಸರ ಹಾಗೂ ಪ್ರಜೆಗಳ ಶೌರ್ಯವೇ ಕಾರಣೀಭೂತವಾದುದು. ಅದರ ಪಡಿನೆರಳು ಜನ ಜೀವನದಲ್ಲಿ ಬಿದ್ದುದರಿಂದ, ಅದು ಎಲ್ಲೆಲ್ಲಿಯೂ ಹೊರಹೊಮ್ಮುವುದು ಸ್ವಾಭಾವಿಕ. ಕನಕದಾಸರಂತಹ ಕವಿಗಳಂತೂ ವೀರರಸಕ್ಕೆ ಪ್ರಾಧಾನ್ಯ ಕೊಟ್ಟು, ಜನರನ್ನು ಹುರಿದುಂಬಿಸಿದುದರಲ್ಲಿ ಆಶ್ಚರ್ಯವಿಲ್ಲ! ತರಂಗಣಿಯು "ವೀರರ್ಗೆನುಚ್ಚು," ಆಗಿರುವುದೆಂದು ದಾಸರೇ ಹೇಳಿರುವರು. ಆ ಕಾವ್ಯದಲ್ಲಿ, ವಿಜಯನಗರದವರ ಯುದ್ಧಪ್ರಿಯತೆಯ ಪಡಿನೆರಳು ಪೂರ್ಣವಾಗಿ ಬಿದ್ದುದು ಕಂಡುಬರುತ್ತದೆ. ದಾಸರು ತರಂಗಿಣಿಯಲ್ಲಿ ವಿವಿಧ ತರಹದ ಯುದ್ಧಗಳನ್ನೂ ಕಾದಾಟಗಳನ್ನೂ ಕೊಟ್ಟಿರುವರು.

**ಶಂಬರ ಪ್ರದ್ಯುಮ್ನರ ದ್ವಂದ್ವ.**

ದರ್ಪಕ ದೈತ್ಯವಲ್ಲಭನೊಳಗಿದಿರಾಂತು | ನಿಪ್ಪಸರದೆ ತೋಳ ವೊದಲ |
ಚಪ್ಪಳೆಗೊಳಿಸಿ ದಂಡೆಯ ಹೂಡಿ ನಿಂದಿರು | ವೊಪ್ಪವನೇನು ಬಣ್ಣಿಪೆನು ||
ಹೊಗುವರು ಹೊರಡುವರೆಲ್ಲಿ ಸಿಕ್ಕಿದರಲ್ಲಿ | ಬಿಗಿವರು ಬಿನ್ನಣಿಸುವರು |
ತೆಗೆವರು ಕೆಳಗು ಮೇಲಾಗುವರೊಡನೊಡ | ನೆಗೆವರು ನಿಂದು ಕಾದುವರು ||

ಎಡಗೈಯ ಮುಷ್ಟಿಯ ತಾಣದೊಳಗೆ ಕೆ। ಯ್ಯಮಾಡಿ ತೂಗುವಪಾದವ್ವ
ಯದಿ।
ಪೊಡವಿ ತಲ್ಲಣಿಪಂತೆ ಖಳರಾಯ ಗರ್ಜಿಸಿ। ವ್ಯಡತಪಧ್ವಂಸಿಯ ತಿವಿದ ॥

ಪೆಟ್ಟಿಗೆ ಮೆಯ್ಯುಗ್ಗಡದೆಡಗೆಯ್ಯೊಳಣೆದು ಬೊ। ಬ್ಬಿಟ್ಟದಿರಾಂತು ರಕ್ಕಸನ।
ಗಟ್ಟಿವಾಳಿಕೆಯ ವಂಚಿಸಿನೊಸಲೊಡೆವಂತೆ। ಹೆಟ್ಟದ ವಜ್ರಮುಷ್ಟಿಯಲಿ ॥

ಕುಂಭಾಂಡ ಬಲರಾಮರ ಗದೆನೇಗಿಲಿನ ಕಾಳಿಗ.

ಪಡಿರಥವೇರಿ ಕುಂಭಾಂಡ ಮಂತ್ರೀಶ್ವರ। ಜಡಿದನು ವಜ್ರದ ಗದೆಯ।
ನಿಡಿದೋಳಿನಿಂದೆ ಕೃಷ್ಣಾಗ್ರಜಾತನ ಸಿರಿ। ಮುಡಿಯಲ್ಲಿ ಪೆಟ್ಟನಿಕ್ಕಿದನು ॥

ತಾಗಿದ ಗದೆಯ ಗಾಯವನೊಡ್ಡಿ ತೋರಿಯ। ನೇಗಿಲ ಕೊರಲ್ಗಿಕ್ಕಿ ಸೆಳೆದು।
ಬಾಗಿಸಿಕೊಂಡು ದೈತ್ಯಗೆ ಪೆಟ್ಟನಿಕ್ಕಿದ। ಮೂಗಿನೊಳ್ ನೆತ್ತರು ಸುರಿಯೆ ॥

ಸೊಕ್ಕಿದ ಕುಂಭಾಂಡ ರಣದೊಳು ರಕುತವ। ಕಕ್ಕಿದ ಕೈಯಿಚ್ಚೆಗೆಟ್ಟು।
ಸಿಕ್ಕಿದ ಸಿಕ್ಕಿದೆನಲಾಗಿ ಜುಣುಗಿವೆ। ಯ್ಯಿಕ್ಕಿದ ಗಗನಸ್ಥಳಕೆ ॥

ಗರುಡ ನವಿಲುಗಳ ಕಾದಾಟ.

ತಡೆದರೆ ತಡೆದೊದ್ದರೊದ್ದೆರಕೆಯೊಳಿಟ್ಟು। ಹೊಡೆದರೆ ಹೊಡೆದು ಡೊಕ್ಕರಸಿ।
ಕೆಡೆದರೆ ಕೆಡೆದುಗುರ್ಗಳೊಳೊತ್ತಿ ಭೀಕರ। ವಡೆದು ಹೊಯ್ದಾಡಿದುವೆರಡು॥

ಸಿಕ್ಕಲು ಸೆಳೆವರು ಸೆಳೆದೊಳಹುಗುವರು। ಕುಕ್ಕಲು ಕುಕ್ಕಿ ಕಡಿವರು।
ಹಕ್ಕಿಗಳರಸನು ಮೋರನ ನೆಲಕಿಕ್ಕಿ। ತಿಕ್ಕಿತು ಕೂಗಿ ಬೊಬ್ಬಿಡಲು ॥

ಗರುಡ ನಂದಿಗಳ ಹೋರಾಟ.

ಬಿದ್ದಡೆ ಬಿದ್ದುದಿಲ್ಲೆನುತಲಾಕ್ಷಣದೊಳ। ಗೆದ್ದು ಖಗೇಶ್ವರನೆದೆಯ।
ಕದ್ದೈಸದೆ ಬಂದು ತಿವಿದಗಾಯವ ತಾ। ಳಿದ್ದು ಕುಕ್ಕುರಿಸಿತುರ್ವಿಯಲಿ ॥

ರೋಷವಿಮ್ಮಡಿಸಲು ಪರಿತಂದು ವಿಹಗಾ। ಧೀಶ ತದ್ಭುಜವ ಚಪ್ಪರಿಸಿ।
ಈಶ ಲಕ್ಷ್ಮೀಶರು ಕೊಂಡಾಡುವಂತೆ ನಂ। ದೀಶ ತಿವಿದು ಬೊಬ್ಬಿರಿದ ॥

ಉರಿಮುಸಗಿತು ನಾಸಿಕದಲ್ಲಿ ಕೆಂಗಿಡಿ। ಸುರಿವಕ್ಷಿಯಿಂದೆ ನಂದೀಶ।
ಹರಿಹರಾದಿಗಳು ಕೀರ್ತಿಸೆ ಗರುಡನನೆತ್ತಿ। ಬಿರಿವಂತೆ ತಿವಿದು ಬೊಬ್ಬಿರಿದ ॥

ಜುಗುವರ ಹೊಕ್ಕುಹೋರುವರು ಬಿನ್ನಣಿಸಿ। ಬಿಗಿವರು ಕೈಕಾಲು ಬೆರಲ।
ಸಿಕ್ಕಿದರಾಯೆನ್ನಲೊಲ್ಲದೆ। ಸುಗುಣಾತ್ಮಕರು ಕಾದಿದರು ॥

ಕೆಡೆದನು ಖಗರಾಜ ನಂದೀಶ ನೆಗ್ಗಿದ। ನೊಡೆ ಮುಂದೆದ್ದ ರಾಕ್ಷಣದಿ।
ಆಡಹಾಯಿದಿರ್ವರು ಧುಪ್ಪು ಧುಪ್ಪೆಂಬಂತೆ। ಹೊಡೆದಾಡುತಿರ್ದರಾಹವದೆ ॥

ನಳಚರಿತ್ರೆಯೊಳಗಣ ನಳಪುಷ್ಕರರ ಕಾಳಿಗ.

ಹೊಕ್ಕರಾಹವದೊಳಗೆ ಮೊನೆಯಾ।
ಳಿಕ್ಕಲಿಸಿ ಬರೆಕಂಡು ಮುಝುರೇ।
ಚುಕ್ಕೆಗಳೆಲಾ ಎನುತ ಹೊದ್ದರು ಬೆರಸಿ ಪಟುಭಟರ ॥
ಇಕ್ಕಿದರು ಸುರಗಿಯಲಿ ಕರಿಗಳ।
ತಿಕ್ಕಿ ತಿವಿದರು ತೇರುಗಳ ಮುರಿ।
ದಿಕ್ಕಿ ಪರಿಘದೊಳೊರಸಿದರು ಕಾಲಾಳು ಮೂದಲಿಸಿ ॥

ಇಟ್ಟಣಿಸಿ ಬಹ ತೇಜಿಗಳ ನೆರೆ।
ತಟ್ಟಿ ಖಂಡಿಸಿ ಸುಭಟರನು ಬೆ।
ನ್ನಟ್ಟಿ ತಿವಿದರಾ ಮನ್ನೆಯರು ಹದವರಿದು ನಾಯಕರ ॥
ಹೊಟ್ಟು ಗುಟ್ಟಿದರರುಣಜಲ ಸಾ।
ಲಿಟ್ಟುದವನಿಯೊಳಮಮ ನೆರೆ ಜಗ।
ಜಟ್ಟಿಗಳು ಕಾದಿದರು ರಣದಲ್ಲಿ ಸುರರು ಬೆರಗಾಗೆ ॥

೩. ಕರುಣರಸದಲ್ಲಿಯೂ ದಾಸರ ಕೈವಾಡವು ಕಂಡುಬರುವುದುಂಟು. ದಾಸರ ಕಾವ್ಯಗಳಲ್ಲಿ, ಜನಪದವು ಮನಗೊಳ್ಳುವ ಸ್ವಾಭಾವಿಕ ಶೋಕರಸ, ಹಾಗೂ ಕವಿಸಮಯಕ್ಕೆ ಒಳಪಟ್ಟ ಕರುಣರಸ, ಇವೆರಡೂ ಇರುವುವು. ಕವಿಸಂಪ್ರದಾಯದ ಕರುಣರಸವನ್ನೋದಬೇಕಾದರೆ, ತರಂಗಿಣಿಯೊಳಗಿನ ರತಿವಿಲಾಪವು ತಕ್ಕ ಉದಾಹರಣೆಯೆಂದು ಹೇಳಬಹುದು. ಇಲ್ಲಿ ಸ್ವಾಭಾವಿಕ ಕರುಣರಸದ ಅವತರಣಿಕೆಗಳನ್ನು ಉದಾಹರಿಸಲಿದೆ.

ರುಕ್ಮಿಣಿಯು ಹೆತ್ತ ಹತ್ತು ದಿವಸಗಳಲ್ಲಿಯೇ, ಅವಳ ಕೂಸು ಮಟಮಾಯವಾಯಿತು. ರುಕ್ಮಿಣಿಯು ಕೃಷ್ಣನ ಪಟ್ಟದರಸಿಯು; ಬಹುದಿವಸಗಳಾದ ಮೇಲೆ ಕೃಷ್ಣನ ಅನುಗ್ರಹದಿಂದ ಪಡೆದ ಕೂಸು ಒಮ್ಮೆಲೆ ಇಲ್ಲದಂತಾಗಲು ಆಕೆಗೆ ಹೇಳಕೂಡದಷ್ಟು ಕ್ಲೇಶವಾಯಿತು. ಆಕೆಯು ಹಾಡಿಕೊಂಡು ಹಲುಬಿದುದು,

ಮಾಣದೆ ಮಣಿದೀಪ್ತಿಯ ಪಿಡಿದಾವಾವ | ತಾಣದೊಳರಸಿ ನಂದನನ |
ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆ | ಬಾಣತಾಗಿದ ಹುಲ್ಲೆಯಂತೆ ||

ಎಣ್ಣೆಯು ತಲೆಗೂಡಿದುದಿಲ್ಲ ನೊರೆವಾಲು | ಬೆಣ್ಣೆಯ ಮೆಲಿಸಿದುದಿಲ್ಲ |
ಕಣ್ಣವೆ ಹಳಚಿ ನೋಡಿದುದಿಲ್ಲ ಮಗನಲಾ | ವಣ್ಯವನೆಂದಳಲಿದಳು ||

ಮೊಲೆವಾಲು ತೊರೆದುಗುತಿವೆ, ಕೊ, ಲೋಚನವಾರಿ | ಸಲೆಹಾಯಿ ತೊಡೆವಾಯಿತಿದೆ, ಕೊ |
ನೆಲೆಗೊಳ್ಳದು ಚಿತ್ತ, ಮಗನೆ, ನೀನಿದಿರ್ವಂದು | ತಲೆದೋರಿಸೆಂದಳಲಿದಳು||

ಕರೆದೊಡೋಯೆನ್ನ ಬಾರದೆ ಕಂದ ನಿನ್ನಯ | ಸಿರಿಮೊಗಗಾಣದೆಂತಿರಲೊ |
ಪರಿತಾಪವ ಪುಟ್ಟಿಸಿ ಪೋಗಬಂದೆಯ | ಹರಿಕೊಟ್ಟ ವರ ಬಯಲಾಯ್ತು ||

ಹಾಲಿಗೆ ಹಂಬಲಿಸುವನಲ್ಲ ಬಿಡದಂಬೆ | ಗಾಲಿಕ್ಕಿ ತೊಳಲುವನಲ್ಲ |
ಕಾಲು ಬಲಿದು ದಟ್ಟಡಿಯಿಡುವವನಲ್ಲ | ಬಾಲನೆಲ್ಲಿಗೆ ಹೋದನವ್ವ ||

ರುಕ್ಮಿಣಿಯ ಈ ಶೋಕವು, ಮಗುವನ್ನು ಕಳೆದುಕೊಂಡ ಪ್ರತಿಯೊಬ್ಬ ಹೆತ್ತಮ್ಮನಿಗೆ ಹತ್ತುವುದುಂಟು.

ನಳನು ರಾಜ್ಯಸಿರಿಯನ್ನು ಪುಷ್ಕರನಿಗೆ ಸೋತು ದಮಯಂತಿಯೊಡನೆ ಹಳುವ ಸೇರಿದನು. ಆಕೆಯು ತನ್ನ ಬೆನ್ನು ಬಿಡುವವಳಲ್ಲವೆಂಬುದನ್ನು ಮನಗಂಡು, ಮಲಗಿರುವ ದಮಯಂತಿಯನ್ನು ತೊರೆದು ಹೊರಡುವನು. ನಳನ ಕಾಲುಗಳು ಎತ್ತಲೊಲ್ಲವು. ಆಗ್ಗೆ ಅವನು ಕಳವಳಗೊಂಡುದು,

ಮಡದಿಯಗಲಿದನಲ್ಲಿ ಹತ್ತೆಂ |
ಟಡಿಯ ದಾಂಟುವ ಮರಳಿ ನಿಜ ಸತಿ |
ಯೆಡೆಗೆ ತಿರುಗುವ ಚಂದ್ರಬಿಂಬಾನನೆಯ ನೀಕ್ಷಿಸುವ ||
ಅಡಸಿದತಿ ದುಃಖದಲಿ ಮೆಲ್ಲಡಿ |
ಯಿಡುವ ಸತಿಯನು ನೋಡಿ ಮನದು |
ಗ್ಗಡದ ಶೋಕದಿ ನಡೆದ ನಳನೃಪನೊಂದು ಯೋಜನವ ||
ಮರುಗುವುದು ಮನವೊಂದು ಕಂಗಳು |
ಮರಳಿ ನೋಡುವುದೊಮ್ಮೆ ಸತಿಯಳ |
ಯಿರವ ಕಾಣದೆ ಕಳವಳಿಕೆ ಬೀಡಾದುದಾಹೃದಯ ||

ಕರಗಿತರಸನ ಧೈರ್ಯಚಿತ್ತದಿ |
ಮುರಿದುದಗ್ಗದ ಮಹಿಮೆ ಶೋಕದ |
ಹೊರಿಗೆಯಲಿ ಕಾತರಿಸಿ ನಡೆದನು ನೃಪತಿ ಕೇಳೆಂದ ||

ನಿದ್ರೆಯಿಂದೆಚ್ಚತ್ತು ದಮಯಂತಿಯು ಶೋಕಿಸಿದುದು,

ಹಾ, ರಮಣ, ನಳನೃಪತಿ, ಹಾ, ರಣ |
ಧೀರ ಸದ್ಗುಣಹಾರ ರಿಪು ಸಂ |
ಹಾರ ನಿತ್ಯೋದಾರ ನಿರ್ಮಳ ಸತ್ಯಸಂಚಾರ ||
ಘೋರ ಕಾನನದೊಳಗೆ ನಂಬಿದ |
ನಾರಿಯನು ಬಿಸುಡುವರೆ ತನಗಿ |
ನ್ನಾರು ಗತಿ ಮೊಗದೋರೆನುತ ಹಲುಬಿದಳು ದಮಯಂತಿ ||

ಈ ಪದ್ಯದೊಳಗಿನ ಪ್ರತಿಯೊಂದು ಶಬ್ದವು ಅರ್ಥಗರ್ಭಿತವಾಗಿದೆ. ಧೀರೋದಾತ್ತನಾದ ನಳನು, ನಂಬಿದ ನಾರಿಯನ್ನು ಹಳುವಿನಲ್ಲಿ ತೊರೆದು ಹೋದುದು ಅನ್ಯಾಯವೆಂದು ತಿಳಿದ, ಓದುಗರು ದಮಯಂತಿಯಲ್ಲಿ ಸಹಾನುಭೂತಿಯನ್ನು ತಳೆದು ಆಕೆಯೊಡನೆ ಶೋಕದಲ್ಲಿ ಸಮರಸರಾಗುವರು! ಇಲ್ಲಿ ದಮಯಂತಿಯು ಕೋಪಗೊಂಡು ಗಂಡನಲ್ಲಿ ಅಪಶಬ್ದಗಳನ್ನು ಉಪಯೋಗಿಸಿದುದಿಲ್ಲ. ದಮಯಂತಿಯು ವಿಹ್ವಲೆಯಾಗಿ,

ಮುಡಿ ಚದುರಿ ಹುಡಿಯೊಳಗೆ ಹೊರಳುತ |
ಲೊಡಲನೀಡಾಡಿದಳು ಧರೆಯೊಳ |
ಗಡವಿಪಾಲಾಗೆಂದು ಪಡೆದಳೊ ತನ್ನ ನಿಜ ಜನನಿ ||
ಮಡದಿಯರು ತನ್ನಂತೆ ಲೋಕದೊ |
ಳೊಡಲ ತೆತ್ತವರುಂಟೆ ಶೋಕದಿ |
ಪೊಡವಿಪತಿ ಮುಖದೋರೆನುತ ಹಂಬಲಿಸಿದಳು ಪತಿಯ ||

ಈ ರೀತಿಯಾಗಿ ಹಲುಬುತ್ತ, ನಳನನ್ನು ಹುಡುಕುತ್ತ ಮುಂದೆ ಸಾಗುವಷ್ಟರಲ್ಲಿ ದಮಯಂತಿಯನ್ನು ಒಂದು ಹಾವು ಹಿಡಿದು ನುಂಗಲಾರಂಭಿಸಿತು. ಆಗ್ಗೆ ಅವಳು ಆರ್ತಸ್ವರದಿಂದ—

ಹಾ, ರಮಣ ನಳನೃಪತಿ ತನ್ನಾವ ।
ದಾರಿಗೊಪ್ಪಿಸಿ ಕಳೆದೆ ಹರಿಹರಿ ।
ಕ್ರೂರ ಸರ್ಪನ ಬಾಯ್ಗೆ ತುತ್ತಾದೆನೆ ಜಗನ್ನಾಥ ॥
ಆರಿಗೊರಲುವೆನಿನ್ನು ಪ್ರಾಣವ ।
ನಾರು ಕಾವವರಕಟ ಬಿಡಿಸೈ ।
ವಾರಿಜಾಕ್ಷಮುಕುಂದ ಸಲಹೆಂದೊರಲಿದಳು ತರಳೆ ॥

ದಮಯಂತಿಯ ದನಿಯನ್ನು ಕೇಳಿ ಒಬ್ಬ ಬೇಡನು, ಅಲ್ಲಿಗೆ ಬಂದು, ಹಾವಿನ ಬಾಯೊಳಗೆ ಸಿಲುಕಿದ ಆವಳನ್ನು ಬಿಡಿಸಿದನು. ದಮಯಂತಿಯ ದುಃಖವು ಇಷ್ಟಕ್ಕೆ ನಿಲ್ಲಲಿಲ್ಲ. ಆ ಬೇಡನು ಆಕೆಗೆ ತನ್ನೊಡನೆ ಒಗೆತನಗೈಯಲು ಕೇಳುವನು! ದಮಯಂತಿಯು ತವರಮನೆ ಮುಟ್ಟುವ ವರೆಗೆ ಅನುಭವಿಸಿದ ಸಂಕಟ ಪರಂಪರೆಗಳನ್ನು ಮನಗೊಂಡ ನಳಚರಿತ್ರೆಯ ಓದುಗನು ಕಣ್ಣೀರು ಸುರಿಸುವುದರಲ್ಲಿ ಆಶ್ಚರ್ಯವಿಲ್ಲ!

೪. ದಾಸರ ಕಾವ್ಯಗಳಲ್ಲಿ ನಗೆಗಾರಿಕೆಗೂ ಕೊರತೆಯಿಲ್ಲ. ಅವರ ಹಾಸ್ಯರಸವು ಹೊಗಳತಕ್ಕಂತಹದಿದೆ. ಪ್ರಾಣಿಗಳಸ್ವಭಾವ, ಹಾಗೂ, ಪುರಾಣ ಗಳೊಳಗಿನ ದೈವತಗಳ ವೈಶಿಷ್ಟ್ಯಗಳನ್ನು ಕಲೆಹಾಕಿ, ದಾಸರು, ಹಾಸ್ಯರಸದ ಸನ್ನಿವೇಶಗಳನ್ನು ಒದಗಿಸಿಕೊಂಡಿರುವರು. ಅವುಗಳಲ್ಲಿ, ಅಣಕವಾಡುಗಳು ಅಡಕವಾಗಿರುವುದರಿಂದ, ಹಾಸ್ಯರಸಕ್ಕೆ ಮತ್ತಿಷ್ಟು ಕಳೆಯೇರಿದೆ.

ಗರುಡನು, ನಂದಿಯನ್ನು ಸೋಲಿಸಿ ನಿಂದಿರಲು, ವಿಹಾಗಾಧಿಪತಿ ಯನ್ನು, ಗಣಪತಿಯು ಇಲಿಯನ್ನೇರಿ ಪ್ರತಿಭಟಿಸಿದನು. ಆ ಸನ್ನಿವೇಶ,

ಭುಜಗಧ್ವಂಸಿ ನಂದೀಶ್ವರನೊಳು ಕಾದಿ । ನಿಜಪೌರುಷದೆ ನಿಂದಿರಲು ।
ದ್ವಿಜರಾಜ ಬೆರೆಯದಿರೆನುತೆ ಪಚಾರಿಸಿ । ಗಜವಕ್ತ್ರನುರವಣಿಸಿದನು ॥
ಜೋಡಿಸಿ ಪರಿತಂದು ಮೂಷಕ ಗರುಡನ ! ನೋಡಿ ಕಣ್ಗೆಟ್ಟು ತನ್ನೊಡಲ ।
ಜೋಡಿಸಿ ತಿಂದಪನೆಂದುರೆ ಹೊತ್ತುಕೊಂ । ಡೋಡಿತು ವಿಘ್ನೇಶ್ವರನ ॥
ಲಂಡಿ ಸವಿದು ಹೋದರೆ ಬಿಚ್ಚುವುದ ತಾ । ಕಂಡು ತಕ್ಕಡುಗುದುರೆಯನು ।
ಕೊಂಡು ಬಂದೀಹುಯ್ಯಲೊಳಗೆರಗುವೆನೆಂದು । ಬಂಡಾದ ಬೆನಕರಾವುತನು ॥
ಒಕ್ಕಯ್ಯ ವಾಘೆಯದೊಳು ನಿಲ್ಲಲೊಲ್ಲದೆ । ವೆಕ್ಕಸ ಗೆಯ್ವುದ ಕಂಡು ।
ಬೆಕ್ಕಸ ಬೆರಗಾಗಿ ಬಲರಾಮದೇವರು । ನಕ್ಕರು ರಣರಂಗದೊಳಗೆ ॥

ಮೂಷಕ ಬೆದರಿ ತಲ್ಲಣಿಸಲು ರಣಪರಿ । ಹಾಸಕ ಬೇಡವೆಂದಿಳಿದು ।
ದೂಷಕ ಬಲರಾಮ ಕೈದೋರಿಸೆಂದು ವಿ । ಘ್ನೇಶನು ಕರೆದಾರಿದನು ॥
ಒದವಿದ ಭಕ್ಷ್ಯಭೋಜನಕೆ ಬಪ್ಪರೆ ಭಾದ್ರ । ಪದ ಶುದ್ಧ ಚೌತಿಯಿದಲ್ಲ ।
ಕದನಕಪೂಪವ ತೋರೆಂದು ಸಾಮಜ । ವದನಂಗೆ ಪೆಟ್ಟನಿಕ್ಕಿದನು ॥

ಡೊಳ್ಳು ಹೊಟ್ಟೆಗನಾದ ಗಣಪತಿಯು, ಇಲಿವಾಹನನಾಗಿ ಅದರ ಹುಟ್ಟು ಹಗೆಯಾದ ಹದ್ದಿನಮುಂದೆ ನಿಂತುದೂ, ಇಲಿಯು ಓಡಿಹೋಗುವುದೂ, ಬಲರಾಮನನ್ನೇಕೆ ತರಂಗಿಣಿಯನ್ನು ಓದುವವರನ್ನೂ ನಗಿಸುವುದರಲ್ಲಿ ಸಂದೇಹವಿಲ್ಲ. ಕದನಕ್ಕೆ ಕರೆದ ಗಣಪತಿಗೆ ಬಲರಾಮನಿತ್ತ ಉತ್ತರವಂತೂ ತೀರ ಸಮಯೋಚಿತ!

ಹರಕುಮಾರನಿಗೂ ಮುರಹರಕುಮಾರನಿಗೂ ಕದನವೆಸಗಲು, ಅವರೀರ್ವರ ನಡುವೆ ನಡೆದ ಸಂವಾದವು ತೀರ ಮನೋರಂಜಕವಾಗಿದೆ. ಷಣ್ಮುಖಪ್ರದ್ಯುಮ್ನರ ಅಣಕವಾಡುಗಳ ಗುಟ್ಟನ್ನು ಅರಿತುಕೊಳ್ಳಬೇಕಾದರೆ ಅವರೀರ್ವರ ಪೂರ್ವೇತಿಹಾಸವು ಗೊತ್ತಿರಲಿಕ್ಕೆ ಬೇಕು.

ಷಣ್ಮುಖ:—

ಕಿಡಿಗಣ್ಣಿನಿಂದಳಿದುಳಿದ ದೇಹವನಿನ್ನು । ಸುಡಿಸದೆ ತಳರೆಂದ ನಗುತೆ ॥

ಪ್ರದ್ಯುಮ್ನ:—

ಸುಟ್ಟಾತನೆನ್ನ ಜೈಸಿದುದಿಲ್ಲ ಮರತವ್ಪೋ । ಭ್ರಷ್ಟನೆನಿಸಿಯುಮೆಯೊಡನೆ ।
ನೆಟ್ಟನೆ ಸಂಭೋಗವ ಮಾಡಲುಕ್ಷಣ । ಹುಟ್ಟಲುಜ್ಜುಗವೆತ್ತ ನಿನ್ನ ॥
ಚಿಣ್ಣನೀನರಿಯದಾಡಿದೆ ಹೋಗೆಲವೊ ಮು । ಕ್ಕಣ್ಣನೆನ್ನಲರಂಬಿಗಳುಕಿ ।
ಹೆಣ್ಣೊಡಲಾದ ಹಿಂಗಿದರೆ ಕೊಂದಪೆನೆಂದು । ನನ್ನೊಳು ನೆಣಸುವರಾರು ॥
ನಾಗಭೂಷಣನಂತಿರಲಿ ನಿರ್ಜರರೊಳು । ಭೋಗ ದೇವೇಂದ್ರನಮೇಲೆ ।
ಡಾಗನೊತ್ತಿದೆ ನೋಡು ನನ್ನಿಂದೆ ಬಂಡಾಗಿ । ಹೋಗದ ವೀರರಾರೆಲವೊ ॥

ಷ:—

ಶ್ರೀನಾರೀಗರ್ಭದೊಳಗೆ ಹುಟ್ಟಿ ಬಂದರೆ । ನೀನಾಡೆ ನಿನ್ನ ಪೌರುಷವ ।
ಮೀನಾತ್ಮಜ ನೀನಾದ ಕಾರಣ ತತ್ಕುಲ । ಹೀನಜಿಹ್ವೆಯೊಳು ತೋರಿಸಿತು ॥
ಪಿಂಡವ ಹೆತ್ತ ಮಾತೃಕೆ ರಕ್ಷಿಸಬೇಕು । ಮಂಡಲದೊಳಗುಳ್ಳ ರೀತಿ ।
ಹೆಂಡತಿಯಿಂದರ್ಭಕನಾಗಿ ಬೆಳೆದವ । ಭಂಡನೀಹೋಗೆಂದು ನುಡಿದ ॥

ಪ್ರ:—

ಪಾರ್ವತಿ ಜಠರದೊಳೊಗೆದವನಲ್ಲ ಸ | ಲಾರುಯೋನಿಜಗಾದ ಪರುಕ |
ಗಾರುಗೆಡೆಯ ಬೇಡವೆನುತಿ ಮನ್ಮಥ ಗುಟ್ಟ | ಹಾರುತಿಂತೆಚ್ಚು ಬೊಬ್ಬಿರಿದ॥

"ಕನಕನನ್ನು ಕೆಣಕಬೇಡ, ಕೆಣಕಿದ ಮೇಲೆ ತಿಣಕಬೇಡ," ಎಂಬ ಗಾದೆಯು ಕನದಾಸರ ವೈಶಿಷ್ಟ್ಯದಿಂದಲೆ, ರೂಢವಾದುದು. ದಾಸರ ನರ್ಮೋಕ್ತಿಯ ಪ್ರಗಲ್ಭತೆಯನ್ನು ಮೇಲಣ ಅವತರಣಿಕೆಯಿಂದ ಮನಗಾಣಿಸಿಕೊಳ್ಳಬಹುದು.

ಕಾರ್ಕೋಟಕನು ಕಚ್ಚಿದೊಡನೆ ನಳನು ಕುರೂಪಿಯಾದನು. ''ದೊಡ್ಡ ಹೊಟ್ಟೆಯ, ಕೂನುಬೆನ್ನಿನ, ಅಡ್ಡ ಮೋರೆಯ, ಗಂಟು ಮೂಗಿನ, ಬೊಡ್ಡ ಕೈಕಾಲುಗಳ, ಉದುರಿದ ರೋಮ ಮೀಸೆಗಳ, ಜೆಡ್ಡು ದೇಹದ, ಗೊಜ್ಜು ಗೊರಲಿನ, ಗಿಡ್ಡರೂಪಿನ, ಹರಕು ಗಡ್ಡದ, ಹೆಡ್ಡನಾದ'' ನಳನು ಬಾಹುಕನೆಂಬ ಹೆಸರು ತಾಳಿ, ಋತುಪರ್ಣನ ಲಾಯದಲ್ಲಿ ವಾಲಾಖ್ಯನೆಂಬ ಗೆಳೆಯನೊಡನೆ ಮಲಗಿದ್ದನು. ಅಲ್ಲಿ ದಮಯಂತಿಯೊಡನೆ ಸರಸಸಲ್ಲಾಪ ಮಾಡಿದ ಕನಸು ಕಂಡನು. ನಳನು ಕೂಡಲೆ ಎದ್ದು ಮರುಗುತ್ತ ಅಂದುದು,

ಹಾ ತರುಣಿ ನಳಿನಾಕ್ಷಿ ನಯಂಸು ।
ಪ್ರೀತಿಪೂರ್ವಕದಿಂದ ಕನಸಲಿ ।
ಮಾತುದೋರಿದೆ ಬಂದು ನನ್ನಲಿ ಕರುಣದಿಂ ನೀನು ॥
ಧಾತುಗುಂದಿದೆನಕಟ ಅಸುರಾ ।
ರಾತಿ ಬಲ್ಲನೆನುತ್ತ ಮನದಲಿ ।
ಕಾತರಿಸಿ ನಿಜಸತಿಗೆ ಹಲುಬಿದ ಮದನನೆಸುಗೆಯಲಿ ॥

ನಳನ ನುಡಿಯನ್ನು ಕೇಳಿ ವಾಲಾಖ್ಯನು ನಕ್ಕು ಅಂದುದು,

ವಿಕಳವನು ವಾಲಾಖ್ಯಕೇಳಿದ ।
ಪಕಪಕನೆ ನಗುತೆಂದನೆಲೆ ಬಾ ।
ಹುಕುನೆ ಹಲುಬುವುದೇನು ಕಂತೆಗೆ ತಕ್ಕ ಬೊಂತೆಯನು ॥
ಅಕಟನೀನತಿ ಚೆಲುವನೋ ಬಾ ।
ಲಕಿ ನಿನಗೆ ತಕ್ಕವಳೊ ಲೋಕದಿ ।
ಮಕರಕೇತನ ಮರುಳನೆಂದಪಹಾಸ್ಯಮಾಡಿದನು ॥

ನಳನ ದುರ್ದೆಸೆಗೆ ಓದುಗರು ಮರುಗುತ್ತಿದ್ದರೂ, ವಾಲಾಕ್ಷ್ಯನು, ಕುರೂಪಿಯಾಗಿ ಲಾಯದಲ್ಲಿ ಮಲಗಿದ ನಳನಿಗೆ "ಅಕಟ, ನೀನತಿ ಚೆಲುವನೊ, ಮಕರ ಕೇತನ" ಎಂದನ್ನುವುದರಿಂದ ಒಂದರೆಕ್ಷಣ ನಗೆ ಬರುವುದು ಸಹಜ. "ಹಾ ತರುಣಿ ನಳಿನಾಕ್ಷಿ," ಎಂದು ನಳನಂದುದಕ್ಕೆ 'ಕಂತೆಗೆ ತಕ್ಕ ಬೊಂತೆ,' 'ಬಾಲಕಿ ನಿನಗೆ ತಕ್ಕವಳೊ,' ಎಂದು ಉತ್ತರವಿತ್ತುದೂ ತೀರ ಸಮರ್ಪಕ.

೫] ದಾಸರ ಅದ್ಭುತರಸವೂ ಮನನೀಯವಿದೆ. ಇದಕ್ಕೆ ತಕ್ಕ ಉದಾಹರಣೆಯೆಂದರೆ, ಗರುಡನ ಉಡ್ಡಾಣ. ದಾಸರ 'ಹಕ್ಕಿ ಹಾರುವುದ' ನ್ನು ಗಮನಿಸಬೇಕು. ಕೃಷ್ಣನ ಆಜ್ಞೆಯ ಮೇರೆಗೆ ಗರುಡನು ಶೋಣಿತಪುರದ ಮೇಲೆ ಸಾಗಿಹೋಗಲಿಕ್ಕೆ ಸಿದ್ಧನಾಗುತ್ತಾನೆ.

ಮುತ್ತಿನ ಗದ್ದುಗೆ ಗರುಡನ ಹೆಗಲಿನೊ | ಳೆತ್ತಿಸಿ ಬಿಗಿದು ಹಲ್ಲಣಿಸೆ ।
ಅತ್ಯಂತ ಸೌಖ್ಯವಮಾಡಿ ಸಂತಸದಿಂದೆ । ಹತ್ತಿದ ಶ್ರೀಕೃಷ್ಣರಾಯ ॥

ಸೂಠಿಯಿಂದಡರ್ದರು ಬಲರಾಮ ಸಾತ್ಯಕಿ । ಪಾಠೀನಕೇತೂದ್ವಹನು ।
ಊಟಿವರಿವ ಯದುಕುಮರರು ಚಪ್ಪನ್ನ । ಕೋಟಿಯಾದವರು ಹತ್ತಿದರು ॥

ಬಿಗಿದು ಹಾರಿದ ವಿಹಗೇಶನುಬ್ಬಟೆಗೆ ವಾ । ಸುಗಿ ಕೊರಳೊಲೆದುರೋಹಿತವ ।
ಉಗಿದುವು ಗಿಗ್ದಂತಿಗಳು ಕೂರ್ಮನದೇಹ । ಹುಗಿದುದು ತಣ್ಗೆಸರೊಳಗೆ ॥

ಗರಿಯ ಗಾಳಿಯ ನಿಷ್ಠುರದಿಂದೆ ಗಿರಿಗಳು | ಮುರಿದುರುಳಿದುವು ಭೂಮಿಯಲಿ।
ಉರುಗಿತು ಬ್ರಹ್ಮಾಂಡ ದಿಕ್ತಟಹಮ್ಮುಗೆ । ಹರಿದುದು ಹಲವು ತಾವಿನಲಿ ॥

ನಗರಾಜ ನಾಮವ ಬೈತಿಟ್ಟು ಕನಕಾದ್ರಿ । ಖಗರಾಜನಾದುದೆಂಬಂತೆ ।
ಗಗನದೆ ಗರುಡನೈತಂದುದು ಪೆರ್ಮುಗಿ । ಲಗಲದೆ ಗರಿಯನಾಟಿಸುತೆ ॥

ಮುರಿದುದು ಬಾಣನ ಮೋರಟಿಕ್ಕೆಯ ಮತ್ತೆ । ಮುರಿದುವು ಹಲವು ಹರ್ಮ್ಯಗಳು ।
ಮುರಿದುದು ಖಳನೈಶ್ವರ್ಯ ನಿರ್ಜರವೃಕ್ಷ | ಮುರಿದುವು ಶಿವನಿರ್ದವನದೆ ॥

ಒಡಮುರಿದೊಳವೊಕ್ಕು ಬಿರುಗಾಳಿ ಬೀಸಲು । ಮೃಡನಾಸ್ಥಾನದಿಂ ಸುರರು।
ಹೊಡೆಮುಗ್ಗಿದರು ಗದ್ದುಗೆಯಿಂದೆ ನವರತ್ನ । ವಡೆದ ಕಿರೀಟಗಳ್ ಮುರಿಯೆ ॥

ಉರುಗಿತು ಬ್ರಹ್ಮಾಂಡವೆನೆ ಖಗರಾಜ ಕಿ । ಳ್ಕಿರಿಯನೊಯ್ಯನೆ ಪೈಸರಿಸೆ ।
ತುರುಗಿದೆ ಬಲಕೃಷ್ಣನಿಳಿದ ಶೇಷನ ಕೊರಲ್ । ಮುರಿವಂತೆ ನದಿಯ ತೀರದಲಿ॥

೬. ಶಾಂತ, ರೌದ್ರ, ಬೀಭತ್ಸ, ಭಯಾನಕ ರಸಗಳೂ ದಾಸರಲ್ಲಿ ಹೇರಳವಾಗಿ ದೊರೆಯುವುದುಂಟು. ಅವೆಲ್ಲವುಗಳಿಗೂ ಇಲ್ಲಿ ಎಡೆ ದೊರೆಯಲಾರದು. ಭಕ್ತಿರಸವು ಪ್ರತ್ಯೇಕವಾದ ರಸವಲ್ಲವೆಂದು ಅನೇಕ ಲಾಕ್ಷಣಿಕರು ಮತಪಡುವರು. ನವರಸದೊಳಗಿನ ಯಾವುದೊಂದು ರಸದಲ್ಲಿ ಸೇರಿ ಅದು ರೂಪಪಡೆಯುವುದೆಂದು ಅವರ ಮತ. ಶಾಂತಚಿತ್ತದಿಂದ ಪರಮಾತ್ಮನನ್ನು ಭಜಿಸುವ ಉಕ್ತಿಗಳು ಶಾಂತರಸದಲ್ಲಿ ಅಡಕವಾಗುವುದುಂಟು. ಅಂತಹ ದೇವತಾಪರ ಸ್ತೋತ್ರಗಳು ನಳಚರಿತ್ರೆ, ಭಕ್ತಿಸಾರ, ತರಂಗಿಣಿಗಳಲ್ಲಿ ವೆಗ್ಗಳವಾಗಿ ದೊರೆಯುವುವು. ಜಾಗರದಲ್ಲಿ, ಕೀರ್ತನೆ ಗೈಯುವುದರಲ್ಲಿ, ಭಕ್ತರು, ಅಂತಹ ಸ್ತೋತ್ರಗಳನ್ನು ಮುಖಪಾಠ ಮಾಡಿಕೊಳ್ಳಬಹುದು.

ಬಾಣನು ನಿಸ್ಸೀಮ ಶಿವಭಕ್ತನು. ಬಾಣನ ಭಕ್ತಿಗೆ ಮೆಚ್ಚಿ ಶಿವನು ಅವನ ದ್ವಾರಪಾಲಕನಾದನು. ಕೊನೆಗೆ ಬಾಣನನ್ನು ಕರೆದುಕೊಂಡು ಕೈಲಾಸಕ್ಕೆ ತೆರಳಿದನು. ಅಂತಹ ಬಾಣನು ಕೃಷ್ಣನನ್ನು ಪ್ರತಿಭಟಿಸುವ ಮುಂಚಿತವಾಗಿ ಒಂದು ಸಂದರ್ಭದಲ್ಲಿ ಶಿವನನ್ನು ಕುರಿತು ಸ್ತೋತ್ರಮಾಡಿದುದು,

ದೇವದೇವೋತ್ತಮ ದೇವಶಿಖಾಮಣಿ । ದೇವರೆಲ್ಲರ ಕಾವದೇವ ।
ದೇವ ನಿನಗೆ ಪ್ರತಿದೇವರಹಿತ ವಾಮ । ದೇವಮುಖಾನ್ವಿತ ಶರಣು ॥

ಘೋರಸಂಸಾರವಿದೂರೀಕೃತಭಕ್ತ । ಘೋರದುರಿತಸಂಹಾರ ।
ಘೋರಪಾತಕಪ್ರಾಯಶ್ಚಿತ್ತನಾಮಾಂಕಿತ । ಘೋರಮುಖಾನ್ವಿತ ಶರಣು ॥

ನಾಟಕಧರ ಹರಪರಮೇಶ್ವರ ಚಂದ್ರ । ಜೂಟಲಲಾಟಲೋಚನನೆ ।
ಬೇಟದಿ ಬೆಂದು ಬೆಂಡಾದಮಾಯಾವಿಯ । ಕೂಟಕೊಳದಸ್ವಾಮಿ ಶರಣು ॥

ಈಶ ಸೂರಿಯಕೋಟಿತೇಜಃಪುಂಜ ಬಿ । ಲೇಶಭೂಷಣ ದೋಷನಾಶ ।
ವಾಸವವಿಧಿಮುಖ್ಯತ್ರಿದಶಾಧೀಶ ಮ । ಹೇಶ ಸರ್ವೇಶ್ವರ ಶರಣು ॥

ಶಿವನು, ತನ್ನ ಶಿಷ್ಯನಾದ ಬಾಣನಿಗೆ, ತನಗೂ ವಿಷ್ಣುವಿಗೂ ಭೇದವಿಲ್ಲೆಂದು ಹೇಳಿದನು. ಧೀರೋದಾತ್ತನಾದ ದಾಸರ ಬಾಣನು, ಕೃಷ್ಣನನ್ನೂ ಮನವಾರೆ

ಹೊಗಳುವನು. ಬಾಣನು ಕೃಷ್ಣನಿಗೆ ನಮಸ್ಕರಿಸಿ, ಹರ್ಷಪುಲಕಿತನಾಗಿ ಅವನನ್ನು ಸ್ತುತಿಸಿದುದು,

ದೃಢಭಕ್ತಿಯಲಿ ನಿಂದಿರ್ದ ತಾವಿಗೆ ಕೂರ್ತು। ನಡೆದಂಘ್ರಿಯುಗವೆ ಪವಿತ್ರ।
ಪೊಡಮಟ್ಟ ಹಸ್ತಮಸ್ತಕ ಬಹುಪುಣ್ಯವ। ಪಡೆವುವು ಪರಮಾತ್ಮಕನೆ ॥

ನೋಡಲು ದೃಕ್ಪುಣ್ಯ ಪಿರಿದು ಸಂತಸದಿ ಕೊಂ। ಡಾಡಲು ಜಿಹ್ವೆ ಪವಿತ್ರ।
ಹಾಡ ಕೇಳಲು ಕರ್ಣದೊಳಿರ್ದ ಪಾತಕ। ವೋಡುವುದಿಳೆಯ ಜೀವರಿಗೆ ॥

ಮರಣಕಾಲಕೆ ಕೃಷ್ಣ ಕೃಷ್ಣ ಕೃಷ್ಣಾಯೆಂಬ। ಸ್ಮರಣೆಯೆಂದರೆ ಮೋಕ್ಷವಹುದು।
ಶರಣರ ದ್ವಿತಿಯಾಕ್ಷರದ ಲಗ್ಗವನಾಂತ। ಚರಣಾನ್ವಿತ ಕೃಷ್ಣ ಜಯತು ॥

ಕಾಶಿಯ ಸ್ಥಲದಲ್ಲಿ ಶಿವಸಮಸ್ತರಿಗುಪ। ದೇಶಿಸುವುದು ನಿನ್ನ ನಾಮ।
ದೋಷಿಗಳಿದನರಿಯದೆ ಕೆಟ್ಟರು ಪುಣ್ಯ। ರಾಶಿ ನಾರಾಯಣ ಜಯತು ॥

ದೂಷಕರಿಂದಾದುದಾದರೆ ಘನಪರಿ। ಹಾಸಕದಿಂದಿರದಾಯ್ತು।
ಬೇಸತ್ತು ಬೈದರೆ ಪಾಪಾಬ್ಧಿಯಕಡೆ। ಹಾಸುವ ಶ್ರೀಕೃಷ್ಣ ಜಯತು ॥

ಆರಂಭ ಕೃಷಿಯನು ಮಾಳ್ಪರು ಗದ್ದೆಗೆ। ನೀರ ಹರಿಯೆ ತಿದ್ದೆನಲು।
ನಾರ ಹಂಗಡವ ಮಾಡೆನಲಾಗಿ ಪಾಪದ। ಬೇರ ಕೀಳುವ ಕೃಷ್ಣ ಜಯತು ॥

ದೇಶದೊಳನ್ಯರ ವರ ಜಲಲಿಪಿಯಂತೆ। ನಾಶವಹುದು ಕೊಡಲೊಡನೆ।
ದಾಸೋತ್ತಮರಿಂಗೆ ನೀ ಕೊಟ್ಟ ವರ ತಾಮ್ರ। ಶಾಸನವಹುದು ನನ್ನೊಡೆಯ॥

ನಾಮಸ್ಮರಣೆ ನಾಲಗೆಗಳವಡದೆ ಮ। ತ್ತಾಮರಾಮರವೆಂದರವಗೆ।
ಪ್ರೇಮದೊಳೊಲಿದು ಸದ್ಗತಿಯ ಪಾಲಿಸಿದ ಶ್ರೀ। ರಾಮವಿಭೀಷಣವರದ ॥

ನೀರೂಡಿ ನೆರೆ ಸಲಹಿದರೆ ಶಾಲ್ಮಲಿವೃಕ್ಷ। ಬೀರುವುದುಂಟೆ ಸತ್ಫಲವ।
ಹಾರುವರಿಂಗೆ ನಿರ್ಜರರೊಳು ನೀಕಲ್ಪ। ಭೂರುಹ ಶ್ರೀಕೃಷ್ಣ ಜಯತು ॥

ಕನಕದಾಸರೇ, ಭಾವಪರವಶರಾಗಿ ಅಂದ ಶ್ರೀಕೃಷ್ಣನ ಸ್ತೋತ್ರವಿದು !

ಹರಿನಾಮದ ಸ್ಮರಣೆಯಾದೊಡನೆ ಮೋಕ್ಷವಹುವೆಂದು ದಾಸರ ಮನವರಿಕೆ, ಆದುದರಿಂದ, ಎಲ್ಲೆಡೆಯಲ್ಲಿ ದೇವರ ಕೀರ್ತನೆಯಾಗುವಂತೆ ವಿವಿಧ ಮಟ್ಟುಗಳ ಪದಗಳನ್ನು ದಾಸರು ರಚಿಸಿದುದುಂಟು. ಬೀಸುವಲ್ಲಿ ಕುಟ್ಟುವಲ್ಲಿ ಕೂಡ ಆ ಕ್ರಿಯೆಗೆ ತಕ್ಕಂತೆ, ಪದಗಳನ್ನು ಹೇಳಿ, ಹರಿನಾಮಸ್ಮರಣೆಯಾಗ

ಬೇಕೆಂದು ಹಂಬಲಿಸಿದರು. ತರಂಗಿಣಿಯೊಳಗಿನ ' ಗುಂಡಕ್ರಿಯೆ ' ಯು, ಅಂದರೆ, ಕುಟ್ಟುವ ವನಿಕೆವಾಡಿನ ಉದಾಹರಣೆಯನ್ನು ಇಲ್ಲಿ ಕೊಡಲಿದೆ.

ಸುವ್ವಿ ಪೂರಿತಕಾವು ಸುವ್ವಿ ಸದ್ಗುಣಧಾವು | ಸುವ್ವಿ ಸುರೇಂದ್ರಲಲಾವು |
ಸುವ್ವಿ ಸಾರ್ವರಭೌವು ಸುವ್ವಿ ರಾಘವರಾವು । ಸುವ್ವಿ ಸಾಸಿರಪುಣ್ಯನಾವು ||

ನಿಗವುದುರ್ಲಭ ಸುವ್ವಿ ನಿರ್ಜರಾರ್ಚಿತ ಸುವ್ವಿ। ಯಘಹರಭವದೂರ ಸುವ್ವಿ |
ಗಗನಚರಣ ಸುವ್ವಿ ಗರುಡಗವುನ ಸುವ್ವಿ। ಜಗದಧಿಪತಿಕೃಷ್ಣ ಸುವ್ವಿ||

ಪರಮಾತ್ಮಕ ಸುವ್ವಿ ಪ್ರದ್ಯುಮ್ನಪಿತ ಸುವ್ವಿ । ವರಚತುರ್ಮುಖತಾತ ಸುವ್ವಿ।
ಹರಬಾಂಧವ ಸುವ್ವಿ ಹವ್ಯಪೋಷಕ ಸುವ್ವಿ। ನರನಾರಾಯಣ ಸುವ್ವಿ ||

ಮಂದರಧರ ಸುವ್ವಿ ಮಾವುನೋಹರ ಸುವ್ವಿ । ವೃಂದಾವನವಿಭು ಸುವ್ವಿ |
ನಂದನಂದನ ಸುವ್ವಿ ನತಜನಹಿತ ಸುವ್ವಿ। ಯೆಂದವರೊಲಿದು ಪಾಡಿದರು||

---

## ೪. ಕನಕದಾಸರ ಶಬ್ದಚಿತ್ರಗಳು.

ಕನಕದಾಸರ ನಿರೀಕ್ಷಣ ಶಕ್ತಿಯು ಅಗಾಧವಾದುದು. ಅವರ ಕಾವ್ಯಗಳಲ್ಲಿರುವ ವರ್ಣನೆಗಳು ತೀರ ಸ್ವಭಾವಿಕ. ದಾಸರು ವರ್ಣಿಸಿರುವ ವಸ್ತುಗಳ ಚಿತ್ರವು ಕಣ್ಣಮುಂದೆ ಕಟ್ಟಿದಂತಾಗುತ್ತದೆ. ಅಂತಹ ವರ್ಣನೆಗಳಿಗೂ ಅವರು ' ಭಾವಚಿತ್ರ ' ಎಂದು ಸಂಭೋಧಿಸಿರುವಂತೆ ತೋರುತ್ತದೆ. ಈ ಕೈವಾಡಿನಲ್ಲಿ ದಾಸರನ್ನು ಸರಿಗಟ್ಟುವ ಕನ್ನಡ ಕವಿಗಳು ತೀರ ವಿರಳ. ಮಾನವನ ಒಂದೊಂದು ಅವಸ್ಥೆಯನ್ನು ನೈಜವಾಗಿ ಚಿತ್ರಿಸುವ ಕಲೆಯು ನಳಚರಿತ್ರೆಯಲ್ಲಿ ಪರಿಪಕ್ವವಾದುದು ಕಂಡುಬರುವುದು. ಆ ಭಾವಚಿತ್ರಗಳಲ್ಲಿ ಸ್ವಭಾವೋಕ್ತಿ, ಉಪವೆುಗಳ ಉತ್ಕೃಷ್ಟ ಉದಾಹರಣೆಗಳು ದೊರೆಯುವುದುಂಟು.

೧. ದವುಯಂತಿಯ ಕೆಲ ಭಾವಚಿತ್ರಗಳನ್ನು ನೀರೀಕ್ಷಿಸುವಾ,

ನಿರಿಗುರುಳ ಸಿರಿಮುಡಿಯ ವಿವುಲಾ ।
ಧರದ ತೋಳ್ಗಳ ಕಂಬುಕಂಠದ ।
ತರಳನಯನದ ಸಂಪಿಗೆಯ ನಾಸಿಕದ ಪೆರೆನೊಸಲ ||

ಹರಿಯುವಮಧ್ಯದ ಹಂಸಗಮನದ ।
ಗುರುಕುಚದ ಕರಪಲ್ಲವದ ಸರ ।
ಸಿರುಹಮುಖಿ ನಲಿದಾಡುತಿರ್ದಳು ರಾಜಭವನದಲಿ ॥

ಈ ವರ್ಣನೆಯು ತುಸು ಕವಿಸಂಪ್ರದಾಯಕ್ಕೆ ಸೇರಿದುದು. ಪಂಡಿತರಿಗೆ ಮಾನ್ಯವಾದುದು. ಆದರೆ, ಅದು ಅಷ್ಟು ಸ್ವಾಭಾವಿಕವಾದುದಿಲ್ಲ.

೨. ನಳಚಕ್ರವರ್ತಿಯು ಆಸ್ಥಾನದಲ್ಲಿ ಕುಳಿತಿರಲು, ವಿದರ್ಭನಗರದಿಂದ ಬಂದ ಒಬ್ಬ ಭೂಸರನು, ದಮಯಂತಿಯ ಚೆಲುವಿಕೆಯನ್ನು ಚಿತ್ರಿಸಿದುದು,

ಮುರಹರನ ನಿಜ ಸೊಸೆಯ ರೂಪಂ ।
ತಿರಲಿ ಚಂದ್ರನಮುಗಳ ಚೆಲುವಂ ।
ತಿರಲಿ ವೈನಾಕನ ಸಹೋದರಿಯಂದವಂತಿರಲಿ ॥
ಶರಧಿತನುಜೆಯ ಸೌಂದರಿಯುವನು ।
ಮರಿಸಿತೆಂಬುದು ಲೋಕದೊಳಗಾ ।
ಸರಸಿಜಾಕ್ಷಿಯ ಬಗೆಗೆ ಸರಿದೊರೆಯಿಲ್ಲಕೇಳೆಂದ ॥

ಈ ವರ್ಣನೆಯಿಂದ ನಳನ ಮನಸ್ಸಿನಲ್ಲಿ ದಮಯಂತಿಯ ರೂಪದ ಪಡಿನೆರಳು ಬೀಳಲಿಲ್ಲ. ನಳನು ಪದ್ಯದಲ್ಲಿ ಹೇಳಿರುವ ಹೆಣ್ಣುಮಕ್ಕಳನ್ನು ನೋಡಿರಲಿಲ್ಲ. ದಾಸರು ಅದನ್ನು ಮನಗಂಡು ಮತ್ತೊಂದು ಪದ್ಯವನ್ನು ಅದರಡಿಯಲ್ಲಿ ಜೋಡಿಸಿದರು.

ಮಿಸುನಿಯೋಲೆಯ ಡಾಳಕದಪಿನೊ ।
ಳೆಸೆವ ಮೇಲುದು ಜಾರೆ ಕುಚಭರ ।
ವೆಸೆಯೆ ನಡುವಲ್ಲಾಡೆ ಮುಸಗಿದ ಮಂದಹಾಸದಲಿ ॥
ಎಸೆವ ಸೋರ್ಮುಡಿ ಭಾರದಿಲಿ ಬಾ ।
ಗಿಸಿದ ಕೊರಳಿನ ಕೈಯವೀಣೆಯ ।
ಬಿಸರುಹಾಕ್ಷಿಯ ಸೊಬಗ ಬಣ್ಣಿಸಲಳವೆ ತನಗೆಂದ ॥

ಈ ನುಡಿಯನ್ನು ಕೇಳಿ ನಳನುಮೆಚ್ಚಿ ತಲೆದೂಗಿದನು; ಅವನ ವಿಶಾಲ ನಯನಗಳಿಗೆ ಆ ಕಮಲಮುಖಿಯು ಗೋಚರಿಸಿದಂತಾದಳು !

೩. ಹಂಸಗಳು ನಳನ ಮುಂದೆ ದಮಯಂತಿಯನ್ನು ಬಣ್ಣಿಸಿದುದು,

ಪರಮಪುಣ್ಯಾಂಗನೆ ಮಹಾಸೌಂ।
ದರಿ ನಿಪುಣೆ ಗಜಗಮನೆ ನಯಗುಣ ।
ಭರಿತೆ ಸೊಬಗಿನ ಸೋನೆ ತಾನಿಹಳಲ್ಲಿ ವನಜಾಕ್ಷಿ ॥

ಈ ವರ್ಣನೆಯಿಂದ ನಳನ ಮನಸ್ಸಿನಲ್ಲಿ ದಮಯಂತಿಯ ರೂಪವು ನಡಲಿಲ್ಲ ವೆಂಬುದನ್ನು ಕಂಡು ಮತ್ತೆ ಹಂಸಗಳು ನುಡಿದುದು,

ನಗೆಮೊಗದ ಪೊಂಬೊಗರ ಮಿಂಚಿನ ।
ಬುಗುರಿ ಮೊಲೆಗಳ ಸೆಳೆನಡುವ ಸೆ ।
ಳ್ಳುಗುರ ಬೆಡಗಿನ ಕಾಂತೆ ರಂಜಿಸುತಿರ್ಪಳಾ ಪುರದಿ ॥

ದಮಯಂತಿಯು ಸೊಬಗಿನ ಸೋನೆಯಾಗಿದ್ದಳೆಂಬುದನ್ನು ನಳನು ಮನ ಗಂಡನು !

೪. ಹಂಸಗಳನ್ನು ಬೆನ್ನಟ್ಟಿ ಅಲೆದಾಡುವ ದಮಯಂತಿಯನ್ನು ದಾಸರು ವರ್ಣಿಸಿದುದು,

ಮೆಲ್ಲಮೆಲ್ಲನೆಯಡಿಯಿಡುತ ಕರ ।
ಪಲ್ಲವವ ಚಾಚಿದಳು ನೂಪುರ ।
ಘಲ್ಲುಘಲಿರೆನೆ ಹಿಂದುಹಿಂದಕೆ ಸರಿದುದಾ ಹಂಸ ॥
ನಿಲ್ಲದಂಗೈಸುತ್ತಬರಲ ।
ಲ್ಲಲ್ಲಿಗಡರಿತು ಕುಸುಮಮಯ ನವ ।
ಮಲ್ಲಿಗೆಯ ಬನದೊಳಗೆ ಹೊಕ್ಕುದು ಹೊದರಹೊಸಮೆಳೆಯ ॥

ಕಾಲೊಳಗಿನ ನೂಪುರದ ಸಪ್ಪಳದಂತೆ ಈ ಪದ್ಯದಲ್ಲಿ ಶಬ್ದರಚನೆಯಾಗಿದೆ. ಹೆಜ್ಜೆಗಳು ಸಮೀಪಸಮೀಪವಿರುವಾಗ ಹ್ರಸ್ವಸ್ವರ, ದೂರದೂರವಿರುವಾಗ ದೀರ್ಘಸ್ವರ, ಹೀಗೆ ಯೋಜನೆ ಮಾಡಿದ ಕೌಶಲ್ಯವು ಇಲ್ಲಿ ಕಂಗೊಳಿಸುವುದು. ಮೆಲ್ಲಮೆಲ್ಲನೆಯಡಿಯಿಡುತ, ಉದ್ದ ಕೈಚಾಚಲು ಸ್ವಾಭಾವಿಕವಾಗಿ ಹೆಜ್ಜೆಗಳು ದೀರ್ಘವಾದುವು. ಅದಕ್ಕಾಗಿ ನೂಪುರಗಳು ಘಲ್‌ಘಲ್, ಎಂಬ ರವ ಮಾಡಿ ದುವು. ಇಲ್ಲಿ 'ಚಾ', ಮತ್ತು 'ನೂ' ಅಕ್ಷರಗಳು ದೀರ್ಘಕ್ರಿಯೆಯನ್ನು ಸೂಚಿಸುತ್ತವೆ.

೫. ಚಲಚ್ಚಿತ್ರಪಟದಲ್ಲಿ ಹಾಕತಕ್ಕ ಮತ್ತೊಂದು ದಮಯಂತಿಯ ಚಿತ್ರ,

ಕೆಳದಿಯರ ಕೆಲಕೊತ್ತಿ ತಾನೇ |
ಮೆಳೆಯ ಹೊಕ್ಕಳು ಬಾಗೆ ಸೆಳೆನಡು |
ಬಳುಕೆ ಕುಚಭಾರದಲಿ ಮೇಲುದು ಜಾರೆ ಮುಡಿ ಚದರೆ ||
ಜಲಜಮುಖಿ ಬೆಮರಿಡಲು ಕೊರಳಿನ |
ಲಲಿತದೇಕಾವಳಿಗಳಲ್ಲಾ |
ಡಲು ಸೆರಗನಳವಡಿಸಿ ನಿಂದಳು ಬಳಲಿ ಬಿಸುಸುಯ್ದು ||

೬. ಕಟ್ಟಡವಿಯಲ್ಲಿ ಬಳಲಿ ಬಣಜಿಗರ ಸಂಗಡ ಚೇದಿಪುರವನ್ನು ಸೇರುವ ದಮಯಂತಿಯ ದೃಶ್ಯ,

ನುಡಿಗೆ ಶುಕಪಿಕ ನಲಿಯೆ ಮಿಗೆ ಸೆಳೆ |
ನಡು ಬಳುಕೆ ವೃತ್ತಸ್ತನಕೆ ಸೋ |
ರ್ಮುಡಿಯ ಭಾರಕೆ ಕೊರಳು ಕೊಂಕಲು ಮೆಲ್ಲಡಿಯನಿಡುತ ||
ಕುಡಿತೆಗಂಗಳ ನೋಟ ಕಾರ್ಮುಗಿ |
ಲೊಡೆದು ಮಿಂಚುವ ಮಿಂಚಿನಂದದಿ |
ಸಡಗರದಿ ಬರುತಿರ್ದಳಂಗನೆ ಹೊಳಲ ಬೀದಿಯಲಿ ||

೭. ಸ್ವಯಂವರಕ್ಕೆ ಸಿದ್ಧಳಾದ ದಮಯಂತಿಯ ಸೊಬಗು,

ಕುಡಿತೆಗಂಗಳ ಸಿರಿಮುಡಿಯ ಬಡ |
ನಡುವ ಸೆಳೆವತಿ ಬೆಡಗಿನಲಿಪೊಂ |
ಗೊಡ ಮೊಲೆಯ ವೈಯಾರದುಡುಗೆಯ ನೆರೆಯ ಸಡಗರದ ||
ತೊಡರ ಝಣಝಣ ರವದ ಮೆಲ್ಲಡಿ |
ಯಿಡುವ ಗಮನದ ಭರದಿ ಕಿರುಬೆಮ |
ರಿಡುತ ಬಂದಳು ಸತಿಯರೊಡನೆ ವಿವಾಹ ಮಂಟಪಕೆ ||

ದಮಯಂತಿಯ ಕೌಮಾರದೊಳಗಿನ 'ಬುಗುರೆಮೊಲೆ,' ನೆರೆದ ಮೇಲಾದ, 'ಪೊಂಗೊಡಮೊಲೆ' ಸಂತತಿಯಾದ ಮೇಲೆ ಆದ 'ವೃತ್ತಸ್ತನ,' ಈ ಸ್ವಾಭಾವಿಕವಾದ ದೈಹಿಕ ವಿಕಾಸವನ್ನೂ ದಾಸರು ಬಣ್ಣಿಸದೆ ಬಿಟ್ಟಿರುವುದಿಲ್ಲ.

೮. ಸುದೇವನೆಂಬ ಬ್ರಾಹ್ಮಣನು ದಮಯಂತಿಯನ್ನು ಹುಡುಕುತ್ತಾ ಚೇದಿಪುರಕ್ಕೆ ಬರುವನು. ಅಲ್ಲಿರುವ ದಮಯಂತಿಯ ಇರುವು.

ಮುಗಿಲುಮುಸುಕಿದ ಚಂದ್ರಬಿಂಬವೊ ।
ಪಗಲೊಳಿಸೆವ ಸುದೀಪಕಾಂತಿಯೊ ।
ಹೊಗೆಯೊಳಿಸಗಿದ ಚಿತ್ರಪ್ರತಿಮೆಯೊ ಹೇಳಲೇನದನ ॥
ಉಗಿದು ಬಿಸುಟ ವಿಭೂಷಣದ ಮೈ ।
ಲಿಗೆಯ ಸೀರೆಯ ಮಲಿನತನು ಕಳೆ ।
ದೆಗೆದುಕೈಗಲ್ಲದಲಿ ನಿಂದಿರೆ ಕಂಡನಾಸತಿಯ ॥

ಈ ಪದ್ಯವು ಪಂಡಿತರನ್ನೂ ಪಾಮರರನ್ನೂ ತಲೆದೂಗಿಸಬಲ್ಲದು. ಮೇಲಣ ಶ್ಲೋಕಗಳೊಳಗಿನ ದಮಯಂತಿಯ ಬೆಡಗು, ಈ ಪದ್ಯದೊಳಗಿನ ಅವಳ ದುರವಸ್ಥೆ, ಇವೆರಡು ಚಿತ್ರಗಳನ್ನು ಬದಿಗಿಟ್ಟು ನೋಡಿದರೆ, ಕನಕದಾಸರ ಭಾವಚಿತ್ರದ ಕೌಶಲ್ಯವು ತಂಬ ಮನದಟ್ಟಾಗುವುದು.

ದಾಸರು ಹೆಂಗಸಿನ ರೂಪವನ್ನಷ್ಟೇ ಬಣ್ಣಿಸಬಲ್ಲರಂತಲ್ಲ. ಗಂಡಸಿನ ಇರುವನ್ನೂ ಹೃದಯಂಗಮವಾಗಿ ಚಿತ್ರಿಸಬಲ್ಲರು. ಇಷ್ಟೇ ಅಲ್ಲ. ಪ್ರಾಣಿಗಳ, ಸ್ವಾಭಾವಿಕ ವರ್ಣನೆಗಳನ್ನೂ ಅವರು ಕೊಡಬಲ್ಲರು. ಮಾನವರೊಳಗಿನ ವಿಗಡರೂಪಗಳನ್ನೂ ಚಿತ್ರಸುವುದರಲ್ಲಿ ದಾಸರ ವೈಶಿಷ್ಟ್ಯವಿರುವುದೆಂಬದನ್ನು ಮರೆಯಕೂಡದು.

೯. ಅನಿರುದ್ಧನ ವರ್ಣನೆ,

ನೊಸಲ ಕತ್ತುರಿ ಬಾಗಿದ ಪುರ್ಬು ತಾವರೆ। ಯೆಸಳನೇರಿದ ನಿಡುಗಣ್ಣು ।
ಪಸರಿಪ ತಿಲಪುಷ್ಪನಾಸಿಕ ಸತ್ಕರ್ಣ । ಪೊಸರೂಪನೋಡಿ ಹಿಗ್ಗಿದರು ॥
ಗಂಡಸ್ಥಲವನ್ನೆ ಕೊನರುವ ಕರ್ಮೀಸೆ । ತೊಂಡೆವಣ್ಣುಟಿದೋರೆವಲ್ಲು ।
ಮಂಡಳಿಸುವ ಕಂಠಸರದ ನುಣ್ಗೊರಲನ । ಕಂಡಾಕ್ಷಣ ಸೋತರೊಲಿದು ॥

೧೦. ನಳನನ್ನು ಬಾಧಿಸುವ ಕಲಿಪುರುಷನ ಚಿತ್ರ,

ಕುರುಳು ಜುಂಜುರ ತಲೆಯ ತಗ್ಗಿನ ।
ಕೊರಳ ಕೆಂಗರಿಗಣ್ಣಮೋರೆಯ ।
ಹರಕು ಗಡ್ಡದ ಕೆಂಚು ಮೀಸೆಯ ಮಲಿನ ವಸನದಲಿ ॥

ನೆರೆದ ವೀರಕರಾಳ ಭಟರಿಂ ।
ತ್ತಿರದೊಳುಕ್ಕಿನ ತೇರಿನಲಿ ಕಲಿ ।
ಪುರುಷ ಕಾಣಿಸಿಕೊಂಡನಮರೇಶ್ವರನ ನಸುನಗುತ ॥

೧೧. ಕಾರ್ಕೋಟಕನು ಕಚ್ಚಿದಮೇಲೆ ನಳನ ರೂಪವು ವಿಗಡವಾಯಿತು. ಕುರೂಪಿಯಾದ ನಳನ ದೃಶ್ಯ,

ದೊಡ್ಡ ಹೊಟ್ಟೆಯ ಕೂನು ಬೆನ್ನಿನ ।
ಅಡ್ಡಮೋರೆಯ ಗಂಟುಮೂಗಿನ ।
ಮೊಂಡು ಕೈಕಾಲುಗಳ ಉದುರಿದ ರೋಮಮೀಸೆಗಳ ॥
ಜಿಡ್ಡುದೇಹದ ಗೊಜ್ಜುಗೊರಲಿನ ।
ಗಿಡ್ಡ ರೂಪಿನ ಹರಕು ಗಡ್ಡದ ।
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ॥

ಸೃಷ್ಟಿಯೊಳಗಿನ ವಿಕೃತಸ್ವರೂಪಗಳನ್ನು ಕಂಡು ದಾಸರು ಈ ಎರಡು ವರ್ಣನೆಗಳನ್ನು ಕೊಟ್ಟಿರಬಹುದು.

೧೨. ನಳನನ್ನರಸುತ್ತ ಸುದೇವನು ಅಯೋಧ್ಯೆಯ ಅರಸನಾದ ಋತುಪರ್ಣನ ಆಸ್ಥಾನಕ್ಕೆ ಹೋದನು. ಆ ಒಡ್ಡೋಲಗದಲ್ಲಿ ಬರುತ್ತಿರುವ ಸುದೇವನನ್ನು ದಾಸರು ವರ್ಣಿಸುತ್ತಾರೆ,

ಇಟ್ಟಫಣೆಯೊಳಗೆವ ಮಟ್ಟೆಯು ।
ತೊಟ್ಟಹೊಸ ಯಜ್ಞೋಪವೀತದ ।
ಕಟ್ಟೆಯಿರುಕಿದ ಕಕ್ಷಪಾಳದ ಬೆರಳ ಜಪಸರದ ॥
ಉಟ್ಟ ಧೋತ್ರದ ಬಳಲು ಗಚ್ಚೆಯ ।
ಅಟ್ಟಹಾಸದ ನಗೆಯ ಜನಗಳ ।
ನಿಟ್ಟಸುತ ಪರಮೇಷ್ಠಿಯಂದದಿ ಬಂದನೋಲಗಕೆ ॥

೧೩. ಕಾಡಿನಲ್ಲಿರುವ ಬೇಡಗಿತಿಯರನ್ನೂ ದಾಸರು ಮನಗೊಂಬುವಂತೆ ವರ್ಣಿಸಿರುವರು. ಬಿದಿರಕ್ಕಿಯನ್ನು ಕುಟ್ಟುವ ಮುಂದೆ ಚಿಂಚಿತಿಯರು ತೋರಿದುದು,

ಚಿತ್ರಜವಿಧಿನಿರ್ಮಿಸಿ ರಂಗುನೀಲದ | ಪುತ್ತಳಿಗಳಿಗೆ ಚೇತನವ |
ಇತ್ತರೀ ಬನದೊಳು ಬಂದರೆಂಬಂತೆ ಪೆ | ಣ್ಮೊತ್ತವೊಪ್ಪಿರ್ದುದಲ್ಲಲ್ಲಿ ||

ತಿಣ್ಣಜವ್ವನದ ಚಿಂಚಿತಿಯರವೆಯ್ಯಾ | ರ್ಬಣ್ಣದ ಚೆಲ್ವನೋಳ್ಪರಿಗೆ |
ಹುಣ್ಣಿಮೆಯಾಳ್ವ ತನ್ನಸಕವನವರೆಸ | ಳ್ಗಣ್ಣೊಳು ಸಾರ್ಚಿದಂತಿಹುದು||

ಮದನ ಮಂದಿರದ ಬಾಗಿಲಿಗೆ ತೋರಣವ ಕ | ಟ್ಟಿದವೊಲು ತಳಿರುಡೆ ಮೆರೆಯೆ|
ಹೃದಯಮಂಟಪಶಿಖರದಜೋಡಿಗಳಸದಂ | ತೆಸೆಯೊಳಿರ್ದುವುಕುಚಯುಗಳ||

ಕದಲುವ ಚರಣ ಕಂಪಿಸುವನುಣ್ದೊಡೆಗಳ | ಬಿದಿರುವ ಜಘನ ತೆಳ್ವಸಿರ |
ಆದಿರುವ ಮೊಲೆಗಳಾಡುವ ತೋಳ್ದರುಬೆಯರ್ | ಮಧುರ ಸುಸ್ವರದೆ
ಪಾಡಿದರು ||

೧೪ ಬೇಟೆಯ ನಾಯಿಗಳ ವರ್ಣನೆ,

ಉಡು ಮೊಲ ನರಿ ಹುಲ್ಲೆ ಮರೆ ಸಾರಗಗಳ ಕಂ | ಗೆಡಿಸುವ ಜಂಘಾಲಿಗಳು |
ನಡುವಿನ ರತ್ನ ಮೇಖಲೆಯಾಂತು ಬಾಲವ | ಬಡಿಯುತೆ ನಡೆದುವೊಗ್ಗಿನಲಿ||

ಆಗುಳಿಸುತ ಬಾಯ ಸವರಿಯೊಗ್ಗಿಸುತ ಕ | ರ್ಮೂಗಿಂದ ನೆಲನವಾಸನಿಸಿ |
ಮೇಘಾಳಿಯು ನಾರೈವ ಚತುಷ್ಪದಿ | ವೇಗದಿ ನಡೆದುವಾಕ್ಷಣದಿ ||

---

# ೫. ಕನಕದಾಸರ ಕಾವ್ಯ ವ್ಯಾಸಂಗ.

ಕನಕದಾಸರು ಪ್ರತಿಭಾಶಾಲಿಗಳು; ಅಸಾಧಾರಣ ಕಬ್ಬಿಗರು; ಮೋಹನತರಂಗಿಣಿ ನಳಚರಿತ್ರೆಗಳಂತಹ ಸರಸ ಕಾವ್ಯಗಳನ್ನು ರಚಿಸಿದರು; ಅವುಗಳೊಳಗಿನ ಕೆತೆಗಾಗಿ ದಾಸರು ಭಾರತ, ಭಾಗವತ, ಹರಿವಂಶ ಮೊದಲಾದ ಪುರಾಣಗಳನ್ನು ಓದಿದರು; ಎಂದು ಬರೆಯಲಾಯಿತು. ದಾಸರ ಮೇಲೆ ಆಧುನಿಕ ಕವಿಗಳ ಸಂಸ್ಕಾರವಾಗಿದ್ದಿತೊ? ಇಲ್ಲವೆ, ದಾಸರು, ಒಮ್ಮೆಲೆ, ಕಾವ್ಯ ರಚನೆಯನ್ನು ಕೈಕೊಂಡರೊ? ಎಂದು ವಾಙ್ಮಯ ಚಿಕಿತ್ಸಕರು ಕೇಳುವುದು ಸ್ವಾಭಾವಿಕ. ದಾಸರು ಈ ಪ್ರಶ್ನೆಗೆ ತಾವೇ ಉತ್ತರವನ್ನಿತ್ತಿರುವರು.

ತರಂಗಿಣಿಯಲ್ಲಿ ದಾಸರೆನ್ನುವುದು,

ಏತಕೆನ್ನನು ಕೀರ್ತಿಸಬೇಕು ನನಗೊಂದು। ಸ್ವಾತಂತ್ರ್ಯ ಬುದ್ಧಿ ಬೇರಿಹುದೆ।
ಪೀತಾಂಬರನೋಡಿಸಿದ ಸಾರಣನಂತೆ। ಮಾತ ವಿಸ್ತರಿಪೆಕೇಳ್ ಕೆಳದಿ॥

ತಮಗೆ ನರಕಂಠೀರವನ ವರವಿದ್ದಿತೆಂದೂ ಆದಿಕೇಶವನು ಕಾವ್ಯ ಬರೆಯಲು ಪ್ರೇರಿಸಿದನೆಂದೂ ಆ ಪೀತಾಂಬರನ ಇಚ್ಛೆಯಂತೆಯೆ ಕಾವ್ಯವನ್ನು ಬರೆದೆವೆಂದೂ ದಾಸರು ಸ್ಪಷ್ಟವಾಗಿ ಹೇಳಿರುವರು.

ಮತ್ತೊಂದೆಡೆಯಲ್ಲಿ ದಾಸರು ಅಂದುದು,

ಬರಹವ ತಿಳಿಯಬೇಡೆನುತೆನ್ನನೊಸಲೊಳು। ಬರೆದು ನಿರ್ಮಿಸಲದರಿಂದೆ।
ಬರಹವನರಿಯೆನಾ ಪದವಿಟ್ಟು ಕಡಿತದೊಳ್। ಬರೆದುಮಾಡಿದ ಕೃತಿಯಲ್ಲ॥

ದಾಸರಿಗೆ ಬರೆಹವೆ ಬರುತ್ತಿರಲಿಲ್ಲವೆಂದು ಗ್ರಹಿಕೆಯಾಗುವುದೂ ನಿಜ.

ಇವೆರಡೂ ದಾಸರ ನಮ್ರೋಕ್ತಿಗಳು. ದೇವರೇ ತಮ್ಮನ್ನು ಪ್ರೇರಿಸಿ, ಕಾವ್ಯಗಳನ್ನು ಉಸಿರಿಸಿದನೆಂದು, ಪರಮಭಾಗವತರಾದ ದಾಸರು, ಆ ದೇವರ ಸ್ವಾತ್ರಂತ್ರ್ಯವನ್ನೂ ತಮ್ಮ ದಾಸತ್ವವನ್ನೂ ಪ್ರಕಟಿಸಿರುವರು. ದಾಸರಿಗೆ ಬರೆಹವು ಬರುತ್ತಿರಲಿಲ್ಲವೆಂಬುದರ ಅರ್ಥವನ್ನೂ ಜಾಗ್ರತೆಯಾಗಿ ಅರಿತುಕೊಳ್ಳಬೇಕು. ಕಡಿತದಲ್ಲಿ ಬರೆದಿಡುವ ಕಲೆಯು ತಮಗೆ ಅವಗತವಿದ್ದಿಲ್ಲವೆಂದು ಅವರು ಅಂದಿರಬೇಕೆಂದು ತೋರುತ್ತದೆ. ದಾಸರ ಕಾಲದಲ್ಲಿ 'ಕಾಗದ'ಗಳು ಇದ್ದುದು ನಿಜ. ಆದರೆ, ಕಡಿತದಲ್ಲಿ ಬರೆಯುವುದು ಒಂದು ವಿಶಿಷ್ಟ ಕಲೆಯಾಗಿದ್ದಿತೆಂದೂ ಅದು ಎಲ್ಲರಿಗೂ ಬರುತ್ತಿರಲಿಲ್ಲವೆಂದೂ ತೋರುತ್ತದೆ. ಆ ಕಾಲದಲ್ಲಿ ಕುಶಲರಾದ "ಲಖಿತಜ್ಞ" ಎಂಬದೊಂದು ಕುಲವೆ ಇರಬಹುದೆಂದು ಕಂಡುಬರುವುದು. ದಾಸರು ದ್ವಾರಕೆಯಲ್ಲಿರುವ ಅಂತಹ ಜಾತಿಯನ್ನು ವರ್ಣಿಸಿರುವರು,

ಬಣ್ಣಗಂಬಿಯ ಪುಸ್ತಕಲಿಖಿತಜ್ಞರು। ಕನ್ನಡಕವ ತಾಳ್ದಿಹರು॥

ಮೋಹನತರಂಗಿಣಿಯೊಳಗೆ ಪೀಠಿಕಾಸಂಧಿಯಲ್ಲಿ ದಾಸರು ಸ್ಮರಿಸಿದುದು,

ರವಿರಶ್ಮಿ ಚಲಿಸುವ ದೇಶದೊಳಿಹ ದೇವ। ಕವಿಗಳ ಕಾರುಣ್ಯವಡೆದು।
ಸವಿಮಾತುಗಳ ವಿಸ್ತರಿಸುವೆ ಕೇಳ್ವರ। ಕಿವಿಗೆ ಭೂಷಣವಪ್ಪತೆರದಿ॥

ಭಗವಾನ್ ವ್ಯಾಸರೆ ಮೊದಲಾದ ಭಾರತ ವರ್ಷದೊಳಗಿನ ಕವಿಗಳ ಕಾರುಣ್ಯ ಪಡೆದು ದಾಸರು ಕಾವ್ಯವನ್ನು ರಚಿಸಿದರು. ಈ "ದೇವ ಕವಿಗಳ" ಲ್ಲಿ

ಕಾಳಿದಾಸ, ಶ್ರೀಹರ್ಷ, ವಾದಿರಾಜ ಮುಂತಾದ ಗೀರ್ವಾಣಭಾಷೆಯಲ್ಲಿ ಬರೆದ ಕಬ್ಬಿಗರೂ ಅಡಕವಾಗಿರಬಹುದು. ಮುಂದಿನ ಪದ್ಯದಲ್ಲಿ, ದಾಸರು, ಕನ್ನಡ ಕವಿಗಳನ್ನು ಕೊಂಡಾಡಿರುವರು.

ಉರಗಾಲಯುವೆ ಪೆಸರ್ವಡೆದನ ಮತ್ಸ್ಯೋ। ದರ ಜಾತೆಯಾತ್ಮಸಂಭವನ।
ವರಪುರಾಣಂಗಳ ಕನ್ನಡಿಸಿದ ಕವಿ। ವರರ ಕೊಂಡಾಡುವೆ ಮುದದಿ ||

ಮೀನದ ಉದರದಲ್ಲಿ ಹುಟ್ಟಿದ ಸತ್ಯವತಿಯಲ್ಲಿ ವ್ಯಾಸರು ಜನಿಸಿದರು. ಅವರು ದೇವರ ಅವತಾರ. ಆದುದರಿಂದಲೆ, ವ್ಯಾಸರಿಗೆ, "ಹಾವನ್ನೆ ತಮ್ಮ ಬೀಡನ್ನಾಗಿ ಮಾಡಿಕೊಂಡವರು" ಎಂಬ ವಿಶೇಷಣವನ್ನು ಹಚ್ಚಲಾಗಿದೆ ವೇದವ್ಯಾಸರು ಭಾರತ ಹಾಗೂ ಭಾಗವತಾದಿ ಹದಿನೆಂಟು ಪುರಾಣಗಳನ್ನು ರಚಿಸಿದರೆಂಬ ಆಖ್ಯಾಯಿಕೆಯುಂಟು. ಕನಕದಾಸರು, ವ್ಯಾಸಕೃತ ಪುರಾಣಗಳನ್ನು ಕನ್ನಡಿಸಿದ ಕವಿವರರನ್ನು ಕೊಂಡಾಡಿರುವರು. ಭಾರತವನ್ನೂ ಅವರು ಪುರಾಣಗಳಲ್ಲಿ ಸೇರಿಸಿರಬೇಕಾಗಿ ತೋರುತ್ತದೆ.

ವಿಷ್ಣುಪುರಾಣ ಹರಿವಂಶ ಭಾಗವತಗಳಲ್ಲಿರುವ ಕೃಷ್ಣಚರಿತ್ರೆಯನ್ನು ರುದ್ರಭಟ್ಟನು ಜಗನ್ನಾಥ ವಿಜಯವೆಂಬ ಕಾವ್ಯದಲ್ಲಿ ಬರೆದನು. ಕುಮಾರ ವ್ಯಾಸನು ಹದಿನೈದನೆಯ ಶತಮಾನದಲ್ಲಿಯೆ ಕನ್ನಡ ಭಾರತವನ್ನು ಅರ್ಧ ರಚಿಸಿ ಗತಿಸಿಹೋದನು. ಕೃಷ್ಣದೇವರಾಯನ ಆಳಿಕೆಯಲ್ಲಿ ತಿಮ್ಮಣ್ಣ ಕವಿಯು ಉಳಿದ ಅರ್ಧವನ್ನು ಮುಗಿಸಿ ಕನ್ನಡ ಭಾರತವನ್ನು ಪೂರ್ತಿಗೊಳಿಸಿದನು. ವಿಜಯನಗರದ ಚಾಟು ವಿಠಲನಾಥನು ಭಾಗವತವನ್ನು ಕನ್ನಡಿಸಿದನು. ಮಹಾಭಾರತದ ಆದಿಪರ್ವದೊಳಗಿನ ಆಸ್ತೀಕ ಪೌಲೋಮ ಪರ್ವಗಳನ್ನು ಕನ್ನಡದಲ್ಲಿ ಬರೆದನು. ಲಕ್ಷ್ಮೀಶ ಕವಿಯು, ಭಾರತದ ಅಶ್ವಮೇಧ ಪರ್ವದಲ್ಲಿ ಅಡಕವಾಗಿರುವ ಕತೆಯನ್ನು ಜೈಮಿನಿಭಾರತ ಎಂಬ ಕಾವ್ಯದಲ್ಲಿ ವರ್ಣಿಸಿದನು. ದಾಸರ ಪೂರ್ವದಲ್ಲಿ, ಇಲ್ಲವೆ, ಅವರ ಕಾಲದಲ್ಲಿ, ಇಂತಹ ಎಷ್ಟೋ ಕಾವ್ಯಗಳು ಅಸ್ತಿತ್ವದಲ್ಲಿ ಬಂದಿರಬಹುದು. ಅಂತಹ ಕಬ್ಬಿಗರ ಕೃತಿಗಳನ್ನೋದಿ ದಾಸರು ಅವರನ್ನು ಮನವಾರೆ ಕೊಂಡಾಡಿದರು. ಅವರ ಕಾವ್ಯಗಳನ್ನೋದದೆ, ದಾಸರು, ಅವರನ್ನು ಕೊಂಡಾಡಿದುದು ಅಪ್ರಯೋಜಕ. ಆದರೂ ಕನಕದಾಸರಲ್ಲಿ ಪೂರ್ವದ ಸತ್ಕವಿಗಳ ವಿಷಯದಲ್ಲಿ ಅಗ್ಗಳಿಕೆಯಿಲ್ಲ. ಭಕ್ತಿಸಾರದಲ್ಲಿ ಅವರನ್ನುವುದು,

ನಳಿನಲೋಚನ ನಿನ್ನ ಮೂರ್ತಿಯ |
ಕಳೆಬೆಳಗುತಿದೆ ಲಹರಿಯಲಿ |
ಭೂತಳದೊಳಚ್ಚರಿಯಾನಾಮಾವ್ಯತಸಮುದ್ರದಲಿ ||
ಬಳಸುವರು ಸತ್ಕವಿಗಳವರ |
ಗ್ಗಳಿಕೆಯೆನಗಿನಿತಿಲ್ಲ ಸನ್ಮತಿ |
ಗಳಿಗೆ ಮಂಗಳವಿತ್ತು ರಕ್ಷಿಸು ನಮ್ಮನನವರತ ||

## ಕಾಳಿದಾಸ-ಕನಕದಾಸ.

ಕಾವ್ಯವನ್ನು ಬರೆಯಲು ಟೊಂಕ ಕಟ್ಟಿದ ಕನಕದಾಸರು, ಕಬ್ಬಿಗರರಸನಾದ ಕಾಲಿದಾಸನ ಕೃತಿಗಳನ್ನು ಓದಿರಲಿಲ್ಲವೆಂಬುದು ಅಸಂಭವನೀಯ. ಮೋಹನತರಂಗಿಣಿಯಲ್ಲಿ ಕಾಮದಹನದ ಕತೆಯು ಬರುತ್ತದೆ. ಭಾಗವತ ಹರಿವಂಶಗಳಲ್ಲಿಲ್ಲ. ಸ್ಕಂದಪುರಾಣದಲ್ಲಿ ಮತ್ತು ಕಾಳಿದಾಸನು ಬರೆದ ಕುಮಾರಸಂಭವವೆಂಬ ಕಾವ್ಯದಲ್ಲಿ ಆ ಕತೆಯು ಸಂಪೂರ್ಣವಾಗಿ ಅಡಕವಾಗಿದೆ. ತರಂಗಿಣಿಯಲ್ಲಿ ಕನಕದಾಸರ ಮೇಲೆ ಕಾಳಿದಾಸನ ಕುಮಾರಸಂಭವದ ಸಂಸ್ಕಾರವಾದುದು ಕಂಡುಬರುವುದುಂಟು.

೧. ತಸ್ಮಿನ್ವನೇ ಸಂಯಮಿನಾಂ ಮುನೀನಾಂ |
ತಪಃಸಮಾಧೇಃಪ್ರತಿಕೂಲವರ್ತೀ ||
ಸಂಕಲ್ಪಯೋನೇರಭಿಮಾನಭೂತ |
ಮಾತ್ಮಾನಮಾಧಾಯ ಮಧುರ್ಜಜೃಂಭೇ ||

ಮಧುಮಾಸವು ಬಂದೊಡನೆ ಗಿಡಗಳು ಕೊನರಿದುವು. ಕೋಗಿಲಗಳು ಕೂಗಲಾರಂಭಿಸಿದುವು.

ತಪಸ್ವಿನಃ ಸ್ಥಾಣುವನೋಕಸಸ್ತಾ |
ಮಾಕಾಲಿಕೀಂ ವೀಕ್ಷ್ಯ ಮಧುಪ್ರವೃತ್ತಿಂ ||
ಪ್ರಯತ್ನಸಂಸ್ತಂಭಿತವಿಕ್ರಿಯಾಣಾಂ |
ಕಥಂಚಿದೀಶಾ ಮನಸಾಂ ಬಭೂವುಃ ||

ತರಂಗಿಣಿಯಲ್ಲಿ ಇದರ ಅನುವಾದವಿದ್ದಂತೆ ತೋರುತ್ತದೆ.

ಕಳುಹಿದೊಡೊಳಹೊಕ್ಕು ವೃಕ್ಷಂಗಳ ನೆರೆ । ತಳಿರಿಸಿದನು ಚೈತ್ರ ಬಿಡದೆ ।
ಕುಳಿರ್ವಕರದ ಚಂದ್ರ ತಂಗಾಳಿ ಮೆಯ್ಸೋಂಕಿ । ಸುಳಿದುದು ಹರನ ಸಮ್ಮುಖಕೆ ॥

ಫುಲ್ಲಶರನ ಮಾರ್ಬಲ ಬನದೊಳು ಪೊಕ್ಕು । ಚೆಲ್ಲವರಿದು ಪೀಡಿಸಲು ।
ಪಲ್ಲವಿಸಲು ಸದನದೊಳಿರ್ದರಿಸಿಗಳು । ಗಲ್ಲಕೆ ಕರವ ಸಾರ್ಚಿವರು ॥

ಗಳರವಗಳ ಮಾಳ್ಪಬಗೆದರೆ ಹಲುಬುವ । ಕೊಳರ್ವಕ್ಕಿ ಕೆಲವು ಲಾವುಗೆಯ ।
ಬಳಸದ ದನಿಗೇಳ್ದ ಮುನಿಗಳ ಚಿತ್ತತ । ತ್ತಳವಾದುದೇನ ಹೇಳುವೆನು ॥

೨. ತಪದಲ್ಲಿರುವ ಶಿವನನ್ನು ವರ್ಣಿಸಿರುವುದು,

ಕಿಂಚಿತ್ಪ್ರಕಾಶಸ್ತಿಮಿತೋಗ್ರತಾರೈ ।
ಭ್ರೂರ್ವಿಕ್ರಿಯಾಯಾಂ ವಿರತಪ್ರಸಂಗೈಃ ॥
ನೇತ್ರೈರವಿಸ್ಪಂದಿತಪಕ್ಷ್ಮಮಾಲೈ ।
ರ್ಲಕ್ಷ್ಯೀಕೃತಘ್ರಾಣಮಧೋಮಯೂಖೈಃ ॥

ಬಿಗಿದ ಪದ್ಮಾಸನ ನಾಸಿಕಾಗ್ರ ದೃಗು । ಯುಗಳ ಸಂಚಲಿಸದ ಚಿತ್ತ ।
ಬಗೆದೋರುತಿಹ ರಾಮನಾಮವ ಜಾನಿಪ । ಜಗದೆರೆಯನ ಕಾವ ಕಂಡ ॥

೩. ಕಾಮನು ಶಿವನನ್ನು ಕಂಡು ಬಾಣವನ್ನು ಎಸೆಯುವಷ್ಟರಲ್ಲಿ ಶಿವನು ಕಣ್ದೆರೆದು ಕಾಮನನ್ನು ಭಸ್ಮಮಾಡಿದುದು,

ಸ ದಕ್ಷಿಣಾಪಾಂಗನಿವಿಷ್ಟಮುಷ್ಟಿಂ ।
ನತಾಂಸಮಾಕುಂಚಿತಸವ್ಯಪಾದಂ ॥
ದದರ್ಶ ಚಕ್ರೀಕೃತಚಾರುಚಾಪಂ ।
ಪ್ರಹರ್ತುಮಭ್ಯುದ್ಯತಮಾತ್ಮಯೋನಿಂ ॥

ವಿಲಸಿತ ಕುಸುಮ ಕೋದಂಡಕ್ಕೆ ಬಿಗಿದ ಕ । ಮ್ಮಲರ್ವಕ್ಕಿವೆದೆಯ ಜೇವೊಡೆದು ।
ಗೆಲವಾಂತು ಕಿವಿವರೆದೆಗೆದೆಚ್ಚ ನೀಲೋ । ತ್ಪಲಬಾಣದಿಂದಲೀಶ್ವರನ ॥

ತಪಃಪರಾಮರ್ಶವಿವೃದ್ಧಮನ್ಯೋ ।
ಭ್ರೂಭಂಗದುಷ್ಪ್ರೇಕ್ಷ್ಯಮುಖಸ್ಯತಸ್ಯ ॥
ಸ್ಫುರನ್ನುದರ್ಚಿಃ ಸಹಸಾ ತೃತೀಯಾ ।
ದಕ್ಷ್ಣಃ ಕೃಶಾನುಃ ಕಿಲ ನಿಷ್ಪಪಾತ ॥

ತಾಗಿದು ಮರ್ಮಸ್ಥಾನವ ಕಡಿದು ವಿ | ಭಾಗಿಸೆ ದೃಢಚಿತ್ತವಿಡಿದು ।
ಭೋಗಿಭೂಷಣಕೋಪವತಾಳಿ ಕಿಡಿಕಿಡಿ । ಯೋಗಿ ಕೆಂಗಣ್ಣ ತೆರೆದ ||

**ಕ್ರೋಧಂ ಪ್ರಭೋ ಸಂಹರ ಸಂಹರೇತಿ ।**
**ಯಾವದ್ಗಿರಃ ಖೇ ಮರುತಾಂ ಚರಂತಿ ||**
**ತಾವತ್ಸವಹ್ನಿರ್ಭವನೇತ್ರಜನ್ಮಾ ।**
**ಭಸ್ಮಾವಶೇಷಂ ಮದನಂ ಚಕಾರ ||**

ಭುಗುಭುಗು ಛಟಿಛಟಿಲೆಂದು ಲೋಚನದಿಂ | ದೊಗೆದ ದಳ್ಳುರಿ ಸುತ್ತಿ ಸ್ಮರನ ।
ಬಿಗಿದ ಬತ್ತಳಿಕೆ ಕರ್ವುವಿಲ್ಲುಸಹಿತೆ ಸು | ಟ್ಟುಗಿದುದು ಉರಿ ನಭಸ್ತಳಕೆ ||
ಕಂದರ್ಪದೇಹ ಹರನ ಕಣ್ಣುರಿಯಿಂದ । ಬೆಂದುದು ನಿಮಿಷಮಾತ್ರದಲಿ ||

ಮೇಲೆ ಉದ್ಧರಿಸಿದ ಪದ್ಯಗಳು ಒಂದಕ್ಕೊಂದು ತೀರ ಹೋಲುತ್ತವೆ. ಅದೇ ಕತೆ; ಅದೇ ಸಂವಿಧಾನಕ; ಅದೇ ಕೃತಿ; ಪರಿವಿಡಿಯಾಗಿ ಇರುವ ಅವೇ ಪದ್ಯಗಳು! ಈ ಶ್ಲೋಕಗಳನ್ನು ಮನದಂಬು, ಕನಕದಾಸರ ಮೇಲಾದ ಕಾಳಿದಾಸನ ಸಂಸ್ಕಾರವನ್ನು ಅಲ್ಲಗಳೆಯುವುದು ಅಸಾಧ್ಯ! " ಕಾಳಿದಾಸರ ಮನೆಯ ಕೀಳುದಾಸನಾನಯ್ಯ, " ಎಂಬು ದಾಸರು ಹಾಡಿದುದೂ ಉಂಟು.

## ಕುಮಾರವ್ಯಾಸ-ಕನಕದಾಸ.

ದಾಸರು ಕುಮಾರವ್ಯಾಸನ ಕಾವ್ಯಕ್ಕೂ ಮನಸೋತಿದ್ದರೆಂದು ತೋರುತ್ತದೆ. 'ಉರಗಾಲಯವೆ' ಎಂಬ ಪದ್ಯವನ್ನು ಅನ್ನುವಾಗ್ಗೆ, ಪ್ರಾಮುಖ್ಯ ವಾಗಿ ಕುಮಾರವ್ಯಾಸನ ಹೆಸರೆ, ದಾಸರ ಕಣ್ಣಮುಂದೆ ನೆಲಿಸಿದ್ದಿತೆಂದು ಹೇಳ ಬಹುದು. ಭಾಮಿನೀಷಟ್ಪದಿಯ ಪದ್ಯಗಳಲ್ಲ ಆ ಕವಿಯು ಅನುಸರಿಸಿದ ಪದ್ಧತಿಯನ್ನೇ ದಾಸರು ಅನುಕರಿಸಿದರೆಂದು ಅನಿಸುತ್ತದೆ.

೧. ಧರ್ಮರಾಯನು ದ್ಯೂತವನ್ನಾಡಿ ರಾಜ್ಯ ಸೋತನೆಂಬ ಕತೆಯನ್ನು ಸಭಾಪರ್ವದಲ್ಲಿ ಹೇಳಿದೆ. ಧರ್ಮರಾಯನು ಸೋತಸುದ್ದಿಯು ದ್ರೌಪದಿಗೆ ತಲುಪಿತು. ಆ ಸಂದರ್ಭದೊಳಗೆ ಕನ್ನಡ ಭಾರತದಲ್ಲಿರುವುದು,

ತಾಯೆ ಬಿನ್ನಹವಿಂದು ನಿನ್ನಯ ।
ರಾಯ ಸೋತನು ಜೂಜಿನಲಿ ಕುರು |
ರಾಯ ಗೆಲಿದನು ಕೋಶವನು ಕರಿತುರಗರಥ ಸಹಿತ ||

ನೋಯಲಾಗದು ಹಲವು ಮಾತೇ |
ನಾಯುಧಿಷ್ಠಿರ ನೃಪತಿ ಸೋತನು |
ತಾಯೆ ಭೀಮಾರ್ಜುನನಕುಲಸಹದೇವನೀವ್ಸಹಿತ ||

ಅರಳಿದಂಬುಜ ವನಕೆ ಮಂಜಿನ |
ಸರಿಯು ಸುರಿವಂದದಲಿ ಸುಗ್ಗಿಯು |
ಸಿರಿಯ ಹೊಸ ಬೆಳದಿಂಗಳನು ಬಲು ಮುಗಿಲು ಕವಿದಂತೆ ||
ಚರನ ಬಿನ್ನಹ ಕರಿಸಿ ಮೊದಲಾ |
ಗಿರೆ ಸಮಸ್ತಸಖೀಜನದ ಮುಖ |
ಸರಸಿರುಹ ಬಾಡಿದುದು ಮುಸುಕಿತು ಮೌನಮಯ ಜಲದ ||

ನಳನು ಪುಷ್ಕರನಿಗೆ ತನ್ನ ರಾಜ್ಯವನ್ನು ಜೂಜಿನಲ್ಲಿ ಸೋಲುವನು. ಆ ಸುದ್ದಿಯು ದಮಯಂತಿಗೆ ಮುಟ್ಟಿದುದು,

ತಾಯೆ ಬಿನ್ನಹವಿಂದು ನಿಮ್ಮಯ |
ರಾಯ ಸೋತನು ಜೂಜಿನಲಿ ನಿ |
ರ್ದಾಯದಲಿ ಪುಷ್ಕರನು ಗೆಲಿದನು ಸಕಲ ರಾಜ್ಯವನು ||
ನೋಯಲಾಗದು ಚಿತ್ತದಲಿ ಸಿರಿ |
ಬೀಯವಾದುದು ಕೇಳಿಯಿನ್ನಿದ |
ರಾಯತವ ನೀವ್ ಬಲ್ಲಿರೆಂದನು ವಿಪ್ರ ಕೈಮುಗಿದು||

ಕಮಲವನದಲಿ ಮಂಜು ಸುರಿವಾ |
ಕ್ರಮದಬಗೆಯಲಿಸತಿಯಳಿಗೆ ಮುಖ |
ಕಮಲ ಬಾಡಿತು ನುಡಿಯ ಕೇಳುತ ಮನದ ಚಿಂತೆಯಲಿ ||
ಕಮಲನಾಭನ ಕರುಣ ಕವಚವು |
ಸಮೆದರಾರೇಗುವರು ಶಿವಶಿವ |
ಕುಮತಿಪುಷ್ಕರನಿಂತು ಮುನಿದನೆಯೆನುತ ಮರುಗಿದಳು ||

೨. ದುಶ್ಶಾಸನನು ದ್ರೌಪದಿಯ ಸೆರಗನ್ನು ಸೆಳೆಯುವಾಗ್ಗೆ ಆಕೆಯು ಶೋಕಿಸಿದುದು,

ಹೊಲಬುದಪ್ಪಿದ ಹುಲ್ಲೆ ಬೇಡನ ।
ಬಲೆಗೆ ಬಿದ್ದಂತಾದೆನೈ ಬಲು ।
ಹಳುವದಲಿ ತಾಯಿ ಬಿಸುಟ ಶಿಶು ತಾನಾದೆನೈ ಹರಿಯೆ ॥

ಜೂಜಿನಲಿ ಸೋತ ನಳನು ನುಡಿದುದು,

ಹೊಲಬುದಪ್ಪಿದ ಹುಲ್ಲೆ ಬೇಡನ ।
ಬಲೆಗೆ ಬಿದ್ದಂತಾಗೆ ನಳನೃಪ ।
ತಿಲಕನೆಂದನು ಮನದ ದುಗುಡದಿ ತನ್ನ ನಿಜಸತಿಗೆ ॥

೩. ಧರ್ಮರಾಯನು ಜೂಜಾಟವನ್ನಾಡಿದ ಬಗೆ,

ಆಡಿದನು ನೃಪನಾಕ್ಷಣಕೆ ಹೋ ।
ಗಾಡಿದನು ಖೇಚರರ ಖಾಡಾ ।
ಖಾಡಿಯಲಿ ಜೋಡಿಸಿದ ಹಯುವನು ಹತ್ತು ಸಾವಿರವ ॥
ಹೂಡಿದನು ಸಾರಿಗಳ ಮರಳಿ ।
ನ್ನಾಡುವೊಡೆ ಪಣವಾವುದೈ ಮಾ ।
ತಾಡು ಧರ್ಮಜಯೆನೆ ಮಹೀಪತಿ ಧನವ ಚಿಂತಿಸಿದ ॥

ನಳಪುಷ್ಕರರ ಜೂಜಾಟದ ವರ್ಣನೆ,

ಹೂಡಿದರು ಸಾರಿಗಳ ನೆತ್ತವ ।
ನಾಡಿದರು ಮನವೊಲಿದು ಖಾಡಾ ।
ಖಾಡಿಯಲಿ ದುಗಬಾರಯಿತ್ತಗವೆಂಬ ಹರುಷದಲಿ ॥

೪. ದ್ರೌಪದಿಯ ಸ್ವಯಂವರದ ಕಾಲದಲ್ಲಿ, ವಿಪ್ರವೇಷವನ್ನು ತಳೆದ ಅರ್ಜುನನು ಬ್ರಾಹ್ಮಣರ ಗುಂಪಿನೊಳಗಿಂದ ಮತ್ಸ್ಯಭೇದ ಮಾಡಲು ಸಜ್ಜನಾಗಿ ನಿಂತಿರುವಾಗ ಕುಮಾರವ್ಯಾಸನು ಅವನನ್ನು ವರ್ಣಿಸಿದುದು ಕನಕದಾಸರ ಸುದೇವನನ್ನು ಹೋಲುವುದು. ಸುದೇವನು ನಳನನ್ನು ಹುಡುಕುತ್ತ ಅಯೋಧ್ಯೆಯ ಅರಸನ ಆಸ್ಥಾನವನ್ನು ಸೇರಿದಾಗ್ಗೆ ದಾಸರು ಅವನ ವರ್ಣನೆ ಕೊಡುವರು. ಅರ್ಜುನನ ಜೊತೆಯಲ್ಲಿಯೆ ಭಾರತದ ಪ್ರಹ್ಲಾದನ ದೃಶ್ಯವನ್ನೂ ಉದ್ಧರಿಸಲಿದೆ. ಈ ಸಾಮ್ಯವನ್ನು ಮನಗೊಳ್ಳಬೇಕು ಅರ್ಜುನ,

ತೊಟ್ಟ ಹೊಸವುಪವೀತದಟ್ಟಿಯು।
ಮುಟ್ಟ ನೊಸಲಲಿ ಕುಶೆಯು ಕರಡಿಗೆ।
ಕಟ್ಟಿಯಿರುಕಿದ ಕಕ್ಷ ಬೆರಳಲಿ ಮುರಿದ ದರ್ಭೆಗಳ ||
ಉಟ್ಟ ಭಾಸುರಬಳಲಗಚ್ಚೆಯು।
ಲಟ್ಟ ಹಾಸದ ಜನರನಗೆಗಳ।
ನಟ್ಟವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ ||

ಪ್ರಹ್ಲಾದ,

ಇಟ್ಟ ದ್ವಾದಶನಾಮ ವ್ಯೆಯಲಿ।
ತೊಟ್ಟನಾಯುಜ್ಞೋಪವೀತವ |
ಬೊಟ್ಟನಲಿ ಕುಶೆಯಿರುಕಿ ಬಂದನು ರಾಜಮಂದಿರಕೆ ||
ಕಟ್ಟಿಕೊಂಡನು ತಾನು ತುಲಸಿಯ।
ನಿಷ್ಠೆಯಲಿ ತಾ ಹರಿಯ ನಾಮದ |
ದಟ್ಟಣೆಯ ಬಿಡದಾಗ ನೆನೆಯುತ ರಾಜಬೀದಿಯಲಿ ||

ದಾಸರ ಸುದೇವನು,

ಇಟ್ಟ ಫಣೆಯೊಳಗೆಸೆವ ಮುಟ್ಟಿಯು।
ತೊಟ್ಟ ಹೊಸ ಯುಜ್ಞೋಪವೀತದ।
ಕಟ್ಟಿಯಿರುಕಿದ ಕಕ್ಷಪಾಳದ ಬೆರಳ ಜಪಸರದ ||
ಉಟ್ಟ ಧೋತ್ರದ ಬಳಲುಗಚ್ಚೆಯು |
ಅಟ್ಟಹಾಸದ ನಗೆಯ ಜನಗಳ |
ನಿಟ್ಟಸುತ ಪರಮೇಷ್ಠಿಯಂದದಿ ಬಂದನೋಲಗಕೆ ||

೫. ಕನ್ನಡ ಭಾರತದೊಳಗಿನ ದುಃಶಾಸನನು,

ಹೊಗೆ ಮೊಗದ ಕಿರುಗಣ್ಣ ಕೆಮ್ಮೊ।
ಸೆಗಳ ಗುಜುರಿನ ಜುಂಜುಕೇಶದ।
ವಿಗಡನೆದ್ದನು ಬಂದು ಹಿಡಿದನು ದ್ರೌಪದಿಯ ಸೆರಗ ||

ನಳಚರಿತ್ರೆಯಲ್ಲಿಯ ಕಲಿಪುರಷನು,

ಕುರುಳು ಜುಂಜುರ ತಲೆಯ ತಗ್ಗಿನ।
ಕೊರಳ ಕೆಂಗರಿಗಣ್ಣ ಮೋರೆಯ |
ಹರಕು ಗಡ್ಡದ ಕೆಂಚು ಮೀಸೆಯ ಮಲಿನವಸನದಲಿ ||

ಚಿತ್ರಲೇಖೆಯು ಆಕಾಶಮಾರ್ಗವಾಗಿ ದ್ವಾರಕೆಗೆ ಹೋಗುವಾಗ್ಗೆ ಕಂಡ ಭೂತಗಳು,

ಜುಂಜುರುದಲೆಯೂರ್ಧ್ವರೋಮ ಕೆಮ್ಮೀಸೆ ಕೈ । ಪಂಜುಗಳೆನೆ ಬೆಂಕಿಗಣ್ಣು।
ನಂಜೊರೆವಾಯ ಗೋದಣೆವಲ್ಲ ಭೂತಗಳ್ । ಮಂಜುಳವೆನೆ ನೆಗಹಿದುವು ॥

## ಲಕ್ಷ್ಮೀಶ–ಕನಕದಾಸ.

ಶ್ರೀಮಾನ್ ಗೋವಿಂದ ಪೈಯವರು ಜೈಮಿನಿಭಾರತವು ೧೪ನೆಯ ಶತಮಾನದಲ್ಲಿ ಹುಟ್ಟಿತೆಂದು ಅನ್ನುವರು. ಶ್ರೀ. ರಾಜಪುರೋಹಿತರು, ಲಕ್ಷ್ಮೀಶ ಕವಿಯು, ೧೫೨೦ ರಲ್ಲಿ ಜೈಮಿನಿಭಾರತವನ್ನು ಬರೆದು ಮುಗಿಸಿದ ನೆಂದು ಮತಪಡುವರು. ಶ್ರೀ. ಡಿ ಎಲ್. ನರಸಿಂಹಾಚಾರ್ಯರು ಪ್ರತಿ ಪಾದಿಸುವುದೇನಂದರೆ, “ ಗೋವಿಂದನೆಂಬ ಕವಿಯು ‘ ನಂದೀಮಹಾತ್ಮ್ಯ ’ ಎಂಬ ಕಾವ್ಯವನ್ನು ಬರೆದನು. ಅವನ ಆಶ್ರಯದಾತನು ಇಮ್ಮಡಿ ಹಾವಳಿ ಭೈರವನು. ಈ ಹಾವಳಿ ಭೈರವನ ಒಂದು ಶಾಸನವು ೧೫೫೮ ಇಸ್ವಿಯ ದೆಂದು ಗೊತ್ತಾಗುತ್ತದೆ. ಲಕ್ಷ್ಮೀಶನು, ಗೋವಿಂದ ಕವಿಯ ಸ್ತುತಿಗೆ ಪಾತ್ರ ನಾಗಿರುವುದರಿಂದ, ಅವನ ಕಾಲಕ್ಕಿಂತಲೂ ಹಿಂದೆ ಇದ್ದಿರಬೇಕು. ಆದುದ ರಿಂದ ಲಕ್ಷ್ಮೀಶನು ೧೬ನೆಯ ಶತಮಾನಕ್ಕಿಂತಲೂ ಹಿಂದಿನವನೆಂಬುದು ನಿರ್ವಿವಾದವಾದ ಮಾತು. ” ಈ ಮೂರೂ ಜನರ ಮತದ ಆಧಾರದ ಮೇಲಿಂದ ಲಕ್ಷ್ಮೀಶನು ಕನಕದಾಸರ ಹಿಂದಿನವನೆಂದು ಹೇಳಬಹುದು. ಆದುದರಿಂದ ದಾಸರು ಜೈಮಿನಿಯನ್ನು ಅವಲೋಕಿಸಿರಬೇಕೆಂದು ಅನ್ನ ಬಹುದು. ಲಕ್ಷ್ಮೀಶ ಕವಿಯ ವರ್ಚಸ್ಸು ದಾಸರ ಮೇಲೆ ಬಿದ್ದಿದ್ದಿತೆಂದು ತೋರುತ್ತದೆ.

೧. ಧರ್ಮರಾಯನ ರಾಜ್ಯದಲ್ಲಿ ನೆಲಸಿದ ನೀತಿಯವಿಷಯದಲ್ಲಿ ಲಕ್ಷ್ಮೀಶನು ಅನ್ನುವುದು,

ಗಾರುಡದೊಳಹಿತತ್ವಮಾರಣ್ಯದೋಳ್ದಾನ ।
ವಾರುಣಂ ಚಾರುಪ್ರವಾಳಮಣಿರುಚಿಯೋಳ್ಸ ।
ದಾರುಣಂ ಸರಸಿಯೋಳ್ಕಳಹಂಸಮಯಮುತ್ಪಲಾಕ್ಷಿಯರ ಕಂಧರದೊಳು ॥

ಹಾರವಲಯಂ ಭೂರುಹದೊಳನೇಕಾಗ್ರತೆ ನ ।
ವಾರಾಮದೊಳ್ಮಹಾಶೋಕಂ ವಸಂತದೋ ।
ಳ್ಮಾರಹಿತಮುಂಟಲ್ಲದಿಲ್ಲಮಿವು ಮತ್ತೆಲ್ಲಿಯುಂ ಧರ್ಮಜನ ನೆಲದೊಳು ॥

ಕುಟಿಲ ಚಂಚಲ ಕಠಿಣ ಕೃಶಮಾಂದ್ಯಮೆಂಬಿವು ।
ತ್ಕಟಯೌವನಶ್ರೀವಿಲಾಸಿನಿಯರಳಕಾಳಿ ।
ಚಟುಲಸುಕಟಾಕ್ಷ ವಕ್ಷೋಜಾತ ಮಧ್ಯಗತಿಗಳ ವಿಲಾಸದೊಳಲ್ಲದೆ ॥
ಘಟಿಸದು ಮದಾವಸ್ಥೆ ನಿಗಳಬಂಧನವ ಸಂ ।
ಕಟ ಹರಿದ್ವೇಷ ಮತಿಹೀನತೆಗಳೆಂಬವಿಭ ।
ಘಟಿಯೊಳಲ್ಲದೆ ಸಲ್ಲದೆಲ್ಲಿಯುಂ ಧರ್ಮತನಯಂ ಪಾಲಿಸುವ ನೆಲದೊಳು ॥

ಕೊಡೆಯೆಂಬರಾತಪತ್ರವನುದರದೇಶಮಂ ।
ಪೊಡೆಯೆಂಬರೊಲಿದು ಮಂಥನವನೆಸೆಗೆಂಬುದಂ ।
ಕಡೆಯೆಂಬರಾರಡಿಯನಳಿಯೆಂಬರುದಕಪ್ರವಾಹಮಂ ತೊರೆಯೆಂಬರು ॥
ಮಡಿಯೆಂಬರಂಬರದ ಧೌತಮಂ ಕಬರಿಯಂ ।
ಮುಡಿಯೆಂಬರೆಡೆವಿಡದೆ ಮುಸುಕಿರ್ದ ಮೇಘಮಂ ।
ಜಡಿಯೆಂಬರುರುಶಿಲೆಯನರೆಯೆಂಬರಲ್ಲದಿವನುಡಿಯರವನಾಳ್ವಿಳೆಯೊಳು ॥

ಶ್ರೀಕೃಷ್ಣನ ರಾಜ್ಯದೊಳಗಿರುವ ಪರಿಸ್ಥಿತಿಯನ್ನು ದಾಸರು ವರ್ಣಿಸಿದುದು,

ಪೊಡೆಯೆಂಬುದು ಗಂಧಶಾಲಿಯೊಳ್ ಕೈಯೊಳು। ಕೊಡೆಯೆಂಬರಾತ
ಪತ್ರವನು ।
ತಡೆಯೆಂಬುದಹಿಮಂತ್ರದೊಳಗಲ್ಲದಾದೇಶ। ದೆಡೆಯೊಳೀ ಶಬ್ದಂಗಳಿಲ್ಲ ॥

ಕಂಟಕವೆಂಬುದು ಕೇತಕಿಯೊಳು ರಾಜ। ಕಂಟಕವೆಂಬುದಂಬುಜದಿ।
ಕಂಟಕವೆಂಬುದು ಹಲಸಿನೊಳಲ್ಲದೆ। ಕಂಟಕವಾದೇಶಕಿಲ್ಲ ॥

ದಂಡ ಸನ್ಯಾಸಿವರ್ಗದೊಳುಂಟು ಪುನರಪಿ। ದಂಡ ಗೋಪಾಲರೊಳುಂಟು।
ದಂಡ ಪುಂಡ್ರೇಕ್ಷುವಾಟಿಕೆಯೊಳುಂಟು ಮಿಕ್ಕಿನ। ದಂಡವಾದೇಶದೊಳಿಲ್ಲ ॥

ಕಟ್ಟುವರ್ನಿರಿಕೆಯ ನೀವಿಯೊಳಗೆ ಕೈ। ಗಟ್ಟುವರ್ಕಂಕಣಗಳನು।
ಕಟ್ಟುವರ್ಧಮ್ಮಿಲ್ಲವೆಲೆಯ ಮುಂಡಿಗೆಯನು। ಕಟ್ಟುಕುಟ್ಟೆಂಬುದಲ್ಲಿಲ್ಲ ॥

ಕುಟಿಲ ಕುಂತಲದೊಳು ಮಧುಪಾನ ತೊಂಡೆ ವ। ಣ್ದುಟಿಯೊಳು ಕಠಿನ ಕಾಂತೆಯರ।
ಘಟುಕುಚದೊಳಗಲ್ಲದೀನುಡಿಗಳು ಸಂ। ಘಟಿಸವು ಸೌರಾಷ್ಟ್ರದಲ್ಲಿ ॥

ಹಿಡಿವರು ವಾರನಾರಿಯರ ಬಲ್ಮೊಲೆಗಳ। ಕಡಿವರವರನಳಿತೋಳ।
ಉಡಿಗೆಯ ಸುಲಿವರು ಪಲ್ಲವಾಧರೆಯರ। ಪೊಡವಿಯೊಳತಿ ಖಳರಿಲ್ಲ ॥

ಕನಕದಾಸರು ಲಕ್ಷ್ಮೀಶನ ಕಾವ್ಯವನ್ನು ಓದಿಲ್ಲವೆಂಬುದು ಸರಿಯಾಗಿ ತೋರುವುದಿಲ್ಲ. ಮೇಲಿನ ಪದ್ಯಗಳಲ್ಲಿ ಅಡಕವಾದ ವಿಚಾರಸರಣಿಯಲ್ಲಿ ತೀರ ಸಾಮ್ಯವಿದೆ.

೨. ಧರ್ಮರಾಯನ ಧವಲಯಶಸ್ಸು ಹೇಗಿದ್ದಿತೆಂಬುದನ್ನು ಲಕ್ಷ್ಮೀಶನು ಹೇಳುವುದು,

ನಾಗೇಂದ್ರನಂ ಬಿಡದೆ ತಲೆವಾಗಿಸಿತ್ತಮರ।
ನಾಗೇಂದ್ರನಂ ಬುದ್ಧಿದೊರೆಸಿತ್ತು ಪುರಮರ್ದ।
ನಾಗೇಂದ್ರನನ್ನಿರದೆ ಬೆರಗಾಗಿಸಿತ್ತಮಂ ಧರ್ಮಜನ ಕೀರ್ತಿ ಬಳಿಕ॥
ನಾಗೇಂದ್ರ ಶಯನಾಲಯವ ಜಡಧಿಯೆನಿಸಿ ನುತ।
ನಾಗೇಂದ್ರವರದಾಯುಧವ ಪೊಳ್ಳುಗಳೆದು ಮಥ।
ನಾಗೇಂದ್ರಧರನಜಾತೆಯ ನಿಲುವುಗೆಡಿಸಿ ನೆರೆರಾಜಿಸಿತು ಮೂಜಗದೊಳು॥

ಶಂಬರಾಸುರನ ಕಣ್ಣಿಗೆ ಕಾಣಿಸಿದ ನಾರದನ ಧವಳತೆ,

ಚಂದ್ರನಂತೆ ಚಂದ್ರಶೇಖರನಂತೆ ಮೃ। ಗೇಂದ್ರನಂತಹಿರಾಜನಂತೆ।
ಇಂದ್ರನೈರಾವತದಂತೆ ನಾರದಮೌ। ನೀಂದ್ರ ಶಂಬರನ ಕಣ್ಗೆಸೆದ ||

ಜೈಮಿನಿಯಲ್ಲಿ ಲಕ್ಷ್ಮೀಶನು ಧರ್ಮನನ್ನು ಹರಿ, ಹರ, ಬ್ರಹ್ಮ ಮುಂತಾದವರಿಗೆ ಹೋಲಿಸಿ ಅವರ ಸಾಧರ್ಮ್ಯವನ್ನು ಹೇಳಿರುವನು.

೩. ಕೆಳಗಣ ಪದ್ಯದಲ್ಲಿರುವ 'ಬಲಯುತ' 'ರಾಜಶೇಖರ' 'ರತ್ನಾಕರ' ಮುಂತಾದ ಶಬ್ದಗಳಿಗೆ ಎರಡು ಅರ್ಥವಿದ್ದುದು ಕಂಡುಬರುವುದುಂಟು. ಆಶ್ಲೋಕವು,

ಹರಿಯಂತೆ ಬಲಯುತಂ ಶಿವನಂತೆ ರಾಜಶೇ।
ಖರನಬ್ಜಭವನಂತೆ ಚತುರಾನನಂ ಸರಿ।
ದ್ವರನಂತೆ ರತ್ನಾಕರಂ ದಿವಾಕರನಂತೆ ನಿರ್ದೋಷನಿಂದ್ರನಂತೆ ॥
ಪರಿಚಿತಸುರಭಿರಮ್ಯನಮೃತಾರ್ಚಿಯಂತೆ ವಿ।
ಸ್ತರಿತಕುವಲಯನೆಂದು ಧರೆಪೊಗಳು।
ತಿರೆ ಬಳಿಕ ಹಸ್ತಿನಾವತಿಗೆ ವೇದವ್ಯಾಸಮುನಿಯೊಂದುದಿನಂ ಬಂದನು॥

ತರಂಗಿಣಿಯೊಳಗಿರುವ ಇದೇ ಮಾದರಿಯ ಪದ್ಯವು,

ಶಿವನಂತೆ ಭುಜಗಾಭರಣದಿ ಲಕ್ಷ್ಮೀ | ಧವನಂತೆ ವಿಹಗಧ್ವಜದಿ।
ಅವಯವದೊಳು ಗಂಧವಡೆದ ಚಂದನವೃಕ್ಷ। ನಿವಹವೊಪ್ಪಿರ್ದುದಾವನದಿ॥

ಇಲ್ಲಿ, ಚಂದ್ರನವೃಕ್ಷಸಮುದಾಯವನ್ನು ಶಿವನಿಗೂ ವಿಷ್ಣುವಿಗೂ ಹೋಲಿಸಿ ಹೇಳಲಾಗಿದೆ.

## ಆಂಡಯ್ಯ-ಕನಕದಾಸ.

ಆಂಡಯ್ಯನ ಕಬ್ಬಿಗರಕಾವದಲ್ಲಿ ಶಿವಕಾಮುರ ಕತೆಯಿದೆ. ತರಂಗಿಣಿಯನ್ನು ರಚಿಸುವ ಮುಂಚಿತ ಕಬ್ಬಿಗರ ಕಾವವೂ ಕನಕದಾಸರ ಕಣ್ಮರೆಯಾದಂತೆ ತೋರುವುದಿಲ್ಲ. ಆ ಎರಡೂ ಕಾವ್ಯಗಳ ಗ್ರಂಥಾವತಾರದ ಕ್ರಮದಲ್ಲಿ ತೀರ ಸಾಮ್ಯವಿರುವುದು ಕಂಡು ಬರುವುದುಂಟು. ಪ್ರಸ್ತಾವನೆಯಾದ ಕೂಡಲೆ ಆಂಡಯ್ಯನು "ಕನ್ನಡಮೆನಿಪ್ಪಾನಾಡಿ" ನ ವರ್ಣನೆಯನ್ನು ಮಾಡಿ, ನನೆವಿಲ್ಲಬಲ್ಲಹನ ನೆಲೆವೀಡಾದ ಪೂವಿನ ಪೊಳಲನ್ನು ಬಳಸಿದ ಪೊಂಗೋಂಟೆಯನ್ನು ಹೊಗಳಿ, ಆ ಪಟ್ಟಣದೊಳಗಿರುವ ರಾಯಬೀದಿ, ರನ್ನವಸರ, ಕಂಚುಗಾರರ ಪಸರ, ಸೀರೆವರದರ ಪಸರ, ಮಾಲೆಗಾರ್ತಿಯರ ಕೇರಿ, ಸೂಳೆಗೇರಿಗಳನ್ನು ವಿವರಿಸಿ ಅಲ್ಲಿಯ ಸಂಪತ್ಸಮೃದ್ಧಿಯನ್ನು ವ್ಯಕ್ತಗೊಳಿಸುವನು. ತರಂಗಿಣಿಯಲ್ಲಿ ಪೀಠಿಕಾಸಂಧಿಯಾದೊಡನೆ ಸೌರಾಷ್ಟ್ರದೇಶದ ಸೊಗಸಾದ ವರ್ಣನೆಯಿದೆ. ಆ ಮೇಲೆ ಕೃಷ್ಣನ ನೆಲೆವೀಡಾದ ದ್ವಾರಕೆಯ ಸುತ್ತಲಿರುವ ಕೋಟೆಯ ಚಿತ್ರವಿದೆ. ಅನಂತರ ದ್ವಾರಕಾಪುರದೊಳಗೆ ರಾಜಿಸುವ ವಿವಿಧ ಬೀದಿಗಳೂ ಅಲ್ಲಿರುವ ವಿವಿಧ ಅಂಗಡಿಗಳೂ ಕಂಗೊಳಿಸುವುವು.

ಕನಕದಾಸರು ವರ್ಣಿಸುವ ದೇಶವು ಸೊಗಸಿನ ಬನವಾಸಿಯು ನಾಡು. ಅಲ್ಲಿ, ಕೆರೆಬಾವಿಗಳು, ಎಲೆವಳ್ಳಿ ಬಾಳೆ ಅಡಕೆ ತೆಂಗುಗಳ ತೋಟಗಳು, ಗಂಧಶಾಲಿಯ ವನಗಳು, ಪೂದೋಟಗಳು ಶೋಭಿಸುತ್ತಿರುವುವು. ಕಬ್ಬಿಗರ-ಕಾವದಲ್ಲಿ ಕಾಣುವುದೂ ಅದೇ ದೃಶ್ಯ. ಆಂಡಯ್ಯನೂ ಬನವಾಸಿಯ ದೇಶವನ್ನೇ ವರ್ಣಿಸುತ್ತಿರುವನೆಂದು ತೋರುತ್ತದೆ. ನನೆವಿಲ್ಲ ಬಲ್ಲಹನು, ಆವನ ಪೂವಿನಪೊಳಲು, ಪೊಂಗೋಂಟೆ, ಆವನು ಪುಸಿವಡೆವೆರಸು ಬಡಗೊರವನ ಮೇಲೆ ಪಯಣ ಬೆಳಸಿದುದು, ದಂಡಯಾತ್ರೆಯ ದಾರಿಯಲ್ಲಿ ಬೀಡು ಬಿಟ್ಟ ರನ್ನಗಲ್ಲೆಂಬ ಪಟ್ಟಣ ಮೊದಲಾದವುಗಳು ಐತಿಹಾಸಿಕ ವಿಷಯಗಳಾಗಿರಬಹುದು. ಕಾದಂಬರಲ್ಲಿ 'ಕಾಮ' ಎಂಬ ಹೆಸರುಳ್ಳ ಇಬ್ಬರು ಮೂವರು ಅರಸರಾಗಿಹೋದರು. ನನೆವಿಲ್ಲನು ಮುತ್ತಿದ ದುಟ್ಟ ಗೊರವನು ಶಿವನಲ್ಲ! ಇತಿಹಾಸ ಸಂಶೋಧಕರು ಇತ್ತ ಗಮನಿಸಬೇಕು.

೧. ಆಂಡಯ್ಯನು ತನ್ನ ಖಂಡ ಕಾವ್ಯದಲ್ಲಿ ಸಂಕ್ಷೇಪವಾಗಿ ಬರೆದ ವಿಷಯಗಳನ್ನು ದಾಸರು ತಮ್ಮ ಮಹಾಕಾವ್ಯದಲ್ಲಿ ವಿಸ್ತರಿಸಿರುವರೆಂಬ ಸಂಶಯ ಬರುವುದುಂಟು. ಕಬ್ಬಿಗರ ಕಾವದಲ್ಲಿ ಒಂದೆಡೆಯಲ್ಲಿರುವುದು,

"ನನೆವಿಲ್ಲನ ಬೀರಂ, × × × (೧) ಗಳಗಳನೆ ಪಸರಿಸಿ ಪರಿದ ಬಯಲೊಳ್ ಬೆಳೆವ ಬಿಳಿಯ ಕಬ್ಬಿನ ಕೋಲ್ಗೆ ಕೊರಲುದ್ದಮಾದೆಳೆನೀರ ಪೊನಲ, (೨) ನಲವಿಂ ಬೆಳೆಗೆಯ್ಗೆರಗುವ ಪಕ್ಕಿಗಳನಲೆದು ಸೋವ ನಾಡಗಾಡಿಕಾರ್ತಿಯರ, (೩) ಗಾಡಿಕಾರ್ತಿಯರ ಗಾಡಿಗೆ ಸೋಲ್ತು ನಿಲ್ವಬಟ್ಟೆಗರ × × × ಚೆಲ್ವಿನೊಳಕೊಂಡಿರ್ಪುದು."

೧.

ಕಂಬುಗೊರಲನೊಳು ಕಾದಲ್ಕೆ ಸ್ಮರ ತನ್ನ । ದೊಂದು ಬಿಲ್ಲದು ಸಾಲದೆಂದು।
ತಂದಿಲ್ಲಿ ಬೆಳಸಿದನೆಂಬಂತೆ ಬೆಳ್ಗಬ್ಬು । ಸಂದಣಿಸಿತು ಬನಬನದಿ ||

ಆಗರದೊಳು ರಸದಾಳಿ ತೆಂಗಾಳಿಯಿಂ । ತಾಗಲೊಂದರೊಳೊಂದು ಹಳಚಿ |
ಮೇಗೋಲ್ಗಳೊಡೆದಿನಿರಸದ ಪರಿಯೊಳಿಕ್ಷು | ಸಾಗರ ತುಂಬಿದಂತಾಯ್ತು ||

ಮಿಂಡಿವೆಂಗಳನಗಲಿದ ಚದುರರು ತಮ್ಮ । ದಂಡಿಪುಷ್ಮರಚಾಪವೆಂದು ।
ಭಂಡಿಪೆರ್ಗುಡುಗೋಲುಗಳಿಂದಲಡೆಗಿಕ್ಕಿ | ಖಂಡಿಸುವರು ಕಬ್ಬುಗಳನು ||

ಬಾಲೆಯ ಕೊರಲು ಹೊನ್ನೊರಲು ಸುಸ್ವರಕಣೆ । ಲೀಲೆಗತ್ತರಿ ಕುರುಳ್ಕೊಂಕು।
ಪಾಲಿರ್ದ್ದ ಕುಚಕೊಪ್ಪರಿಗೆ ನಿಟ್ಟೆಸಳ್ಗ | ಣ್ಣಾಲೆಯ ಮನೆಗಳೊಪ್ಪಿದುವು ॥
ಮುದ್ದುನಾಲುಕು ಮೂಲೆಯಾದಂತೆ ತನಿಬೆಲ್ಲ । ದುದ್ದುಕ ವರ ಪಂಚಧಾರೆ ।
ಬಿದ್ದಿಹುದಾಲೆಯ ಮನೆಮನೆಗಳ ಮುಂದೆ । ಹೆದ್ದೊರೆ ಮಳಲೊಟ್ಟನಂತೆ ॥

೨.

ಮಡಿಗಳ ಕಾವ ಪುಳಿಂದಿನಿಯರರೂಪ । ಪಡಿಗಟ್ಟ ಬಲ್ಲವರಾರು ॥
ಮುಡಿತೋರ ಮೊಲೆಯ ಭಾರಗಳಿಂದಲುಂಗರ । ವಿಡಿನಡುಬಳಕುವಂತಿಹರು॥
ಕಾವನ ಮುಂಗೈಯ ಗಿಳಿಯಂತೆ ನುಡಿದುರೆ । ಕಾವನ ಬಿಲ್ಗೋಲ ಪಿಡಿದು ।
ಕಾವನ ರಥವಾಜಿ ಭುಂಜಿಸದಂತೆ ಕೈ । ಗಾವ ಪಾಮರಿಯರೊಪ್ಪಿದರು ॥
ಕೊನೆವಾಳೆ ಕುಸುಮಮಂಜರಿ ಮುಖ್ಯಶಾಲಿಯ । ಕೊನೆಗಳನಗಿವ ಕೀರಗಳು।
ಕೊನೆಗಣ್ಣ ಪಾಮರಿಯರ ದಿಟ್ಟಗಣ್ಣುರು |ಳ್ಗೊನೆಯೆಂದು ಕೊನೆಗೆ ಪಾರಿದುವು॥
ಸುಟಿವೆತ್ತು ಕೊನೆಯಿಂದೆ ಮಗುಳೆ ಬಂದೆರಗುವ । ನಿಟಿಲಾಕ್ಷನ ಶತ್ರುಹಯವ ।
ಕುಟಿಲಕುಂತಲೆಯರದ್ದರಿಸಲ್ಕೆ ತೊಂಡೆವ । ಣ್ಣುಟಿಯ ಪಣ್ಣೆಂದು ಪಾರಿದುವು॥
ನೆತ್ತಿಯೊಳ್ ಪಾರುವ ಗಿಳಿವಿಂಡು ಪಚ್ಚೆಯ । ಸತ್ತಿಗೆಯಂತೆ ಮಂಡಲಿಸೆ ।
ಮತ್ತಕಾಶಿನಿಯರ ದಿಟ್ಟ ಶಂಖದ ಕಾವ | ತೆತ್ತಿಸಿದಂತೆ ಶೋಭಿಸಿತು ॥

೩.

ಮಾಮರದೆಡೆಯಲ್ಲಿ ಮಂಗಳಮಯವಾದ | ಲಾಮಂಚದಮಳ ಚಪ್ಪರದಿ ।
ಹೇಮಾಂಬುರುಹ ಮೊಗ್ಗೆಮೊಲೆಯರು ನೀರ್ವಿಡಿ । ದಾಮಹಾಸ್ಥಲ ಗಳೊಪ್ಪಿದುವು ॥
ಅಂಬರದಲಿ ಪ್ರತಿಬಿಂಬಿಸುತಿಹ ಕುಚ । ಕುಂಭ ತತ್ಕುಂಭವೆಂಬಂತೆ ।
ಕುಂಭಾನ್ವಿತ ಕರಕಮಲದಿ ಸ್ತ್ರೀನಿಕು । ರಂಬ ನೀರ್ವಿಡಿದು ನಿಂದಿಹುದು ||
ಕಳಶಸ್ತನ ಬಾಹುಮೂಲ ನಿರ್ಮಳದ ಕೌಂ । ಕುಳತೋಳ ನೆಗಹಿ ನೀರೆರೆಯೆ।
ಗಳತೃಷ್ಣೆ ಪರಿದೊಡವೊಂಟುವ ನೆವದಿ ಹೆಂ । ಗಳ ಮುದ್ದುಮೊಗವ ನೋಡುವರು ॥
ಕಡುರೂಪು ಕಣ್ಗೆ ವೈಗಂಪು ಮೂಗಿಗೆ ಮೆ | ಲ್ನುಡಿ ಕೊಡಕೆಗೆ ಹೆಂಗಳೆರೆವ।
ಕುಡಿನೀರಿನಿಂಪು ಜಿಹ್ವೆಗೆ ಶೈತ್ಯತನು ವಿಂ | ಗಿಡಿದುದು ಬಳಲಿಬಂದರಿಗೆ ॥

೨. ಇವಲ್ಲದೆ ಆ ಎರಡೂ ಕಾವ್ಯಗಳಲ್ಲಿ ಶಬ್ದಯೋಜನೆ, ಕಲ್ಪನೆ, ಹಾಗೂ ವರ್ಣನೆಗಳೊಳಗೆ ಕೆಲವೆಡೆಯಲ್ಲಿ ಸಾಮ್ಯವಿರುವುದೂ ಕಂಡುಬರುತ್ತದೆ.

**ಶಬ್ದಸಾಧರ್ಮ್ಯ—**

ಕಬ್ಬಿಗರಕಾವ—ಕರ್ವುವಿಲ್ಲನು (ಕಾಮನು) ಬಡಗೊರವನ ಮೇಲೆ ದಂಡೆತ್ತಿ ಹೋಗುವ ದಾರಿಯಲ್ಲಿ ಕಂಡ ಒಬ್ಬ ತವಸಿಯ ದೃಶ್ಯ,

ಬಗೆ ನೊಸಲಲ್ಲಿ ಕೂಡೆ ನಿಲೆ ತಪ್ಪದೆ ಮೂಗಿನ ಚೌಕದಲ್ಲಿ ದಿ।
ಟ್ಟಿಗಳಿರೆ ಮೆಯ್ಯ ಮಣ್ ಕೂರಲ್ಗೆ ಪುತ್ತಿಡೆ ಪರ್ಬಿದಬಳ್ಳಿ ಸುತ್ತಲುಂ॥
ಸೊಗಯಿಸೆ ಕೈಯನಿಕ್ಕಿ ಮಿಗೆ ತನ್ನನೆ ತಾನೊಲವಿಂದೆ ಜಾನಿಸು।
ತ್ತಗಲದೆ ನಿಂದನೊರ್ವ ಸವಣಂ ಬಗೆಗೊಳ್ವಿರೆ ತಟ್ಟತೆಂಬಿನಿಂ॥

ಅವರಂ ಭೋಂಕನೆ ಕಟ್ಟೆದಿರೊಳ್ ಕಂಡು ಕಿಡಿಕಿಡಿಯೋಗಿ ಕರ್ವುವಿಲ್ಲನಿಂತೆಂದಂ.

ತರಂಗಿಣಿ—ತಪಸ್ಸಿಗೊಳಗಾದ ಶಿವನ ವರ್ಣನೆ,

ಬಿಗಿದ ಪದ್ಮಾಸನ ನಾಸಿಕಾಗ್ರದ ದೃಗು। ಯುಗಳ ಸಂಚಲಿಸದ ಚಿತ್ತ।
ಬಗೆದೋರುತಿಹ ರಾಮನಾಮವ ಜಾನಿಪ। ಜಗದೆರೆಯನ ಕಾವ ಕಂಡ॥
ಭೋಗಿಭೂಷಣ ಕೋಪವತಾಳಿ ಕಿಡಿಕಿಡಿ। ಯೋಗಿ ಕೆಂಗಿಡಿಗಣ್ಣ ತೆರೆದ॥

ಇಲ್ಲಿ 'ಬಗೆಗೊಳ್ವಿರೆ ತಟ್ಟತೆಂಬಿನಿಂ,' ಮತ್ತು 'ಬಗೆದೋರುತಿಹ ರಾಮನಾಮವ ಜಾನಿಪ,' ಎಂಬ ಎರಡೂ ಪದಗಳಲ್ಲಿ ಸಾಮ್ಯವಿರುವುದು ಕಂಡು ಬರುತ್ತದೆ. 'ಕಿಡಿಕಿಡಿಯೋಗಿ' ಎಂಬ ಶಬ್ದವೂ ಎರಡೂ ಕಾವ್ಯಗಳಲ್ಲುಂಟು. ಕತೆಯ ಸಂದರ್ಭಸನ್ನಿವೇಶಗಳೂ ಬಂದೇ.

**ಕಲ್ಪನಾಸಾದೃಶ್ಯ.**

ಬಿರುಗಾಳಿ ಮದಗಜದಂತೆ ಬರುವ ಕಲ್ಪನೆಯು ಎರಡೂ ಕಾವ್ಯಗಳಲ್ಲುಂಟು.

ಕ—

ತಳಿರಂ ಮೆಲ್ಲನೆ ನೂಂಕಿ ಮಾವಿಡಿಗಳಂ ಸೆಂಡಾಡುತುಂ ಕೂಡೆ ಪೂ।
ಗಳ ದೂಳಿಂ ಪೊರೆಯೇರುತುಂ ಸೊನೆಗಳೊಳ್ ನೀರಾಟಮಂ ಮಾಡುತುಂ॥
ಬಳಿಯಂ ಕೈಮಿಗೆ ಬರ್ಪ ತುಂಬಿಯುಲಿಯಿಂದಂ ಡಂಗುರಂ ಬೊಯ್ಸುತುಂ।
ತಳರ್ದೆಂ ಬಂದುದೊ ಕಾವನಾನೆಯವೊಲಾ ತಣ್ಗಾಳಿತನ್ನಿಚ್ಛೆಯಿಂ॥

ತ—

ತುರುಗಿದ ಕಾಯಿಪಣ್ಗಳ ಸಾಲವೃಕ್ಷವ। ಮುರಿದು ದೂಳಿಯ ಚೆಲ್ಲಿಕೊಳುತ॥
ಸುರಿವ ಸೊಂಡಿಲ ನೀರ್ಗರೆಯುತ ಬಂದುದು। ಬಿರುಗಾಳಿ ಮದಗಜದಂತೆ॥

ನೆರೆ ಸೊಕ್ಕಿ ಚಪ್ಪಳೆಯೊಳಾಡುವ ವಿಚಾರವು ಎರಡೂ ಕಾವ್ಯಗಳಲ್ಲಿದೆ. ಕಬ್ಬಿಗರ ಕಾವದಲ್ಲಿ, ಕಾಮನನ್ನು ಎದುರಿಸಲು ಬೀರನು ಪುಸಿವಡೆಯೊಡಗೂಡಿ ಮುಂಜುವೆಟ್ಟದಿಂ ಹೊರಡುವನು. ಅವರೀರ್ವರ ನಡುವೆ ಕದನ ವೆಸಗುವುದು. ರಣರಂಗದಲ್ಲಿಯ ರಕ್ಕಸಿಯರ ವರ್ಣನೆ,

ಕ—

ತಲೆಗಳ ಬಟ್ಟಲಿಂ ಮೊಗೆದು ನೆತ್ತರನಾಗಳೆ ಈಂಟಿಯೀಂಟಿ ಮೆ |
ಯ್ಗಲಿಗಳ ಕಂಡದಿಂಡೆಗಳ ಬಕ್ಕಣಮಂ ತವೆ ಮೆಲ್ದು ಮೆಲ್ದು ಮೆ ||
ಯ್ಯೊಲೆದುಡೆ ಜೋಲ್ದು ನಾಣಳಿದು ಕರ್ಣ್ನಸು ಮುಚ್ಚಿರೆ ತೇಗಿತೇಗಿ ಮಾ|
ರ್ಮಲೆದಿದಿರಾಗಿ ಕೈಪರೆಯೊಳಾಡುವ ರಕ್ಕಸಿಯರ್ಕಳೊಪ್ಪಿದರ್ ||

ತ—

ಚಿಪ್ಪಕೊ ಕುಡಿಯೆಂದು ಕುಡಿಸಿ ತಾ ಕುಡಿದು ಕೈ | ಚಪ್ಪಳೆ ಗೊಲೆದಾಡುತಿಹರು ||

## ವರ್ಣನಾಸಾದೃಶ್ಯ.

ಓಲಗದೊಳಗಿರುವ ಮದನನ ಠೀವಿ,

ಕ—

ಕಿವಿಗಿಂಪಂ ಕರೆವಂತೆ ನುಣ್ಚರದೆ ಪಾಡುತ್ತಿರ್ಪ ಪೆಣ್ದುಂಬಿ ಗೊ |
ಪ್ಪುವ ಬಂಡಂ ಬಿಡದೀಯುತುಂ ಗಿಳಿಗಳೋದಂ ಕೇಳ್ದು ಮೆಲ್ಪೊಂದಿ ತೋ |
ರುವ ಪಣ್ಣಂ ತಿಳಿದಿಚ್ಚೆಯಿಂದೆ ಕುಡುತುಂ ಚೆಲ್ವಿಂದೆ ಸಾರ್ತಂದು ಬೇ |
ಡುವ ಮುದ್ದಂಚೆಗೆ ಕೈಯತಾವರೆಯ ಕಾವಂ ಚೆಲ್ಲದಿಂ ನೀಡುತುಂ ||

ತೊಡೆಯೊಳ್ ಕಾದಲೆಯಿರೆ ಬಲ |
ಗಡೆಯಲ್ಲಿ ಬಸಂತ ನೊಲವಿನಿಂ ಕುಳ್ಳಿರೆ ತ ||
ನ್ನಿಡ ದೆಸೆಯೊಳ್ ಸೊಬಗಿಯರಿರೆ |
ಕಡು ಚೆಲ್ವಂ ಪಡೆದ ಸಾವಗಂ ನನೆಗಣೆಯುಂ ||
ಪರಿಪರಿಯ ರನ್ನದೊಡವಿನ |
ಬೆದಕೆಯ ಬೆಳಗಡರೆ ವೈಯ್ಯಾಸಗ್ಗದ ಪೆಂಡಿರ್ ||
ನೆರೆದಲರ ಚವರಮಂ ಬಿ |
ತ್ತರದಿಂ ಬೀಸುತ್ತಮಿರ್ದರೆರುಡುಂ ಕೆಲದೊಳ್ ||

ತ—
ಹೊಂಗಳಸವ ಕೀಳ್ಪಡಿಸುವ ವೃತ್ತ ಕು । ಚಂಗಳ ರತಿಯ ಮೇಳದಲಿ ।
ಕಂಗೊಳಿಸುವ ಕಾಮಗೆ ಬೃಹಸ್ಪತಿಪೂ । ದೊಂಗಲ ನಿತ್ತು ಸಂಧಿಸಿದ ॥

ತರ್ಕಿಪ ಬಗದಾರೆಯಕೂಡೆ ಬಹ ಕೊಳ । ವರ್ಕ್ಕಿಯ ಕೆಲದಾಡಿಸುತ ।
ದಿಕ್ಕಿಗೆ ಪೆಸರಾಂತ ಸಿಪಿಲೆಗೆ ಕವಳವ । ನಿಕ್ಕಿ ಕಾದಿಸುತಿರ್ದ ಮದನ ॥

ಚಂದಿರ ವೀರವಸಂತ ಮಂದಾನಿಲ । ಬಂದಿರೆ ಮೂವರ ಕರೆದು ।
ಎಂದಿನಂತಿರಿ ಪೋಗಿಯೆನುತ ಬೀಳ್ಕೊಟ್ಟು ಸೌ । ಗಂಧಿನಿಯರ ನೋಡು ತಿರ್ದ ॥

ಭೃಂಗೋಪಮಾನಕುಂತಲೆಕೇಳು ಕಸ್ತೂರಿ । ಹಿಂಗದ ಚಮರಗಾರ್ತಿಯರು ।
ಹೊಂಗದಳಿಯ ಕೋಮಲ ಪತ್ರವೀಜನ । ದಂಗನೆ ಮೆರೆದಳೊತ್ತಿನಲಿ ॥

---

# ೬. ಕನಕದಾಸರ ಕಾಲದ ಚಪ್ಪನ್ನದೇಶಗಳು.

ಭಾರತವರ್ಷವನ್ನು ಐವತ್ತಾರು ದೇಶಗಳಲ್ಲಿ ವಿಭಾಗಿಸುವ ವಾಡಿಕೆಯು ಬಹುನಾದಿಯಿಂದ ಬಂದುದು. ಕಾಲಾನುಸಾರವಾಗಿ ಕೆಲ ದೇಶಗಳ ಹೆಸರುಗಳು ಬದಲಾಗುತ್ತ ಹೋದುದು ಸ್ವಾಭಾವಿಕ. ಆದರೂ ಭರತಖಂಡದಲ್ಲಿ ಐವತ್ತಾರು ಭಾಗಗಳನ್ನು ರಚಿಸಿದುದು ಕಂಡು ಬರುತ್ತದೆ. ಕನಕದಾಸರು 'ಚಪ್ಪನ್ನ' ದೇಶ ಎಂಬ ಪದವನ್ನು ಉಪಯೋಗಿಸಿರುವರು. ದ್ವಾರಕೆಯಲ್ಲಿ,

ಚಪ್ಪನ್ನದೇಶದ ನಾಣೆಯಂಗಳ ನೋಟ । ತಪ್ಪದ ಚಪಲ ಸೆಟ್ಟಿಗಳು ।
ಒಪ್ಪವಡೆದು ಕುಳಿತಿರ್ದರು ಹಣ ಹೊನ್ನ । ಕುಪ್ಪೆಯ ಮುಂದಿಟ್ಟುಕೊಂಡು ॥

ಶೋಣಿತಪುರದಲ್ಲಿ,

ಕುಂದಣನವರತ್ನಖಚಿತ ಚೌಭಾರಿಯ । ಮುಂದಣ ನಾಲ್ದೆಸೆಗಳಲಿ ।
ಸಂದಣಿಸಿದರು ಛಪ್ಪನ್ನದೇಶದ ಜನ । ವೃಂದ ಜೂಜಿನ ವಿಷಯದಲಿ ॥

೧. ಐವತ್ತಾರು ದೇಶಗಳು ತಮ್ಮ ಕಾಲದಲ್ಲಿದ್ದುವೆಂದು ಹೇಳಿದರೂ, ದಾಸರು, ಆ ಎಲ್ಲ ದೇಶಗಳ ಹೆಸರನ್ನು ಕೊಟ್ಟಿರುವುದಿಲ್ಲ. ದಾಸರ ಕಾವ್ಯಗಳಲ್ಲಿದ್ದದೇಶಗಳು,

ಮಾಳವ ಮಗಧ ಕಾಶ್ಮೀರ ಗುಜ್ಜರ ಗೌಳ। ಚೋಳ ಕೋಸಲ ದೇಶ ಬೋಟ।
ಲಾಳ ಕನ್ನಡ ವಂಗ ಚೌಟ ಹೊಯ್ಸಳ ಮಲೆ। ಯಾಳ ದೇಶಂಗಳೊಪ್ಪಿದುವು॥

ಇಂತಿವು ಮೊದಲಾದ ಬಹುದೇಶದಲ್ಲಿ ಶ್ರೀ। ಕಾಂತಂಗೆ ತವರೂರೆನಿಸಿ।
ಸಂತಸವಡೆದುದಾಸೌರಾಷ್ಟ್ರ ಸಕಲದಿ। ಗಂತಕ್ಕೆ ಸತ್ಕೀರ್ತಿವಡೆದು॥

ನಳನೃಪನ ಓಲಗದಲ್ಲಿ ನೆಲಿಸಿದ್ದ ಭೂಮಿಪರು,

ಗೌಳ ವಂಗ ಕಳಿಂಗ ಕುಂತಳ।
ಚೋಳ ಬರ್ಬರ ಸಿಂಧು ಕೇರಳ।
ಲಾಳ ಮಾಗಧ ಮರಾಳ ಸೌರಾಷ್ಟ್ರಾದಿ ಭೂಮಿಪರು॥

ದಮಯಂತಿಯ ಸ್ವಯಂವರಕ್ಕೆ ಬಂದ ಅರಸರ ನಾಡುಗಳು,

ಮಾಳವಾಂಧ್ರ ಕಳಿಂಗ ಕೋಸಲ।
ಚೋಳ ಮತ್ಸ್ಯ ವರಾಳ ಕೊಂಕಣ।
ಗೌಳ ಕುಂತಳ ಮಗಧ ಬರ್ಬರ ಪಾಂಡ್ಯ ಕರ್ಣಾಟ॥
ಲಾಳ ವಂಗ ಸುರಾಷ್ಟ್ರ ಕುರು ನೇ।
ಪಾಳ ಘೂರ್ಜರ ಸಿಂಧು ಮರು ಪಾಂ।
ಚಾಳ ಮೊದಲಾದಖಿಳಧರಣೀಪಾಲರೈದಿದರು॥

ಸ್ವಯಂವರದ ಸಮಯದಲ್ಲಿ ದಮಯಂತಿಗೆ ತೋರಿಸಿದ ಅವನೀಪತಿಗಳು,

ಮಾಳವಾಧಿಪನೀತ ಮಗಧ ನೃ।
ಪಾಲನೀತನು ಮತ್ಸ್ಯಕುರು ನೇ।
ಪಾಳನೀತನು ಕೋಸಲಾನ್ವಯನೀತ ಬರ್ಬರನು॥
ಚೋಳನೀತನು ಸಿಂಧುರಾಜ ಸು।
ಶೀಲನೀತ ಕಳಿಂಗ ಕುಂತಳ।
ಪಾಲಕನ ನೋಡಿತ್ತಲಮರೇಶ್ವರನವೋಲಗವ॥

ಈ ರೀತಿಯಾಗಿ ದಾಸರು ಸುಮಾರು ಇಪ್ಪತ್ತೆಂಟು ದೇಶಗಳನ್ನು ನಿರ್ದೇಶಿಸಿರುವರು.

೨. ಕನಕದಾಸರಂತೆ, ರತ್ನಾಕರವರ್ಣಿಯು ಭರತೇಶವೈಭವದಲ್ಲಿ ಕೆಲ ದೇಶಗಳನ್ನು ಕೊಡುವನು. ಭರತೇಶನು ಕೂಡಿದ ಕೆಲ ಹೆಂಡರ ಹದಿಮೂರು ದೇಶಗಳನ್ನು ಬರೆಯುವನು.

ಲಾಟದಂಗನೆಯ ಕಾಶ್ಮೀರದಂಗನೆಯ ಕ। ರ್ಣಾಟದಂಗನೆಯಿಚ್ಛೆಯರಿದು।
ಬೋಟು ಮಹಾಭೋಟು ದೇಶದಂಗನೆಯೆದೆ। ಯಾಟವನರಿದು ಕೂಡಿದನು ॥

ತೌಳವ ತರುಣಿಯ ಮಲೆಯಾಳ ಸತಿಯ ಬಂ। ಗಾಳ ಕಾಂತೆಯರಿಚ್ಛೆಯರಿದು।
ಗೌಳನಾರಿಯರ ಸಿಂಗಳ ದೇಶವಧುಗಳ। ಲೀಲೆಯರಿದು ರಮಿಸಿದನು ॥

ಅಂಗದೇಶದ ಪೆಂಗಳಂಗವನರಿದು ಕ। ಳಿಂಗ ಕಾಂತೆಯ ಕಳೆಯರಿದು।
ವಂಗದೇಶದ ನೀರೆಯರ ನೆಲೆಯರಿದು ಬೆ। ಡಂಗರ ದೇವ ಕೂಡಿದನು ॥

ಸುಕುಮಾರಿ ಸುಲೋಚನಾದೇವಿಯ ಸ್ವಯಂವರಕ್ಕೆ ಬಂದ ಅರಸರ ಪರಿಚಯಮಾಡಿಕೊಡುವಾಗ್ಗೆ ಹನ್ನೊಂದು ದೇಶಗಳ ರಾಜರು ನಿರ್ದಿಷ್ಟರಾಗಿರುವರು. ಅವರಲ್ಲಿ, ಕಚ್ಛ, ಕರ್ನಾಟಕ ಮತ್ತು ಸೌರಾಷ್ಟ್ರದ ಅರಸರನ್ನು ಕೂಡಿಸಬಹುದು.

ಸುಲೋಚನೆಯ ಸಖಿಯು ಮಾಡಿಕೊಡುವ ಪರಿಚಯ,

ನೋಡೀತ ನೇಪಾಳ ರಾಜನೆಂದಳು ಪಾಟ। ಮಾಡದೆಯಿದ್ದಳಾಕೆ ಮುಂದೆ।
ಬಾಡಿತಾತನ ಮೋರೆ ಲಾಗು ತಪ್ಪಿದ ಹೊಸ। ಕೋಡಗದಂತಿದ್ದನವನು ॥

ಹಮ್ಮೀರಪತಿ ನೋಡೆನೆ ನಿಟ್ಟಿಸಿ। ಸುಮ್ಮನೆಯಿದ್ದಳು ಮುಂಗಡೆಗೆ।
ಉಮ್ಮುವ ಕಂಬನಿ ಮಿಗೆಮರುಗಿದನವ। ತಮ್ಮಯ್ಯನೊಡನೆ ಹೋದಂತೆ ॥

ಚೀನ ದೇಶದರಾಯ ನಿವನೆನಲೀಕ್ಷಿಸಿ। ಮೀನಾಕ್ಷಿ ಮುಂದಕೈದಿದಳು।
ಛೀ ನನ್ನ ಬದುಕೇನು ಸುಡುಸುಡೆಂದವನಾಣ್ಚಿ। ಮೌನದಿ ಕುಸಿದನು ತಲೆಯ॥

ಲಾಟದೇಶದರಾಯನಿವನೆನಲೀಕ್ಷಿಸಿ। ಪಾಟ ಮಾಡದೆ ಹೋದಳವಳು।
ಕೂಟದೆಬಂದು ನೂಕಿಸಿಕೊಂಡರಂತೆದೆ। ಗೋಟಲೆಗೊಳುತಿದ್ದನವನು ॥

ಗೌಡದೇಶದ ರಾಯ ನಿವನೆನೆ ಹಳ್ಳಿಯ। ಗೌಡನೆಂದೆಣಿಸಿ ಸಾಗಿದಳು।
ಔಡುಗಚ್ಚಿದವನ ಸೆರೆತು ನೋಡಿದ ತನ್ನ। ಗೌಡಿಯೊ ಬೆದರಿ ಬಹಾಗ ॥

ಬಂಗಾಳದರಸನೀತ ನೋಡೆಂದರೀಕ್ಷಿಸಿ । ಮುಂಗಡೆಗೆಯ್ದಿದಳೊಡನೆ ।
ಸಿಂಗಾರ ಮುರುಕ ವಿಡಾಯ ಹಾರಿತು ಹೊಸ । ಬಿಂಗಿಯುಂತಿರ್ದನಾನೃಪತಿ ॥
ಅಂಗದೇಶಾಧೀಶನೀತ ಕಾಶ್ಮೀರ ಕ । ಳಿಂಗ ಕಾಂಬೋಜನಿವನು ।
ಸಿಂಗಳದರಸನೀತನೆನೆ ನೋಡಿನಗುತ ಮ । ತಂಗಜಗಮನೆ ಸಾಗಿದಳು ॥

ಚೀನದೇಶದ ಹೆಸರನ್ನು ಬದಿಗಿರಿಸಿದರೆ, ರತ್ನಾಕರ ವರ್ಣಿಯು ಇಲ್ಲಿ ಹದಿನೈದು ನಾಡುಗಳ ಹೆಸರನ್ನು ಕೊಟ್ಟಿರುವನೆಂದು ತಿಳಿಯಬಹುದು.

೩. ವಿಜಯನಗರದ ವಿರೂಪಾಕ್ಷಪಂಡಿತನು ಚಪ್ಪನ್ನ ದೇಶಗಳ ಹೆಸರನ್ನು ಕೊಟ್ಟಿರುವನು.

ಅಂಗ ಮಲೆಯಾಳ ಮಾಳವ ಮಗಧ ಬರ್ಬರ ಕ ।
ಳಿಂಗ ಕಾಶ್ಮೀರ ಕೊಂಕಣ ಸಿಂಧು ಹಮ್ಮೀರ ।
ವಂಗ ಹೊಯಿಸಳ ತುಳುವ ಚೋಳ ಚೇಮರ ಪಾಂಡ್ಯ ಯವನ ಸೌವೀರಮಚ್ಛ ॥
ಬಂಗಾಳ ಜೈನ ಜೋನೆಗ ಸಗರ ಹೈವಿಗ ತೆ ।
ಲುಂಗ ಗುರ್ಜರ ಗೌಳ ನೇಪಾಳ ಸೌರಾಷ್ಟ್ರ ।
ಸಿಂಗಳ ದ್ರವಿಡ ಕಾಂಬೋಜ ದೇಶದ ಸಕಲ ಶರಣರೈತರುತಿರ್ದರು ॥
ಲಾಟ ಪಂಚಾಳ ವೈದರ್ಭ ಕುರು ಕುಕುರ ಕರ ।
ಹಾಟ ಕರ್ಪರ ಯವಂತಿಕ ಪಾರಿಯಾತ್ರಕ ।
ಕರ್ಣಾಟ ಕೋಶಲ ಮಂದಭದ್ರ ಕುಂತಳ ಮಹಾಚೀನಕ ವಿದೇಹ ಮೆರೆವ ॥
ಭೋಟಕ ತುರುಷ್ಕವೊಡ್ಡಿಯ ಪಾರಸಿಕ ಮಹಾ ।
ಭೋಟಕ ಪುಳಿಂದಕ ಸ್ತ್ರೀರಾಜ್ಯ ಕೊಂಗು ಮಾ ।
ರಾಟ ಮೊದಲಾದ ದೇಶದ ಶರಣಸಂಕುಲಂ ಬರುತಿರ್ದರುತ್ಸವದೊಳು ॥

ಈ ಐವತ್ತಾರು ದೇಶಗಳಲ್ಲಿ ಮಹಾರಾಷ್ಟ್ರದ ಹೆಸರಿಲ್ಲ. ಕುಮಾರ ವಾಲ್ಮೀಕಿಯ ಗ್ರಂಥಗಳಲ್ಲಿಯೂ ಮಹಾರಾಷ್ಟ್ರದ ಸದ್ದು ಕೇಳಬರುವುದಿಲ್ಲ. ಕನಕದಾಸರತ್ನಾಕರವರ್ಣಿಗಳಲ್ಲಿ ಮಹಾರಾಷ್ಟ್ರದೇಶದ ನಾಮನಿರ್ದೇಶವಿಲ್ಲ. ಆದರೆ ದಾಸರು ಹೇಳಿದ ಮರಾಳ ಇಲ್ಲವೆ ಮರಾಳದಜನರೆ ಮಹಾರಾಷ್ಟ್ರೀ ಸಂಸ್ಕೃತಿಯುಳ್ಳ ಜನರೆಂದು ತಿಳಿಯಬಹುದು. ವಿರೂಪಾಕ್ಷ ಪಂಡಿತನು ಅವರ ದೇಶಕ್ಕೆ 'ಮಾರಾಟ' ಎಂದು ಕರೆದಿರುವನು. ಮರಾಠಿಯ ಮೂಲ

ಸ್ಥಾನವು ವರಾಳ. ಅವರ ನುಡಿಯ ಹೆಸರು 'ಮರಹಟ್ಟಿ' ಇಲ್ಲವೆ 'ಮಹ್ರಾಠಿ.' ಮಹ್ರಾಟಿಭಾಷೆಯನ್ನಾಡುವವರು, ಮರಾಳರು, ಮರಾಡರು, ಮರಾಟರು. ಬರಬರುತ್ತ ಮರಾಟರು ರಾಜರ ಆಶ್ರಯವನ್ನು ಪಡೆದು ಊರ್ಜಿತಾವಸ್ಥೆಗೆ ಬರಲಾರಂಭಿಸಿದರು ಗೌರವದ ದೆಶೆಯಿಂದ ಮರಾಟರ ನುಡಿಗೂ ಸಂಸ್ಕೃತಿಗೂ ಮಹಾರಾಷ್ಟ್ರೀ ನುಡಿ ಸಂಸ್ಕೃತಿಯೆಂಬ ಹೆಸರು ರೂಢವಾಯಿತು. ವಿರೂಪಾಕ್ಷ ಪಂಡಿತನು ಇದೇ ಅರ್ಥದಲ್ಲಿ 'ಮಹಾರಾಷ್ಟ್ರ' ಎಂಬುದನ್ನು ಉಪಯೋಗಿಸಿದಂತೆ ತೋರುತ್ತದೆ.

ಆಸ್ಥಾನದಲ್ಲಿ ಕಲೆತ ಅರಸರನ್ನು ಬಿಜ್ಜಳ ಭೂಪಾಲನಿಗೆ ಅವನ ಭಟ್ಟಂಗಿಗಳು ಪರಿಚಯಮಾಡಿಕೊಡುತ್ತಾರೆ,

ಚೋಳನಂ ಚಿತ್ತೈಸು ಚಿತ್ತೈಸು ಕೇರಳ ನೃ ।
ಪಾಲನಂ ಚಿತ್ತೈಸು ಸಗರನಂ ಚಿತ್ತೈಸು ।
ಲಾಳನಂ ಚಿತ್ತೈಸು ಮಗಧನಂ ಚಿತ್ತೈಸು ಗಾಂಧಾರದೇಶದವನ ॥
ಗೌಳನಂ ಚಿತ್ತೈಸು ವೀರ ನೇ ।
ಪಾಳನಂ ಚಿತ್ತೈಸು ಯವನನಂ ಕೊಂಗು ಮಲೆ ।
ಯಾಳ ಮಾಳವ ಮಲೆಯ ಮಾತುಳ ಮಹಾರಾಷ್ಟ್ರ ಕರ್ಣಾಟಕಾದಿಯಾದ ॥

ಬಾಮನಿ ಅರಸರು, ಮಹಾರಾಷ್ಟ್ರೀಸಂಸ್ಕೃತಿಯ ಇಲ್ಲವೆ ಭಾಷೆಯ ಜನರಿಗೆ ಆಶ್ರಯ ಕೊಟ್ಟರು. ಬಾಮನಿ ರಾಜ್ಯದಲ್ಲಿ ಮರಾಟರೆ ಬಹುಸಂಖ್ಯಾಕರು, ವರ್ಚಸ್ಸುಳ್ಳವರು, ಸ್ಥಾಯಿಕರು. ಬರಬರುತ್ತ ಮಹಾರಾಷ್ಟ್ರೀ ಸಂಸ್ಕೃತಿಯ ಬಾಮನೀ ರಾಜ್ಯಗಳಿಗೆ ಮಹಾರಾಷ್ಟ್ರ ಎಂಬ ಹೆಸರು ಬೀಳತೊಡಗಿತೆಂದು ತೋರುತ್ತದೆ. ಶಿವಾಜಿಯ ಹಿಂದೆ, ಸದ್ಯದಲ್ಲಿ ಮಹಾರಾಷ್ಟ್ರವೆಂಬ ಹೆಸರಿರುವ ಪ್ರದೇಶದಲ್ಲಿ, ಮರಾಟರು ರಾಜ್ಯಸ್ಥಾಪಿಸಿ, ಅದಕ್ಕೆ ಮಹಾರಾಷ್ಟ್ರವೆಂಬ ಹೆಸರು ಬರುವಂತೆ ಸ್ವತಂತ್ರ ರಾಜಕೀಯ ಕ್ರಾಂತಿಯನ್ನುಂಟುಮಾಡಿರಲಿಲ್ಲ.

ಈ ವಿಷಯದಲ್ಲಿ ಶ್ರೀ. ರಾ. ಭಿ. ಜೋಶಿ ಎಂಬ ಒಬ್ಬ ಮಹಾರಾಷ್ಟ್ರ ಗ್ರಂಥಕಾರರು ತಮ್ಮ 'ಮರಾಠೀ ಭಾಷೇಚೀ ಘಟನಾ,' ಎಂಬ ಗ್ರಂಥದಲ್ಲಿ ಅನ್ನುವುದು,

"ಶಿವಾಜಿಯು ಪ್ರಖ್ಯಾತನಾದ ಮರಾಟ ರಾಜ್ಯದ ಸಂಸ್ಥಾಪಕನು. ಆದರೆ, ಅವರ ಕಾಲದಲ್ಲಿಯೂ "ಮಹಾರಾಷ್ಟ್ರ," ಎಂಬ ಹೆಸರಿನ ದೇಶ

ವಿರಲಿಲ್ಲ. *** ತಮ್ಮ ಧಾರ್ಮಿಕ ಹಾಗೂ ಸಾಮಾಜಿಕ ಸಂಸ್ಕೃತಿಗೆ, ಕೆಲ ಕವಿಗಳು, ಮಹಾರಾಷ್ಟ್ರಧರ್ಮವೆಂದು ಅಂದಿರುವರು. ಮರಾಟರ ಸತ್ತೆಯ ಕಾಲದಲ್ಲಿ ಆ ಶಬ್ದವು ಎಷ್ಟೋ ಲೇಖಗಳಲ್ಲಿಯೂ ಬಂದಿದೆ. ಆದರೆ, ಇಂತಹದೊಂದು ವಿಶಿಷ್ಟ ಪ್ರದೇಶಕ್ಕೆ ಮಹಾರಾಷ್ಟ್ರವೆಂದು ಗೊತ್ತಾದ ಹೆಸರು ಎಲ್ಲಿಯೂ ದೊರೆಯುವುದಿಲ್ಲ. ''

ವಸ್ತುಸ್ಥಿತಿಯು ಹೀಗಿದ್ದರೂ, ಬರಬರುತ್ತ ಹದಿನಾರನೆಯ ಶತಮಾನದಲ್ಲಿ, ಮಹಾರಾಷ್ಟ್ರವೆಂಬ ದೇಶದ ಹೆಸರು ಚಪ್ಪನ್ನ ದೇಶಗಳಲ್ಲಿ ಗಣನೆಯನ್ನು ಪಡೆಯತೊಡಗಿತೆಂದು ಹೇಳಬಹುದು. ನಿಜಗುಣನ ವಿವೇಕಚಿಂತಾಮಣಿ ಎಂಬ ಗ್ರಂಥವಿದೆ. ಅದು ಕೂಡ ೧೬ನೆಯ ಶತಮಾನದಲ್ಲಿ ರಚಿತವಾದುದು. ಆದರೊಳಗಿರುವ ೫೬ ದೇಶಗಳು.

೪. ಅಂಗ, ವಂಗ, ಕಲಿಂಗ, ತೆಲುಂಗ, ಕೊಂಗ, ಲಾಟ, ಬಂಗಾಳ, ಚೋಳ, ಕೇರಳ, ಗೌಳ, ಪಾಂಚಾಳ, ಸಿಂಹಳ, ಕುಂತಳ, ನೇಪಾಳ, ಮಲೆಯಾಳು, ತುಳವ, ಸೈಂಧವ, ಕೊಂಕಣ, ಕುರು, ಮಗಧ, ಮತ್ಸ್ಯ, ವಿದರ್ಭ, ಕೋಸಲ, ಶೂರಸೇನ, ಕಾಶ್ಮೀರ, ಮಹಾರಾಷ್ಟ್ರ, ಕರ್ಣಾಟ, ಕಿರಾತ, ತುರುಷ್ಕ, ಸಂಕರ, ಬರಮ, ತ್ರಿಗರ್ತ, ನಿಷಧ, ಮಧ್ಯ, ಜೈನ, ಖರ್ಬರ, ಬಾಲ್ಹಿಕ, ಲಾಟ, ಚೈನ, ಕರಾಳ, ಓಡ್ರ, ಘೂರ್ಜರ, ಕಾಂಬೋಜ, ಸೌರಾಷ್ಟ್ರ, ಸೌವೀರ, ಪಾಂಡ್ಯ, ಹೂಣ, ಯವನ, ಮ್ಲೇಚ್ಛ, ಹೈಹಯ, ಆರ್ಯಾವರ್ತ, ಭೋಜ, ದ್ವೈಪ, ಅಮರಕ, ಉತ್ತರಕುರು, ಮತ್ತು ಗ್ರೈಕಿ.

ಕನಕದಾಸರು ಈ ಎಲ್ಲ ದೇಶಗಳನ್ನು ಸಂದರ್ಶಿದುದಿಲ್ಲ. ಅವರು ವಿಜಯನಗರದ ರಾಜ್ಯವನ್ನು ಬಿಟ್ಟು ಕದಲಿದಂತೆ ಕಂಡುಬರುವುದಿಲ್ಲ. ಅವರು ಸಂದರ್ಶಿಸಿದ ಸ್ಥಳಗಳೆಂದರೆ ಬಾಡ, ಕಾಗಿನೆಲೆ, ಕದಿರುಮಂಡಲಿಗೆ, ಉಡುಪಿ, ಬೇಲೂರು, ದೇವನೂರು, ತಿರುಪತಿ ಮತ್ತು ವಿಜಯನಗರ. ಬೇರೆ ಊರುಗಳಿಗೂ ಅವರು ಹೋಗಿರಬಹುದು. ಆದರೆ, ಸದ್ಯದಲ್ಲಿ ದೊರೆತ ಅವರ ಕೃತಿಗಳಲ್ಲಿ ಇವಷ್ಟೇ ಸ್ಥಳಗಳ ಹೆಸರಿವೆ. ಕದಿರುಮಂಡಲಿಗೆಯ ಹನುಮನ ದೇವಾಲಯದಲ್ಲಿ 'ಕನಕಪ್ಪನಗುಡಿ' ಎಂಬ ಸ್ಥಳವಿದೆ. ತಿರುವಾಂಕೂರಿನಲ್ಲಿ 'ಕನಕವಕೊಳ' ಎಂಬ ಹೊಂಡವಿದೆಯಂತೆ.

---

## ೭. ಕನಕದಾಸರ ಕಾಲದ ಜನಜೀವನ.

ಕನಕದಾಸರು ಪುರಾಣಗಳಲ್ಲಿ ದೊರೆಯುವ ಕೃಷ್ಣಚರಿತ್ರೆಯನ್ನು ತಮ್ಮ ಕಾಲದ ಜನಜೀವನದೊಂದಿಗೆ ಹದಗೊಳಿಸಿ ಮೋಹನತರಂಗಿಣಿಯನ್ನು ರಚಿಸಿದರು. ಅದರಷ್ಟು ಸಾಮಾಜಿಕ ವಿಷಯವನ್ನು ವಿಸ್ತರಿಸುವ ಕಾವ್ಯವೆ ವಿರಲ. ಹದಿನಾರನೆಯ ಶತಮಾನದ ವಿಜಯನಗರದ ಐತಿಹ್ಯವನ್ನು ಅಭ್ಯಾಸಿಸಲು ಬಯಸುವವರು ಮೋಹನತರಂಗಿಣಿಯನ್ನು ಮರೆಯಕೂಡದು. ತರಂಗಿಣಿಯು ಆ ಕಾಲದ ಜನಜೀವನದ ಕೈಪಿಡಿ.

### ೧. ದೇಶದ ಸುಸ್ಥಿತಿ.

ರಾಜ್ಯದಲ್ಲಿ, ಜನಸಂಖ್ಯೆಗೆ ತಕ್ಕಂತೆ ನಗರ, ಪಟ್ಟಣ, ಖೇಡ, ಖರ್ವಡ, ಪುರ, ಗ್ರಾಮ, ಎಂಬ ಬೇರೆ ಬೇರೆ ತರಗತಿಯ ಊರುಗಳಿರುವುವು. ಬಿಳುವಳ್ಳಿಗಳು ಕಡಿಮೆ. ಅಲ್ಲಲ್ಲಿ ಅಗ್ರಹಾರಗಳೂ ದೇವಸ್ಥಾನಗಳೂ ನೆಲಿಸಿರುವುವು. ನೀರಿನ ಸೌಕರ್ಯಕ್ಕಾಗಿ ಕೆರೆ ಬಾವಿಗಳು ನಿರ್ಮಿತವಾಗಿರುವುವು. ಅವುಗಳಿಲ್ಲದ ಸ್ಥಳಗಳಲ್ಲಿ ಅರವಟ್ಟಿಗೆಗಳ ವ್ಯವಸ್ಥೆಯಿರುವುದು.

ಕೆರೆಬಾವಿಗಳಿಲ್ಲದಗ್ಗಡದೆಡೆಯಲ್ಲಿ । ತೊರೆನೀರ ಕಂಬಿಯೊಳ್ತರಿಸಿ ।
ನೆರೆಧರ್ಮಿಷ್ಟರು ನಿರ್ಮಿತವನು ಮಾಡಿ । ದರವಟ್ಟಿಗೆಗಳೊಪ್ಪಿದುವು ॥

ಇದಲ್ಲದೆ ಅನ್ನಛತ್ರಗಳನ್ನು ಇಟ್ಟ ಧರ್ಮಿಷ್ಟರೂ ವಿಪುಲ. ಒಕ್ಕಲುತನಕ್ಕೆ ಅನುಕೂಲವಾಗುವಂತೆ ಕಾಲುವೆಗಳು ನೆಲಿಸಿರುವುವು. ಅವುಗಳ ಸಹಾಯದಿಂದ ಬತ್ತವನ್ನು ಬೆಳೆಯುವರು.

ಬೀಗಿ ಬೆಳೆದು ನಭಕಡರ್ದೊಡೆ ದೇವರ್ಕಳಾ । ರೋಗಿಪ ಸವಿಗಾಣರ್ ।
ಪೋಗಿ ಮಾಡುವುದೇನೆನುತ ಲಜ್ಜಿಸಿ ತಲೆ । ವಾಗಿದಂತಿಹುದು ರಾಜಾನ್ನ ॥

ಕಬ್ಬಿನ ಪೈರೂ ವಿಪುಲವಾದುದು.

ಕಂದು ಗೊರಲನೊಳು ಕಾದಲ್ಕೆ ಸ್ಮರ ತನ್ನ । ದೊಂದು ಬಿಲ್ಲದು ಸಾಲದೆಂದು ।
ತಂದಿಲ್ಲಿ ಬೆಳಸಿದನೆಂಬಂತೆ ಬೆಳ್ಗಬ್ಬು । ಸಂದಣಿಸಿತು ಬನಬನದಿ ॥

ಅಲ್ಲಲ್ಲಿ ತೋಟಗಳಿರುವುವು.

ದಾಳಿಂಬ ಖರ್ಜೂರ ದ್ರಾಕ್ಷಿ ಸೌರಭ್ಯವ । ತಾಳಿದನೇಕ ಪೂದೋಟ ।
ಕೇಳಿಯ ವನಗಳಿದ್ದುವು ಪುರಲಕ್ಷ್ಮಿಯ । ತಾಳಿಯುವುರಕತದಂತೆ ॥
ಪಲಸು ನೇರಿಲ ಚೂತ ಪಿಚುಮಂದ ನ್ಯಗ್ರೋಧ। ಚಲಪತ್ರಬಿಲ್ವಾಮಲಕ ।
ಲಲಿತಶುದ್ಧಸ್ಫಟಿಕದಲಿ ಬಿಗಿದ ಕೋ । ಮಲಸಾಲು ಮರಗಳೊಪ್ಪಿದುವು ॥
ಅಂಬೆಹಳದಿ ಕಾರ್ಗಣಸು ನೀರುಳ್ಳಿ ಕೊ । ತ್ತುಂಬರಿ ಕರಿಬೇವು ಸಹಿತ ।
ನಿಂಬೆ ಕೂಗಲಿ ಪಿಪ್ಪಲಗಾಯ ಕೊಯ್ದರು । ನಿಂಬೆಯ ಕಳಿವಣ್ಗಳೊಡನೆ ॥

ಅಲ್ಲಿ ದೊರೆಯುವ ಹೂಗಳೆಂದರೆ,

ಜಾದಿ ಮಲ್ಲಿಗೆ ಮೊಲ್ಲೆ ಸುರ-ಹೊನ್ನೆ ಸಂಪಗೆ। ಪಾದರಿ ಸುರಗಿ ಸೇವಂತಿ ॥

ಹಣ್ಣುಗಳಲ್ಲಿ ಮುಖ್ಯವಾದವುಗಳೆಂದರೆ,

ತೆಂಗಾಯಿ ಪಲಸು ಕಿತ್ತಳೆ ಮಾವು ಮಾದಲ। ಭೃಂಗಾಯಿ ವಣ್ಗಳಸಹಿತ ॥
ಮಾದಲ ಪಲಸು ದಾಡಿಮ ದ್ರಾಕ್ಷೆ ಖರ್ಜೂರ। ಮಾದಿಹ ಬಾಳೆಕಾಬಾಳೆ ।
ಮೋದ ಸಕ್ಕರೆ ಮಾವು ನೇರಿಲವಣ್ಗಳ । ಯಾದವರಿತ್ತರಾಳ್ದನಿಗೆ ॥
ಬೆಳಲು ಬಿಲ್ವತ್ರೆ ಘೋಟಕಿ ಬಿಕ್ಕಿ ನೇಮಿ ಹೆ। ಗ್ಗಳಪಿ ಕಡಸು ಕಾರೆ ಬೋರೆ ।
ಗುಳವತ್ತಿ ತುಂಬುರು ನಗರೆ ಮುಂತಾದ ಪ। ಣ್ಗಳ ತಂದರಾಳ್ದನಿಗೆ ॥

ಕಾಗಿನೆಲ್ಲಿಗೆ ಮಲೆನಾಡಿನ ಸೆರಗು ಹತ್ತುತ್ತದೆ. ಅಲ್ಲಿ ಬತ್ತದ ಗದ್ದೆಗಳಿರುವುವು. ತೆಂಗು ಬಾಳೆಗಳ ತೋಟಗಳುಂಟು. ಹಲಸು ಮಾವುಗಳ ಮರಗಳುಂಟು. ಊರ ಸುತ್ತಲಿನ ಅಡವಿಯಲ್ಲಿ, ಕಾರೆ ಬೋರೆಗಳ ಕಂಟಿಗಳಿವೆ. ಹೊಲಗಳಲ್ಲಿ ಗೋಧಿಕಡಲೆ ಬೆಳೆಯುತ್ತವೆ. ಕಬ್ಬಿನ ತೋಟಗಳೂ ಕಾಣುವುವು. ಮೇಲೆ ವಿವರಿಸಿದ ಎಲ್ಲ ಹೂಕಾಯಿಗಳೂ ಅಲ್ಲಿ ಬೆಳೆಯಬಹುದು.

## ೨. ರಾಜಧಾನಿ-ರಾಜಾಸ್ಥಾನಗಳು.

ದ್ವಾರಕಾಪುರವು ದಾಸರ ಕಾಲದ ಮಾದರಿಯ ಪಟ್ಟಣವು, ರಾಜಧಾನಿಯು. ಪ್ರತಿಯೊಂದು ಪಟ್ಟಣದ ಸುತ್ತಲು ಕೋಟೆ, ಅದರ ಸುತ್ತಲು ಆಳವಾದ ಅಗಳು, ಕೋಟೆಯ ಗೋಡೆಗುಂಟ ದೊಡ್ಡ ದೊಡ್ಡ ಕೊತ್ತಳಗಳು, ಕೋಟೆಯ ಗೋಡೆಯ ಮೇಲೆ ಅಡ್ಡಾಡಲಿಕ್ಕೆ ಬರುವಂತಹ

ಆಳ್ವೇರಿ, ಕೋಟೆಯ ಹೊರಗೆ ಒಳಗೆ ಹೋಗಲಿಕ್ಕೆ ಹುಲಿಮುಖಗಳು (ದ್ವಾರಗಳು ), ಕೋಟೆಯು ಚೆಂದಾಗಿ ತೋರಬೇಕೆಂದು ಅಲ್ಲಲ್ಲಿ ತೆನೆಗಳು ಇರುವುವು. ( ದ್ವಾರಕಾಪುರದ ವರ್ಣನೆ ಪುಟ. ೬೨-೬೫ )

ಬಾಣಾಸುರನ ಒಡ್ಡೋಲಗದ ವರ್ಣನೆಯನ್ನು ಉದ್ಧರಿಸಲಿದೆ. ಅದೊಂದು ದಾಸರ ಕಾಲದ ಅರಸರ ಆಸ್ಥಾನ.

**ಒಡ್ಡೋಲಗ.**

ಬಾಣನ ಮಹದಾಸ್ಥಾನ ದುಗ್ಧಾಬ್ಧಿಯು । ಕೇಣವಿಲ್ಲದೆ ಪೆರ್ಚಿಸುವ ।
ಏಣಾಂಕ ತಾನೆಂಬಂತೆ ಕುಂಭಾಂಡ ಸು । ಜಾಣಮಂತ್ರೀಶನೊಪ್ಪಿದನು ॥
ರಜನೀಚರ ಮಂತ್ರಿಗಳೊಂದು ಕೆಲರು ಸ । ದ್ವಿಜ ಮಂತ್ರಿಗಳೊಂದು ಕೆಲರು ।
ನಿಜ ಮಾಗಣಿಕ ಮಂತ್ರಿಗಳೊಂದು ಕೆಲರು ಭೂ । ಭುಜರಿರ್ದರೊಡ್ಡೋಲಗದಿ ॥
ಪೊಸ ಬಗೆ ವೇಳ್ವ ಕಬ್ಬಿಗರು ವಾಗ್ಮಿಕ ಜೋ । ಯಿಸರಾಮ್ನಾಯಶಾಸ್ತ್ರಿಗಳು ।
ವಿಷಮ ತಾರ್ಕಿಕರು ವಿನೋದಾರ್ಥಿಗಳು ಕ । ಣ್ಗೆಸೆದಿರ್ದರೊಡ್ಡೋಲಗದಿ ॥
ಮಲ್ಲರು ಮಾರಾವುತ ರಮ್ಯರಸಿಕರು । ಬಲ್ಲಿದಗಜವಾಹಕರು ।
ಬಿಲ್ಲಿನಡ್ಡಣದದಟರು ಮುಂತಾದವ । ರೆಲ್ಲ ರೊಪ್ಪಿದರೊಡ್ಡೋಲಗದಿ ॥
ಮನುಮಥನರ್ಧಾಂಗಿಯ ರೂಪಿಗಿಮ್ಮಡಿ । ತನುರುಚಿತೋರನುಣ್ಮೊಲೆಯ ।
ಮಿನುಗುವದಾಳಿಂಬದಂತಪಂಕ್ತಿಯ ವಾರ । ವನಿತೆಯರಿರ್ದರಿಕ್ಕೆಲದಿ ॥
ಕಡೆಯ ಪೆಂಡೆಯನಟ್ಟುವರು ಮದ್ದಳಿಗರು । ಗಡಣೆಯ ತಾಳಧಾರಿಗಳು ।
ಬಿಡಯವಿಲ್ಲದ ಗೀತವಾದ್ಯ ವಿದ್ಯಾಧಿಕ । ಪಡೆಯಿರ್ದುದೊಡ್ಡೋಲಗದಿ ॥
ನಾಟಕ ನವವೃತ್ತ ಕಂದವಚನಪೂರ್ವ । ಚಾಟನದಲಿ ಕೇಳಿದರೆ ।
ಕೋಟಲೆಗೊಳ್ಳದುಚ್ಚರಿಸುವ ಸರ್ವಜ್ಞ । ಪಾಠಕರಿರ್ದರಿಕ್ಕೆಲದಿ ॥

ದಮಯಂತಿಯ ಸ್ವಯಂವರದ ಕಾಲದ ಆಸ್ಥಾನದಲ್ಲಿ,

ಒಂದು ಕಡೆಯಲಿ ತಾಳಮದ್ದಳೆ ।
ಯೊಂದು ಕಡೆಯಲಿಸರಸನೃತ್ಯಗ ।
ಳೊಂದು ಕಡೆಯಲಿ ಸಾರತರ ಸಂಗೀತ ಸಾಹಿತ್ಯ ।
ಒಂದು ಕಡೆಯಲಿ ಗದ್ಯಪದ್ಯ ಗ ।
ಳೊಂದು ಕಡೆಯಲಿ ತರ್ಕಶಾಸ್ತ್ರಗ ।
ಳೊಂದು ಕಡೆಯಲಿ ಹಾಸ್ಯದಿಂದಿರುತಿರ್ದುದಾಸ್ಥಾನ ॥

ರಾಜಭವನಗಳ ಮುಂದೆ, ಗಳಿಗೆಗೊಮ್ಮೆ ಭೇರಿಹೊಡೆಯುವರು. ಗಳಿಗೆಯನ್ನು ಜೋಯಿಸರು ಗಳಿಗೆಬಟ್ಟಲ (ಗಳಿಹಾರ-ಗಡಿಯಾರ) ದಿಂದ ತಿಳಿದುಕೊಳ್ಳುವರು.

ಒಪ್ಪವಡೆದ ಯಾಗಶಾಲೆ ಸದ್ಗಳಿಹಾರ | ದುಪ್ಪರಿಗೆಯೊಳು ಜೋಯಿಸರು |
ತಪ್ಪದೆಗಳಿಗೆಗೊಮ್ಮೊಮ್ಮೆ ಭೇರಿಯ ಹೊಯ್ಯು | ತಿಪ್ಪುದದೊಂದು ಬಾಗಿ
ಲೊಳು ||

ರಾತ್ರಿಯಲ್ಲಿ "ಪಾರಿಯ" ವ್ಯವಸ್ಥೆಯಿರುವುದು. ಪಾರಿಯ ಭೇರಿಯಾದೊಡನೆ ಬೇಡರು ಊರಲ್ಲಿ ತಿರುಗಾಡುವರು.

ಪಾರಿಯ ವಾದ್ಯ ಘೋಷಣಿಸಲ್ಕೆ ದಿವ್ಯ ವಿ | ಭೇರಿಯ ಹೊಡೆದರೂರೊಳಗೆ |
ಪೂರಾಯ ಬೆಳ್ದಿಂಗಳೊಳು ಬೇಡರೊಗ್ಗಾಗಿ | ದ್ವಾರಾವತಿಯನು ಸುತ್ತಿದರು ||
ಹೊಳೆವ ಕಠಾರಿ ಕೈಗತ್ತಿ ತೋಮರ ಬಿಲ್ಲು | ಬಲುದಡಿ ಪಿಡಿ ಚಕ್ರದಲಿ |
ಕಳಬಂಟ ಕಂಠವಿಚ್ಛೇದ ವಿನೋದದ | ತಳವರೂರ ಕಾದಿಹರು ||

ಬೊಂಬಾಳ ದೀಪಗಳೆಂಬ ದೊಡ್ಡ ದೀವಿಗೆಗಳೂ ಚಿಕ್ಕಪುಟ್ಟ ಎಣ್ಣೆಯ ಸೊಡರುಗಳೂ ಬಳಿಕೆಯಲ್ಲಿದ್ದುವು.

## ೩ ವಿನೋದ.

ರಾಜರು, ವಿನೋದಕ್ಕಾಗಿ ರಾಣಿಯರು ಆಪ್ತೇಷ್ಟರು ಮೊದಲಾದವರೊಡನೆ ಕ್ರೀಡಿಸಲು ಉದ್ಯಾನಗಳಿಗೆ ಹೋಗುವರು. ಅವರ ಸಂಗಡ ವಾರನಾರಿಯರೂ ಇರುವರು. ತೋಟದಲ್ಲಿ ಉಯ್ಯಾಲೆ ಯಾಡುವರು. ವಿಶಿಷ್ಟ ಹಬ್ಬಗಳಲ್ಲಿ ಬಣ್ಣವಾಡುವರು. ಅದಕ್ಕಾಗಿ ಜೀರ್ಕೊಳವೆಗಳನ್ನೂ ಉಪಯೋಗಿಸುವರು.

**ಬಣ್ಣದಾಟ.**

ಭೇದಿಸಲಂಗಜಾತಗೆ ಭದ್ರಗಜ ನೀರ | ಸೇದಿ ಸೊಂಡಿಲೊಳೀವತೆರದೆ |
ವಾದಿಸಿ ಕೊಳುತ ಜೀರ್ಕೊಳವಿಯಿಂದೆಚ್ಚು | ನಾದಿದರೊಬ್ಬರೊಬ್ಬರನು ||
ಭೇರಿ ಮದ್ದಳೆ ಶಂಖಪಟಹ ಡಿಂಡಿಮ ಡೋಳು | ಮೌರಿ ತಂಬಟದ ದನಿಗಳು |
ಭೂರಿನಾದದೆ ಲಗ್ಗೆವರೆ ಮೊಳಗಿದುವಲ್ಲಿ | ನಾರಿಯರ್ ಪೊಯ್ದಾಡುತಿರಲು ||
ನಮ್ಮೊಳು ನಾವೆ ಪೊಯ್ದಾಡಲು ಬೇಕೆಂದು | ಕಮ್ಮಲರ್ಗಂದ ಗಂದಿಯರು |
ತಮ್ಮ ನಾಳುವ ಕೃಷ್ಣರಾಯನ ತುಡುಕಿದ | ಪೆರ್ಮೆಯನೇನ ಬಣ್ಣಿಪೆನು ||

ಬಂದುಗೆವಾಯು ಭಾಮಿನಿಕೇಳು ಹೊಸ ಹೊನ್ನ | ಬಿಂದಿಗೆ ದುಂಬಿ ಯೋಕುಳಿಯ |
ಇಂದಿಗೆ ಸುಖ ಸಿದ್ಧಿಸಿತೆಂದು ಚೆಲ್ಲಿದ | ರಂದು ಕೃಷ್ಣನ ತಕ್ಕೆಗೊಳಿಸಿ ||

ಜಲಕ್ರೀಡೆಯು ಮತ್ತೊಂದು ವಿನೋದ. ರಾಜರು ಅದಕ್ಕಾಗಿ ಬೇರೊಂದು ವ್ಯವಸ್ಥೆಯನ್ನು ಮಾಡಿಕೊಂಡಿರುತ್ತಿರುವುದಾಗಿ ತೋರುತ್ತದೆ. ಜಲಕ್ರೀಡೆಯ ಕೊಳವನ್ನು ಕಲ್ಲುಗಳಿಂದ ಕಟ್ಟಿಸುವರು. ಅದಕ್ಕೆ ಕಾಲುವೆ ಬಿಡುವರು. ನೀರು ಬರುವುದಕ್ಕೆ ನಳಗಳ ಏರ್ಪಾಟೂ ಇರುವುದು.

ಲೀಲೆ ಗಾರ್ತಿಯರಚ್ಯುತನಾಜ್ಞೆಯಿಂದೆ ಪೆ| ರ್ಗಾಲ ಹೊಂದೂಂಬನು ನೆಗಹೆ|
ಕೀಲಣೆಗೆಯ್ದ ಸುವರ್ಣವೇತಂಡ ಶುಂ | ಡಾಲದೆ ಸುರಿದುದು ಸಲಿಲ ||

ಜನರು ಬೇಟೆಯಲ್ಲಿ ಮನಸ್ಸುಳ್ಳವರು. ವಿಮನಸ್ಕರಾದರೆಂದರೆ, ರಾಜರು ಮುಂತಾದವರು ಬೇಟೆಗೆ ಹೋಗುವರು. ನಳನು ವಿರಹದಿಂದ ಬಳಲುತ್ತಿರುವಾಗ ಅವನ ಸೇವಕರು ಘನಮೃಗ ಬಂದಿದೆಯೆಂದು ಹೇಳುವರು. ನಳನು ವಿರಹವನ್ನು ಕೆಲಕಾಲ ಮರೆಯ ಬೇಕೆಂದು ವನಕ್ಕೆ ಹೊರಡುವನು.

ತಂದು ಫಲವಸ್ತುಗಳ ಕಾಣಿಕೆ|
ಯಿಂದು ಕೈಮುಗಿದರಸ ಮೃಗ ಘನ |
ಎಂದು ಬೇಂಟೆಗೆ ಗಮಿಸಬೇಕೆನೆ ನೃಪತಿನಸುನಗುತ ||
ಇಂದು ವಿರಹ ಕಳೆವ ಪರಿ ಲೇ|
ಸೆಂದು ಶಬರರ ಕಳುಹಿಯೋಲಗ್ಗ|
ದಿಂದಲರಮನೆಗೆಯ್ದಲಸ್ತಾಂಬುಧಿಯೊಳಿನನಳಿದ ||

ಆನಂದದ ಸಂದರ್ಭಗಳಲ್ಲಿ, ಸುಖದ ತುಲನೆಗಾಗಿ, "ಹೊಮ್ಮಿಗವೇಂಟೆಯಾದುದು" ಎಂದು ಅನ್ನುವರು.

ಪೊಗಳಲಚ್ಚರಿ ರುಕ್ಮಿಣಿ ಸತ್ಯಭಾಮೆಯ | ರುಗಳು ಸಖೀಜನವೆರಸಿ |
ಜಗದೀಶ್ವರನೆಡಬಲದಲ್ಲಿ ಬರಲು ಹೊ | ಮ್ಮಿಗವೇಂಟೆಯಾದುದೇನೆಂಬೆ ||

ರಾಜರು ಮುಂತಾದವರು ಕುದುರೆಯನ್ನೇರಿ ಬೇಟೆಗೆ ಹೊರಡುವುದುಂಟು. ಅನಿರುದ್ಧನು ಬೇಟೆಗೆ ಹೊರಟ ದೃಶ್ಯವಿದು,

**ಬೇಟೆ.**

ಎಡಬಲದಲಿ ಹೊಂಗಟ್ಟಿನ ಭಿಲ್ಲರ । ಗಡಣ ಚಾಮರ ಛತ್ರವೆರಸಿ ।
ಕಡೆಯ ಪೆಂಡೆಯ ಸರಪಳಿ ಗಂಟೆಯುಲುಹಿಂದೆ । ನಡೆದರು ಮುಂದೆ
ಬೊಬ್ಬಿಡುತೆ ॥
ಮಾಣಿಕ್ಯರಚಿತ ಕೆಂಬಟ್ಟೆ ಪೊಂಬಾಸಿನ । ನೇಣ ಚತುಷ್ಪಾದಿಗಳ ।
ಪಾಣಿಯೊಳಾಂತ ಪೆರ್ದಡಿಗಳ ಲುಬ್ಧಕ । ಶ್ರೇಣಿ ಬೊಬ್ಬಿಡುತಲೈದಿದುದು ॥
ಮೇಲುತರ ಪಟ್ಟೆ ವರಸೂಪು ಸಕಲಾತಿ । ಜೂಲುಗಳಿಂದೆ ರಂಜಿಸುವ ।
ಕಾಲುವೇಗದ ಶುನಿವಿಡಿದ ಕಿರಾತರು । ಸಾಲಿಟ್ಟುನಡೆದರೊಗ್ಗಿನಲಿ ॥
ಪಿಡಿವಲೆ ಸೆರೆವಲೆ ಕಾಲ್ವಲೆ ಕೊರಲ್ವಲೆ । ನಿಡುವಲೆ ಪಾಜಿ ಬಳ್ವಾರ ।
ಬಡಿವಲೆ ಬಲುವಲೆಗಾರರು ಕೂಗಿ ಬೊ । ಬ್ಬಿಡುತಲೈದಿದರು ಮುಂಗಡೆಯ ॥
ಬೇಸರದುಲಿವ ಬೇಂಟೆಯ ರವ ಬಹುವಾದ್ಯ । ಘೋಷಣೆಯಿಂದ ಕಂಗೆಟ್ಟು ।
ಆಸಾಗರ ಮುಖ್ಯಮೃಗವೋಡಲು ನಾಯ । ಹಾಸವ ಕಳಚಿದರಾಗ ॥
ಅರೆಯಟ್ಟಿ ಬರ್ಪನಾಯಿಗೆ ಮೃಗನಿಚಯ ಕೈ । ಸೆರೆಗೆಟ್ಟುಪೋಪಂತೆ ಭಯದಿ ।
ನೆರೆ ಗರ್ಭದ ಕೂಸುಗಳುರ್ಚಿ ಬೀಳ್ವಂತೆ । ಮುರಿದುವು ಮಿಳ್ತುಗಳೆನಿಸೆ ॥
ಹಿಡಿವ ಮಿಗಂಗಳ ಬಿಡದಿರೆ ಬಾಯೊಳು । ಬಡಿಗೆಗೋಲ್ಗಳನಿಕ್ಕಿ ತಿವಿದು ।
ವಡೆಮುರುಹಿದೊಡೊದರುವ ಶಬ್ದ ವಿಪಿನದೊ । ಳೆಡೆಗೊಂಡುದೇನ ಬಣ್ಣಿಸುವೆ॥

ಬೇಟೆಯಾಡುವ ಪ್ರಾಣಿಗಳು,

ಏನುಹೇಳುವೆನರಸ ಹೊಕ್ಕರು ।
ಕಾನನವ ಬಳಿಸಿದರು ಮೃಗತತಿ ।
ಯಾನಲಾವುದೆ ತೆಗೆದು ಹಾಯ್ದರು ಭಟರಘಲ್ಲಣೆಗೆ ॥
ಆನೆಗಳ ಕೆಡಹಿದರು ಬಲುಸಂ ।
ಧಾನದಲಿ ಹುಲಿಕರಡಿ ಮುಸು ।
ಮೊಲವಾನರಾದಿ ಸಮಸ್ತಮೃಗಗಳ ತುರುಬಿಕೆಡಹಿದರು ॥

ಇದಲ್ಲದೆ, ಆನೆ ಕುದುರೆಗಳ ವೈಹಾಳಿಯೂ ವಿನೋದದ ವಿಷಯ. ಬೇರೆ ವಿನೋದಗಳೆಂದರೆ,

ಪಿಕ್ಕಳದ್ವಿತಯಲಾವುಗೆ ತೋರಗಿರುಜೆಯು । ಕುಕ್ಕುಟ ತಗರು ಕೋಣಗಳ ।
ಸೊಕ್ಕಾನೆಗಳಕಾದಿಸುತಿರ್ದ ದೊರೆಗಳ । ಮಕ್ಕಳಕೂಡೆ ಬೀದಿಯಲಿ ॥
ಚಿಕ್ಕಮಕ್ಕಳು ಎಳಗಗಳನ್ನು ಏರುವರು.

## ೪. ಬ್ರಾಹ್ಮಣರು-ಊಟ-ಅಡುಗೆಗಳು.

### ಬ್ರಾಹ್ಮಣರು.

ಭೂರಿ ಭೂಪೋತ್ತಮರಲ್ಲದೆ ಬ್ರಾಹ್ಮಣ । ಗೇರಿ ಕಣ್ಮನಕೆ ರಂಜಿಸಿತು ॥

ಹೊಂದಗಡಿನ ಹೊದಕೆಯ ಮನೆ ಬಹಳ ನೇ । ರಂದವಡೆದ ಪಟ್ಟಶಾಲೆ ।
ಮುಂದೆಸೆಯಲಿ ತುಳಸಿಯ ಮಂಟಪದಿ ಗೋ । ವಿಂದನ ಕೀರ್ತಿಸುತಿಹರು ॥

ಕೇಣವಿಲ್ಲದ ಕೇವಲಸಾತ್ವಿಕ ಪೌ । ರಾಣ ಶಾಸ್ತ್ರಾರ್ಥಗೋಷ್ಠಿಗಳು ।
ಗಾಣ ದಂಡಿಗೆಯ ಭಾಗವತ ಸಂಕೀರ್ತನೆ । ಮಾಣದು ಮನೆಮನೆಗಳಲಿ ॥

ರಾಮಾನುಜ ವ್ಯಾಖ್ಯಾನ ಸುತತ್ವದ । ಭೂಮಿಸುರರು ಸಂದಣಿಸಿ ।
ಸಾಮಾಮ್ನಾಯ ಘೋಷಣೆ ವಿಷ್ಣುಪ್ರೀತ್ಯರ್ಥ । ಹೋಮವ ಮಾಳ್ಪರುತ್ಸವದಿ ॥

ಕೇಳುವ ಕೆಲವು ವಿದ್ಯಾರ್ಥಿಗಳಿಗೆ ವಸ್ತ್ರ । ಕೂಳು ವಿಳೆಯವಿತ್ತು ಮುದದಿ ।
ಆಳುಗೊಳಿಸಿ ಪ್ರತಿದಿವಸದಿ ತರ್ಕಾಯ । ಹೇಳುವ ವಿಬುಧರೊಪ್ಪಿದರು ॥

ಕರ್ಮಕಾಂಡವ ತಿರಸ್ಕರಿಸಿ ತತ್ವಾರ್ಥದ । ಮರ್ಮವನರಿದ ಪ್ರಾಜ್ಞೆಯರು ।
ಧರ್ಮಾರ್ಥಕಾಮಮೋಕ್ಷಂಗಳ ಪಡೆದರು । ಭರ್ಮಾಂಬರನ ಭಕ್ತಿಯಲಿ ॥

ಚೇತನದೊಳು ವಿಷ್ಣುನಾಮ ಚಿಂತನೆ ಶುಚಿ । ಭೂತರಾದವನೀಸುರರು ।
ಗೀತಾರ್ಥವ ಪಠಿಸುತ್ತಬಂದರು ಪ್ರ । ಖ್ಯಾತ ಸತ್ರದ ಮನೆಗಳಿಗೆ ॥

ಹೇಮಸಂಪುಟದಲ್ಲಿ ವಿಷ್ಣುವಿಗ್ರಹಸಾಲ । ಗ್ರಾಮ ದೇವರ ಪೂಜೆಗೆಯ್ದು ।
ಪ್ರೇಮದಿ ನಿಖಿಲೋಪಚಾರವನರ್ಪಿಸಿ । ನೇಮವ ನಿರ್ಣಯಿಸಿದರು ॥

ಬ್ರಾಹ್ಮಣರ ಮನೆಯೊಳಗಿನ ಪಾಠಶಾಲೆಗಳ ಹೊರತು ಬೇರೆ ಶಾಲೆಗಳೂ ಇದ್ದಂತೆ ತೋರುತ್ತದೆ. ದ್ವಾರಕೆಯಲ್ಲಿ, 'ಸಣ್ಣವರುಗಳನೋದಿಸುತಿರ್ಪಕಸೆಯ ಕೋ । ಲಣ್ಣಗಳ್ ಚೌಪದಿಗವಿತೆ,' ಕಲಿಸುವ ಅಯ್ಯನವರು ಇರುವರೆಂದು ಹೇಳಿದೆ.

ಆ ಕಾಲದ ಊಟದ ಪಕ್ವಾನ್ನಗಳನ್ನು ದಾಸರು ಕೊಡದೆ ಬಿಟ್ಟಿರುವುದಿಲ್ಲ. ಸದ್ಯಕ್ಕೆ ಉಡುಪಿಯ ಬ್ರಾಹ್ಮಣರು ಪಾಕಶಾಸ್ತ್ರದಲ್ಲಿ ಪ್ರಾವೀಣ್ಯ ಪಡೆದಂತೆ, ಅಂದು, ತಿಗುಳರು (ತಮಿಳರು) ಅಡುಗೆಯ ವ್ಯವಸಾಯದಲ್ಲಿ ಹೆಸರು

ವಾಸಿಯಾದವರು. ಈಗ್ಗೆ ಬಳಕೆಯಲ್ಲಿರುವ ಪಕ್ವಾನ್ನಗಳಿಗೂ ಅಂದಿನ ಅಡುಗೆಗಳಿಗೂ ವಿಶೇಷ ಅಂತರವಾದಂತೆ ಕಂಡು ಬರುವುದಿಲ್ಲ.

**ಪಕ್ವಾನ್ನಗಳು.**

ಚಂದಿಹಚ್ಚಡ ಕುಪ್ಪಸಗಳನಿಂಬಿಟ್ಟು । ಚಂದದ ಬೈರ್ವಾಸ ತಲೆಗೆ ।
ಬಂದಿಸಿದಮಳ ಪಟ್ಟೆಯ ಟೋಪಿಯ ಬ್ರಹ್ಮ । ರೊಂದಿತು ಕುಳಿತು ಹಂತಿಯಲಿ ॥

ಹೊಂದಟ್ಟೆಯೊಳು ಕುಂಕುಮರಸಪೂರಿತ | ಗಂಧಾಕ್ಷತೆಗಳ ಕೊಟ್ಟು ।
ಅಂದವಡೆದ ಕದಳಿಯ ಪರ್ಣದೊನ್ನೆಯ | ತಂದಿರಿಸಿದರೆಲ್ಲರಿಗೆ ॥

ಪರಮಸೌಖ್ಯವನಾಂತು ತಿಗುಳರು ಪಾತ್ರಾಭಿ । ಗರ ಪರಮಾನ್ನ ಮುಂತಾದ ।
ವರಸಣ್ಣಕ್ಕಿಯೋಗರ ತೊವ್ವೆ ಪಳಿದ್ಯವ । ತರತರದಲಿ ಬಡಿಸಿದರು ॥

ಜೇನು ಸಕ್ಕರೆ ಕ್ಷೀರ ರಸವಪ್ಪ ಫೇಣಿ ಸು | ಖೀನುಂಡೆ ವಡೆ ಗಾರಿಗೆಯ ।
ನಾನಾ ಭಕ್ಷ್ಯಭೋಜ್ಯಂಗಳ ಪರಮ ಸು । ಮ್ಮಾನದೆ ಬಡಿಸಿದರೊಲವಿಂ ॥

ಹುಳಿದಾಳಿದ ಸಾರು ಶಿಖರಿಣಿ ಬಹುಕೂಟ । ದಳಿದ ನಿಂಬೆಯಹಣ್ಣಸವಿದು ।
ಗಳಲನೆ ಬಡಿಸಲೊಗ್ಗರಣೆಯಿಂಗಿನ ಕಂಪು | ಸುಳಿದುದು ಬಹಿಃಸ್ಥಳಕೆ ॥

ಘನನವಘೃತವ ತಂದೆರೆದರು ಪತ್ರ ಭಾ | ಜನ ತುಂಬಿ ಕಡೆಗೋಡಿವರಿಯೆ ।
ಅನಲಾಕೃತಿಯ ಬ್ರಾಹ್ಮರು ಮುದದಿಂದಾಪೋ । ಶನವಕೊಂಡರು ಮಹೋತ್ಸವದಿ ॥

ಸಿತರಾಜಾನ್ನ ಸದ್ಘೃತ ತೊವ್ವೆ ಕೂಡಿ ನಿ । ರ್ಮಿತವಾದ ತೋರದುತ್ತುಗಳ ।
ಜತನದಪ್ಪದೆ ಕೈಕೊಂಡರು ಕೃಷ್ಣಾ । ರ್ಪಿತವೆಂದು ಪರಿತೋಷವಡೆದು ॥

ಮಲ್ಲಿಗೆಯರಳಂತೆ ಬಿಚ್ಚೋಗರ ಮೊಸ । ರೊಳ್ಳೆಯ ಬಹಳುಪ್ಪಿಗಾಯಿ ।
ಘಲ್ಲಿಸಿ ಗಟ್ಟಿಯ ಕಟ್ಟದ ಪಿರಿಯರು । ಪುಲ್ಲಿಗೆಗಳು ತರತರಿಸೆ ॥

ರಸರಸಾಯನವ ಚಪ್ಪರಿದು ನೀರ್ಮಜ್ಜಿಗೆ | ಹಸಗೆಯ್ದಿರಲೀಂಟಿದರು ।
ಪೊಸ ವಿಘ್ನರಾಜನ ಬಳಗವೆಂಬತೇಳಿ । ವಶವಲ್ಲದೆದ್ದರುತ್ಸವದಿ ॥

ಮೂಲೋಕದ ಬುಧರು ಸತ್ರದೊತ್ತಿನಲಿ ಮುಂ | ಗಾಲುವೆಯೊಳು ಕೈಯ ತೊಳೆದು ।
ಆಲಂಕೃತರಾಗಿ ಕರ್ಪೂರಮಿಶ್ರತಾಂ । ಬೂಲವ ಕೊಂಡರುತ್ಸವದಿ ॥

ಸೌರಾಷ್ಟ್ರದಲ್ಲಿ ಮಧುಪಾನವು ಇರುವುದಿಲ್ಲೆಂದು ಹೇಳಿದರೂ ದಾಸರು ತರಂಗಿಣಿಯಲ್ಲಿ, ಹೆಂಡಕುಡಕರ ಸನ್ನಿವೇಶವನ್ನು ಮರೆತಿರುವುದಿಲ್ಲ. ಇಷ್ಟೇ ಅಲ್ಲ. ಸರಾಯಿಯೊಡನೆ ಬಾಡಿಸಿಕೊಳ್ಳುವ ಪದಾರ್ಥಗಳನ್ನೂ ಹೇಳಿರುವರು.

ಸಂಡಿಗೆ ಸಂಭಾರಗಡಲೆ ಪ್ರಾಸಕ ಕುಕ್ಕು । ಟಾಂಡವನವಲಕ್ಕಿಗಳನು ।
ದುಂಡರಳ್ಗಡಲೆ ಭಕ್ಷ್ಯಗಳ ಬಡ್ಡಿಸಿಕೊಳು । ತುಂಡರು ನೆರೆ ಸೊಕ್ಕುವನಕ ॥

ಈ ಬಾಡಿಸಿಕೊಳ್ಳುವ ಪದಾರ್ಥಗಳಲ್ಲಿಯೂ ವಿಶೇಷ ಬದಲಾವಣೆಯಾದಂತೆ ಕಂಡುಬರುವುದಿಲ್ಲ.

ರಾಗಿಯಂತೂ ಇಂದಿನಂತೆ ಅಂದಿಗೂ ಬಡವರ ಮುಖ್ಯಾಹಾರ.

## ೫. ಉಡುತೊಡುವೊಡವೆಗಳು.

### ಬ್ರಾಹ್ಮಣರು.

ಬ್ರಾಹ್ಮಣರು ಮುಖ್ಯವಾಗಿ ಮೂರು ಮತದವರು. ರಾಮಾನುಜರು, ಮಾಧ್ವರು, ಹಾಗೂ ಶಾಂಕರಮತಾನುಯಾಯಿಗಳು. ರಾಮಾನುಜರು, ನಾಸಾಗ್ರದಿಂದ ಕೇಶಪರ್ಯಂತವಾಗಿ ಘನಪಟ್ಟಿನಾಮ ಹಚ್ಚುವರು. ಅದರ ನಡುವೆ ತಿರುಚೂರ್ಣದ ಕೆಂಪು ಗೆರೆ ಬರೆಯುವರು. ಮಾಧ್ವರು ಗೋಪಿಚಂದನದಿಂದ ಪಂಚಮುದ್ರೆ ಧರಿಸುವರು. ಶಾಂಕರ ಮತದವರು ಭಸ್ಮ ಲೇಪಿಸುವರು. ಊಟಕ್ಕೆ ಕೂಡ್ರುವ ವೇಳೆಯಲ್ಲಿ ಮಾಧ್ವಶಾಂಕರರು ಗಂಧಾಕ್ಷತೆ ಹಚ್ಚುವರು.

ಹಾರುವರು ಕಚ್ಚೆಹಾಕಿ ದೋತ್ರ ಉಡುವರು. ಸಭ್ಯತನದ ಲಕ್ಷಣವಾದ ಬ್ರಾಹ್ಮಣರ ಬಳಲುಗಚ್ಚೆಯು ಬುನಾದಿಯಿಂದ ಬಳಿಕೆಯಲ್ಲಿ ಬಂದ ವಿಷಯ! ಮೈಮೇಲೆ ಬಹಿರ್ವಾಸ ಹೊರುವರು. ಸೊಂಟಕ್ಕೆ ತಳಿರುಡೆಯಂತೆ ಕಾಣುವ ಕಾಸೆ ಕಟ್ಟುವರು. ತಲೆಯಮೇಲೆ ಟೋಪಿ ಇಲ್ಲವೆ ಕುಲಾಯಿ ಹಾಕುವರು. ಅದರ ಸುತ್ತಲು ಕೆಳಗೆ ಬಟ್ಟೆ ಸುತ್ತುವರು. ಇದಲ್ಲದೆ ಅವರು ಉಪಯೋಗಿಸುವ ಬಟ್ಟೆಗಳೆಂದರೆ ಚಿಂದಿ, ಕುಪ್ಪಸ, (ಬಂಡಿ) ಹಚ್ಚಡ ಮುಂತಾದವುಗಳು.

**ಗಂಡಸರು.**

ಮಿಕ್ಕ ಗಂಡಸರು ತೊಡೆಚಲ್ಲಣ ಉಡುವರು. ಅವು ದಟ್ಟಿಯವಾಗಲಿ ಪಟ್ಟಾವಳಿಯವಾಗಲಿ ಇರುವುವು. ಸಿರಿವಂತರು ಚಲ್ಲಣಗಳಿಗೆ ಮುತ್ತು ಹೆಣೆಯುವರು. ಟೊಂಕಕ್ಕೆ ಚಲ್ಲಣದಮೇಲೆ ಕಾಸೆ ಕಟ್ಟುವರು. ಕೆಲವರು ಮೈಮೇಲೆ ದೋತ್ರ ಹೊರುವರು. ಕೆಲವರು ನಿಲುವಂಗಿಯನ್ನು ತೊಡುವರು. ತಲೆಯಮೇಲೆ ಕುಲಾಯಿ ಇಲ್ಲವೆ, ಟೋಪಿಯನ್ನು ಹಾಕುವರು.

ಕಿವಿಯಲ್ಲಿ ಕುಡುಕು, ಕಾಲಲ್ಲಿ ಬಿರುದಿನ ಕಡಗ, ಹಾಗೂ ಗೆಜ್ಜೆಯ ಪೆಂಡೆಗಳನ್ನು ಇಡುವರು. ಕಾಲೊಳಗೆ ಹಾವುಗೆ ಮೆಟ್ಟುವರು. ಇವುಗಳಲ್ಲದೆ ರುಳಿ ಗಂಟೆಗಳನ್ನೂ ಕಾಲಲ್ಲಿ ಇಡುವವರೂ ಕೆಲವರು. ಕೈಗಳಲ್ಲಿ ಕಡಗ ಹಾಕುವರು. ಸೊಂಟದಲ್ಲಿ ಬಂಗಾರದ ಇಲ್ಲವೆ ಬೆಳ್ಳಿಯ ಉಡಿದಾರಗಳನ್ನು ಧರಿಸುವರು. ಬಹುತರ ಎಲ್ಲ ಜನರು ಬರಿಗಾಲಿನಿಂದ ತಿರುಗಾಡುವರು.

ತಲೆಯಲ್ಲಿ ರಣಗೂದಲನ್ನು ಬೆಳಿಸುವರು. ಮುಡಿ ಕಟ್ಟುವರು. ಕೆಲವರು ಮುಡಿಯನ್ನು ಉದ್ದ ಇಳಿಬಿಡುವರು. ಕೆಲವರು ತುರುಬು ಕಟ್ಟುವದೂ ಉಂಟು. ಮುಡಿಗೆ ಪೂಮಾಲೆ ಮುಡಿಯುವರು. ಹಣೆಗೂ ಹೂಮಾಲೆ ಸುತ್ತುವವರಿರುವರು ಹೆಳಲನ್ನು ಮೇಲೆ ಚಿಮ್ಮುರಿ ಹಾಕುವರು. ನೊಸಲಲ್ಲಿ ತಿಲಕ ಹಚ್ಚುವರು.

ಚಳಿಮಳೆಗಳಲ್ಲಿ ಉಪಯೋಗಿಸತಕ್ಕ ವಿಶಿಷ್ಟ ಸ್ವರೂಪದ ಬಟ್ಟೆಗಳೂ ಬಳಕೆಯಲ್ಲಿದ್ದುವು. ಅವೆಂದರೆ ಕೊಡೆ, ಮೇಣಗಪ್ಪಡ, ಸಕಲಾತಿ, ಗೊಂಗಡಿ, ಮೊದಲಾದವುಗಳು.

**ಹೆಂಗಸರು.**

ಹೆಣ್ಣುಮಕ್ಕಳು ರೇಶಿಮೆಯ ಪೀತಾಂಬರಗಳನ್ನಾಗಲಿ, ನೂಲಿನ ಸೀರೆಗಳನ್ನಾಗಲಿ ನಿರುಕೆ ಹಾಕಿ ಉಡುವರು. ಕೆಲವರು ಶುಭ್ರದೂವಟಗಳನ್ನು ಉಡುವರು. ಮೊಗ ಪಾವುಡ ಹಾಕಿಕೊಳ್ಳುವರು. ರವಕೆ, ಅಂದರೆ, ಕುಪ್ಪಸಗಳನ್ನು ತೊಡುವರು. ಮೊಲೆಗಟ್ಟುಗಳನ್ನು ಕಟ್ಟುವವರೂ ಅನೇಕರು. ಹೆಳಲನ್ನು ಹಾಕಿ ಅದನ್ನು ಬೆನ್ನ ಮೇಲೆ ಇಳಿಬಿಡುವರು. ಚಲ್ಲಣವುಟ್ಟು ಮೇಲೆ ಕಾಸೆ ಕಟ್ಟುವವರೂ ಉಂಟು. ಆದರೆ ಈ ರೂಢಿಯು ಪರಿಚಾರಿಕೆಯರಲ್ಲಿ ವಿಶೇಷವಾಗಿದ್ದಂತೆ ತೋರುತ್ತದೆ. ಕಾಲಲ್ಲಿ ಹಾವುಗೆ ಮೆಟ್ಟುವರು.

ವನಚರರಾದ ಬೇಡತಿಯರೇ ಮುಂತಾದವರು ತಳಿರುಡೆಯನ್ನುಡುವರು; ಅವರ ಮೇಲ್ಭಾಗವು ಹೊದಿಕೆಯಿಲ್ಲದ್ದು.

ಕುಮಾರ ವಾಲ್ಮೀಕಿಯೂ ೧೬ನೆಯ ಶತಮಾನದವನೆಂದೆನ್ನುವರು. ತೊರವೆಯ ರಾಮಾಯಣದಲ್ಲಿಯೂ ಆ ಕಾಲದ ಜನಜೀವನದ ಸಂದರ್ಭಗಳು ತುಂಬಿಕೊಂಡಿವೆ. ಲಂಕೆಗೆ ಕೊಳ್ಳಿಯಿಡುವ ಮುಂದೆ ಮಾರುತಿಯ ಬಾಲಕ್ಕೆ ಸುತ್ತಿದ ವಿವಿಧ ವಸ್ತ್ರಗಳ ವರ್ಣನೆಯಲ್ಲಿ ಆ ಶತಮಾನದೊಳಗೆ ಬಳಿಕೆಯಲ್ಲಿದ್ದ ಹೆಂಗಸರ ಬಟ್ಟೆಗಳ ವಿವರವಿದೆ. ತೊರವೆಯ ರಾಮಾಯಣದ ಸುಂದರ ಕಾಂಡದ ಎಂಟನೆಯ ಸಂಧಿಯಲ್ಲಿರುವುದು,

ರಂಗಚಿತ್ರ ವಸಂತ ರತಿ ಸಾ |
ಳಂಗ ಗುಜ್ಜರ ರತುನ ರವೆಯ ಭು |
ಜಂಗ ವಲ್ಲರಿ ಪಲ್ಲವಾವಳಿ ಪಚ್ಚೆ ಪ್ಯೆಮರವ ||
ಶೃಂಗಲಕೆ ಸುವರ್ಣಪಳಿ ಮದ |
ನಾಂಗ ರೇಖೆ ಸುರಾಗ ರಂಜಿತ ಕು |
ರಂಗ ವಿಲಸಿತ ವಸನ ಬಾಲಕೆ ಸೇರಿದುವು ಕಪಿಯ ||

ಹಳದಿ ಸಂಧ್ಯಾರಾಗ ಹರಿಣಾ |
ವಳಿ ಹಯಾವಳಿ ಹಸ್ತಿ ಹರಿಮುಖ |
ವಿಲಸಿತಾವಳಿ ವಿವಿಧ ಚಿತ್ರಲತಾಂತ ಲತಿಕೆಗಳ ||
ಫಳಿಸುರೇಖೆ ಮಯೂರ ಹಾಸಾ |
ವಳಿ ಸುರಾವಳಿ ಮೇಘವಣ್ಣಿಗೆ |
ಸಳ ವಿವಿಧ ನಿವಸನಗಳೆಸೆದುವು ಕಪಿಯ ಬಾಲದಲಿ ||

ಮಾದಳಿರು ಮಂಚಟಿಕೆ ಮಾದಲಿ |
ಮ್ಯೆದೊಡವಿ ಸಾವಂತಿ ಸೊಗಸಿನ |
ಬೀದಿ ಬಿಳಿದೆಳಗಾವಿ ಸಂಪಿಗೆಗಾವಿ ತೆಳುಗಾವಿ ||
ಆದೆ ಸೀರೆ ಸರೋಜವಲ್ಲರಿ |
ಪಾದಪಾವಳಿ ಪಟ್ಟೆಗಳು ಮೊದ |
ಲಾದ ವಿವಿಧಾಂಬರಗಳೆಸೆದುವು ಕಪಿಯ ಬಾಲದಲಿ ||

ಗೌರಿಣಕೆ ಗುರುಗಂಜಿ ಕುಂಕುಮ ।
ವಾರನಾರೀ ಬಿಡಗವರಸಿಂ |
ಧೂರ ಮಂಜರಿ ಮನ್ಮಥಾವಳಿ ಮಕರ ಚಿತ್ರಲತೆ ।
ಚಾರುಚಾಪಳ ಚತುರತರ ಶೃಂ ।
ಗಾರ ನಾಯಕಿಯರ ನವಾಂಬರ ।
ಮಾರುತಿಯ ಬಾಲದಲಿ ಬೆಳೆದುವು ಬಿಡದೆ ಬೆಂಬಳಿಯ ॥

ಬಳಿದು ಬೆಂಬಳಿದಳಿ ಬಿಳಿದು ಪೊ ।
ಪ್ಪಳಿ ಪಸುರ್ಮುಡಿ ಪಟ್ಟೆ ಪೊತ್ತಿಯು ।
ಫಳಿಸುರಂಗ ಸುರಾಗ ಬೊಂಬೆಯು ಬಣ್ಣ ವೊದಲಾದ ॥
ಹಲವು ದೇಶದ ದೇಶಿಯುದ ಭೂ ।
ತಳ ಭುಜಂಗಮ ಭುವನ ವೀಧಿಯು ।
ವಿಲಸಿತಾಂಬರವಿಂಬುಗೊಂಡುದು ಕಪಿಯ ಬಾಲದಲಿ ॥

ಹೆಂಗಸರು ನೊಸಲಲ್ಲಿ ಕುಂಕುಮ ಹಚ್ಚುವರು. ಸಿರಿವಂತರ ಸ್ತ್ರೀಯರು ಕೇಶರ ಹಚ್ಚುವರು. ಕಣ್ಣಿಗೆ ಕಾಡಿಗೆ ಹಚ್ಚುವರು.

ಹೆಣ್ಣುಮಕ್ಕಳು ಉಪಯೋಗಿಸುವ ಆಭರಣಗಳನ್ನೂ ದಾಸರು ವಿವರ ವಾಗಿ ಕೊಟ್ಟಿರುವರು.

### ಸ್ತ್ರೀಯರ ಆಭರಣಗಳು

ಸಖೀಜನರು ಉಷೆಗೆ ಹಾಕಿದ ಒಡವೆಗಳು,
ಜಾತಿಮುತ್ತುಗಳ ಕೇವಣಿಸಿರ್ದ ವರರತ್ನ । ಕೇತಕಿಯೆಸಳಕಟ್ಟಿದರು ।
ಜಾತಿವಡೆದಪೆರ್ದರುಬಿನ ಮೇಲೆ ತ । ಣ್ಣಾತಿ ಮಾಣಿಕವ ಕಟ್ಟಿದರು ॥
ಕೇಳಾ ಕುವರಿಯ ಸೊಸಲಿನರ್ಧೇಂದು ಸಂ | ಮೇಳಕ್ಕೆ ಬರುವ ತಾರಕೆಯ ।
ಜಾಳವೆಂಬಂತೆ ಮುತ್ತಿನ ಬೈತಲೆಯ ಸು | ಡಾಳ ಮಾಲಿಕೆಯ ಕಟ್ಟಿದರು ॥
ಚಂದಿರ ಸ್ವರವಾಗಿ ಪೊರವಟ್ಟು ಬಹಮಾರ್ಗ । ವೆಂದು ನಾಸಾಪುಟಗೆಲದಿ |
ನಿಂದಿಹ ರೋಹಿಣಿ ನಕ್ಷತ್ರವೆಂಬಂತೆ | ಯೊಂದಿಸಿದರು ಮೂಕುತಿಯ ॥
ಜಿತಕಾಮರುಗಳ ಜಯಿಸುವ ಮನ್ಮಥ । ರಥಚಕ್ರಯುಗಳವೆಂಬಂತೆ |
ಶತಕೋಟಿನೀಲಮಾಣಿಕ್ಯದೋಲೆಯ ಬಾಣ | ಸುತೆಯ ಕರ್ಣದೊಳು
ಸಾರ್ಚಿದರು ॥

ಅತ್ರಿಮುನೀಶನಂದನನಜೂಟಭಕ್ತನ | ಪುತ್ರಿಯ ಗಂಡಯುಗಳದೆ |
ಚಿತ್ರಿಸಿದಂತೆ ನಾನಾ ವರ್ಣದಲಿ ಕರ್ಣ | ಪತ್ರಿಕೆ ಪ್ರತಿಬಿಂಬಿಸಿದುವು ||

ದರ್ಪಕಶಾಸ್ತ್ರವಲ್ಲದೆ ಧರಿತ್ರಿಯೊಳಿಡಿ | ದಿರ್ಪ ನಾನಾ ಶಾಸ್ತ್ರಗಳನು |
ತಪ್ಪಿಸೆ ಶ್ರವಣನಾಳವ ಮುಚ್ಚುವಂದದೆ | ಕೊಪ್ಪನಿಕ್ಕಿದರು ಕರ್ಣದಲಿ ||

ಕಾಂತಾಕಚಭಾರದಿಂದೆ ನುಣ್ಗೊರಲು ಮುಂ | ದೆಂತಹದೆಂದು ಸಂದೆಗವೆ |
ಸಂತತ ಬಣ್ಣಗಲ್ಲುಗಳ ಕೀವಣಿಸಿರ್ದ | ಚಿಂತಾಕ ಬಲುಹನಿಕ್ಕಿದರು ||

ಕಾಯವನೋಡಿ ಶಸ್ತ್ರದೊಳಿರಿದೇರಿಂದೆ | ಸಾಯುದೆ ಶ್ರೀಯ ಲೋಭದಲಿ |
ತೋಯಜಾಕ್ಷಿಯ ಕಂಠ ಮಾಲೆಯ ಕುಚಮಧ್ಯ | ನಾಯಕರತ್ನ ರಂಜಿಸಿತು ||

ರಜನೀಚರಹರನಾತ್ಮಸಂಭವ ತನ್ನ | ಗಜಮಸ್ತಕದರಳೆಲೆಯ |
ನಿಜಲೀಲೆಯೊಳಮರಿಸಿದಂತೆ ಕುಮರಿಗೆ | ಭುಜಪತ್ರಿಕೆಯ ಸಾರ್ಚಿದರು ||

ಕಡುಗಲಿ ಕಾಮ ತನ್ನುಭಯ ಹಸ್ತದ ಗದೆ | ಗಡರ್ಚಿದ ಮಣಿಗಟ್ಟನಂತೆ |
ಬಿಡಯವಿಲ್ಲದೆ ಕುಮರಿಯ ತೋಳಭಾಪುರಿ | ಕಡಗ ಕಂಕಣವನಿಕ್ಕಿದರು ||

ಅಂಗಜಾತನ ಪುಷ್ಪಶರ ಬಿರಿದಪುವೆಂದು | ಹೊಂಗಟ್ಟುಗಳ ಬಿಗಿದಂತೆ |
ತೊಂಗಲು ಸೆಳ್ಳುಗುರ್ವೆರಲಿಂಗೆ ಮಾಣಿಕ | ಮುಂಗುರುಗಳನಿಕ್ಕಿದರು ||

ಹೆಂಗಳರನ್ನೆಯ ಹೇಮವಕ್ಷವನಾಂತ | ಕಂಗೊಳಿಸುವ ಬಟ್ಟವೊಲೆಯ |
ಅಂಗನೆಯುಡಿಯಿಡಲಲುಗಿ ಜಗ್ಗುವುದೆಂದು | ಮಂಗಳರವಕೆಯಿಕ್ಕಿದರು ||

ಏಣಲೋಚನೆಯ ಬಲ್ಮೊಲೆಯ ಭಾರಕೆ ನಿ | ತ್ರಾಣಿಸಿ ನಡುನಿಲ್ಲದೆನುತೆ |
ಕೇಣವಿಲ್ಲದೆ ರತ್ನಕೀಲಿತಸ್ವರ್ಣದೊ | ಡ್ಯಾಣವ ತಂದಿಕ್ಕಿದರು ||

ಸಾಮಜಕಂಠೀರವಮಸ್ತಕಮಧ್ಯ | ಸೀಮೆಯ ರೇಖೆಯೆಂಬಂತೆ |
ಕೋಮಲ ಬಿರುದಿನೊಳ್ ಕಟಿಸೂತ್ರ ಕಾಂಚೀ | ದಾಮವ ತಂದಿಕ್ಕಿದರು ||

ಆ ಯತಿಹೆಣ್ಣುಗಳೇನು ಗಹನವೆಂಬ | ಬಾಯಿ ಬಡಕ ತವಸಿಗಳ |
ತಾಯೆ ನೀ ಕಡೆಮೆಟ್ಟೆನುತೆ ಕಾಲಂದುಗೆ | ಪಾಯವಟ್ಟವ ತಂದಿಕ್ಕಿದರು ||

ಸೆಕೆಯಿಲ್ಲದಾವಗಮುರಿವ ಕೆಂಗಿಡಿಯ ಮಾ | ಲಿಕೆಯಂತೆ ಮಂಗಳವಡೆದ |
ನಿಖಿಳ ರತ್ನಂಗಳಡಿಸಿದ ಮುದ್ರಿಕೆಮುಂ | ಟಿಕೆಯ ನಿಟ್ಟರು ಬೆರಲ್ಗಳಿಗೆ ||

ಕಟ್ಟಾಳು ಕಾಮದೇವನ ತಾಪ್ಪರಿಯುದ | ಪಟ್ಟದಾನೆಯ ಬಂಧಿಸದೆ |
ಬಿಟ್ಟುದುಂಟಾದೊಡೆಲ್ಲರ ಜಗುಳ್ದುಳಿವುದೆಂ | ದಿಟ್ಟರು ಕಾಲ್ಪಿಗಳವನು ||

## ೬. ಹೆಣ್ಣುಮಕ್ಕಳು.

ರಾಜಭವನಗಳಲ್ಲಿ ಹೆಣ್ಣುಮಕ್ಕಳು ಪರಿಚಾರಿಕೆಯರಾಗಿ ಇರುವರು. ವಾರನಾರಿಯರ ಸುಳಿದಾಟ ಬಹಳ. ರಾಣೀವಾಸದಲ್ಲಂತೂ ಹೆಂಗಸರ ಹೊರತು ಮತ್ತಾರಿಗೂ ಪ್ರವೇಶವಿರಲಿಲ್ಲ. ರಾಣೀವಾಸದಲ್ಲಿ ಕೊಜ್ಜೆಯರೂ ಇರುವರು. ರಾಜರೂ ರಾಣಿಯರೂ ದಂಡಿಗೆ ಪಲ್ಲಕ್ಕಿಗಳಲ್ಲಿ ಕೂಡ್ರುವರು. ರಾಜಸ್ತ್ರೀಯರು ದೇವರಿಗೆ ಮುಂತಾದಲ್ಲಿ ಹೊರಟರೆಂದರೆ, ನೂರಾರು ಹೆಣ್ಣು ಮಕ್ಕಳು ಅವರ ದಂಡಿಗೆ ಪಲ್ಲಕ್ಕಿಗಳನ್ನು ಹಿಂಬಾಲಿಸುವರು. ತರತರದ ವಾದ್ಯಗಳು ಗೀಳಿಡುವುವು. ಆಗ್ಗ ಸಂಚಿ, ಸಗ್ಗಳೆ, ಕಾಳಾಂಜಿ, ಕುಂಚ ರನ್ನ ಗನ್ನಡಿ ಮುಂತಾದವುಗಳನ್ನು ಹಿಡಿದ ಹೆಂಗಸರೂ ಅನೇಕರು.

ಒಕ್ಕಲಿಗರ ಹೆಂಡರು ಗಂಡಂದಿರಿಗೆ ಅವರ ವ್ಯವಸಾಯದಲ್ಲಿ ಅನುಕೂಲರಾಗಿರುವರು. ಬತ್ತದ ಮಡಿಗಳನ್ನು ಕಾಯುವುದು, ಹಕ್ಕಿಗಳನ್ನು ಹಾರಿಸುವುದೇ ಮುಂತಾದ ಕೆಲಸಗಳನ್ನು ಸ್ತ್ರೀಯರೂ ಕೈಕೊಳ್ಳುವರು.

ಪೇಟೆಗಳಲ್ಲಿ ವ್ಯಾಪಾರ ಮಾಡುವ ಹೆಂಗಸರೂ ಇರುವರು.

ಸಡಿಲಿದ ಮುಡಿ ಬೆಮರ್ವನಿಗಳು ತೀವಿ ತೊ। ಟ್ಟಿಡುವಾಸ್ಯದಲಗುವ ಕುಚದಿ ।
ಕಡು ಸೊಬಗಾಂತು ಗಂಧವ ಮುಗುಳ್ಚುವ ಹೆಂಗ। ಳಡಸಿದಂಗಡಿಗ
ಳೊಪ್ಪಿದುವು ॥

ಮಲ್ಲಿಗೆಯುಲರ್ದಂಡೆ ವಿಡೆಯೆ ಬಂದೆರಗುವ । ಜಿಲ್ಲಿದುಂಬಿಗೆ ಬೆರ್ಚಿನಿಂದು ।
ಸೊಲ್ಲಿಪ ಪೂಮಾಲೆಗಾರ್ತಿ ಕಾವನ ಕಬ್ಬು । ವಿಲ್ಲಿನಂತಿರ್ದಳೀನೆಂಬೆ ॥

ವಾರನಾರಿಯರ ವ್ಯವಸಾಯವೂ ವೈಭವದಿಂದ ಸಾಗುತ್ತಿರುವದಾಗಿ ತೋರುತ್ತದೆ. ದ್ವಾರಕೆಯೊಳಗಿನ ಸೂಳೆಗೇರಿಯ ಸೊಗಸು,

**ಸೂಳೆಗೇರಿ.**

ತೋರಿಯು ನಿಖಿಳ ಪೊಂಗಳಸದಿ ಮೆರೆವ ಚೌ। ಚಾರಿಯು ಹರ್ಮ್ಯದ ಮುಂದೆ।
ವಾರಿಜದಳ ಲೋಚನೆಯರೊಪ್ಪುವ ಸೂಳೆ। ಗೇರಿಯುಸೊಬಗ ನಿಟ್ಟಿಸಿದ ॥

ಜಾಣಶಿಲ್ಪಕ ನಿರ್ಮಿತ ಚಂದ್ರಕಾಂತ ಪಾ । ಷಾಣವೇದಿಕೆಯ ಸಾಲುಗಳು ।
ಏಣಾಕ್ಷಿಯರ ಮಂದಿರಗಳಿರ್ದುವು ಪಂಚ। ಬಾಣನರತಿಗೇಹದಂತೆ ॥

ಚೆನ್ನಾಗಿ ಪುಳಿದೊಡೆದೊಪ್ಪವಿಕ್ಕಿದ ಚೊಕ್ಕ । ಚಿನ್ನದ ಪತುಮೆಗಳಂತೆ ।
ರನ್ನದ ಮುತ್ತ ಹಾರವನಿಟ್ಟು ಸುಗುಣ ಸಂ । ಪನ್ನೆಯರಿರ್ದರಿಕ್ಕೆಲದಿ ॥
ಬಾಲೆಯೊರ್ವಳು ತನ್ನ ಲಲಿತಗೇಹದ ಭದ್ರ । ಶಾಲೆಯೊಳ್ ನಿಂದು ನುಣ್ಮೊಲೆಯ ।
ಮೇಲಿಹ ಸೆರಗ ಪಿಡಿದು ನೋಡಿದಳು ರತಿ । ಗೋಲೆಯು ನೋಡಿಕೊಂಬಂತೆ ॥
ಹಸ್ತಿವಾವುಜ ವೀಣೆ ಮದ್ದಳೆ ರಾವಣ । ಹಸ್ತಿಕಿನ್ನರಿಜಂತ್ರವುಡುಕು ।
ದುಸ್ತರ ಸ್ವರಮಂಡಲಮುಖ್ಯ ವಿ । ದ್ಯಾಸ್ತ್ರೀಯರಿರ್ದರಿಕ್ಕೆಲದಿ ॥

## ೭. ಸಂಪ್ರದಾಯಗಳು.

ಮಾಧ್ವ, ಶಾಂಕರ, ರಾಮಾನುಜ ಮತತ್ರಯದ ವಿಷಯವನ್ನು ಹೇಳಿದುದಾಯಿತು ಅವರಲ್ಲದೆ, ಕರ್ನಾಟಕದಲ್ಲಿ ಜೈನರು, ಶೈವರು, ಗಾಣಪತ್ಯರು, ಶಾಕ್ತರೇ ಮೊದಲಾದವರೂ ಇರುವರು ಶಾಕ್ತರ ಸುರಾರಾಧನೆಯನ್ನು ದಾಸರು ಬಣ್ಣಿಸಿದುದು,

ಮನೆಯಸಾರಿಸಿ ರಂಗವಲ್ಲಿಯನಿಕ್ಕಿ ಭೊಂ । ಕನೆ ಭಕ್ಷ್ಯ ಭೋಜ್ಯಸವಿದು ।
ನನೆಯಕ್ಕಿ ಕಡಲೆ ಪಣ್ಯಾರದಿ ನಿಖಿಲಾ । ರ್ಚನೆಯ ವಸ್ತುಗಳ ನಾರ್ಚಿದರು ॥
ತಂಡುಲರಾಶಿಯೊಳ್ ಕೊಡನಿಟ್ಟು ಬೇವಿನ । ದಂಡೆಯ ಕೊರಲ್ಗಿಟ್ಟು ಗಂಧ ।
ಭಂಡಾರವನಿಟ್ಟು ಧೂಪದೀವಾರತಿ । ಕೆಂಡವ ಸುರಸಿದರೊಲಿದು ॥
ರುಚಿವೆತ್ತ ಪರಮಶಕ್ತಿಯ ಪಾದಪೂಜೆಯ । ರಚಿಸಿದರಾಗಮೋಕ್ತದಲಿ ।
ವಚಿಸಿತನ್ಮಂತ್ರಕರ್ಮದಿ ಹೇಮನವರತ್ನ । ಖಚಿತ ಪಾತ್ರೆಯೊಳೀಂಟಿದರು ॥

ಭೈರೆದೇವರು, ಯಲ್ಲಮ್ಮ, ಮಣಸಿ, ಚೌಡಿ, ಮೈಲಾರಿ ಮೊದಲಾದ ದೈವಗಳನ್ನು ಆರಾಧಿಸುವ ಪಂಥಗಳೂ ಅನೇಕವಾಗಿರುವುವು. ಧರ್ಮದ ಸೋಗು ಹಾಕಿದ ಎಕ್ಕನಾತಿಯರು, ಜಕ್ಕಿಯರು, ಕನ್ನೆಯರು (ಬಸವಿಯರು) ಮುಂತಾದ ಜನರೂ ಇರುವರು. ಬತ್ತಲೆಯಾಗಿ ಬೇವಿನ ತಳಿರನ್ನುಟ್ಟು ಬಲಿಕೊಡುವ ಸಾಂಪ್ರದಾಯವೂ ಉಂಟು. ರಾತ್ರಿಯನ್ನೆಲ್ಲ ದೇವರ ಆರಾಧನೆಯಲ್ಲಿ ಕಳೆಯುವೆವೆಂದು ಹೆಂಡ ಕುಡಿದು ಕುಣಿಯುವ ಪಂಥಗಳೂ ಇವೆ. ದೈವಗಳನ್ನು ಪ್ರಸನ್ನಗೊಳಿಸ ಬೇಕೆಂದು ಕುರಿ ಕೋಣಗಳನ್ನು ಬಲಿಯಾಗಿ ಅರ್ಪಿಸುವ ಪರಿಪಾಠವೂ ಪ್ರಚಾರದಲ್ಲಿರುವುದು. ಇಂತಹ ಹೊಲ್ಲದ ಬಣಗು ದೈವಗಳ ಗೊಡವೆಗೆ ಹೋಗುವವರನ್ನು ದಾಸರು ಒಳ್ಳೆ ಕಸುವಿನಿಂದ ಮನದಣಿ ಹಳಿದಿರುವರು.

ಕುಮಾರ ವಾಲ್ಮೀಕಿಯ ವೈರಾವಣನ ಕಾಳೆಗದಲ್ಲಿ ಕಂಕಣಾದೇವಿಯರ ಮುಂದೆ ಕೈಕೊಂಡ ರಕ್ಕಸನೋಂಪಿಗಳ ಕೆಲ ಮಾದರಿಗಳನ್ನು ಕೆಳಗಿನ ಪದ್ಯಗಳಲ್ಲಿ ಕಾಣಬಹುದು. ಇಲ್ಲಿ ಕೊಂಚ ಅತಿಶಯೋಕ್ತಿ ಇರಬಹುದು. ಪಾತಾಳ ಲಂಕೆಯಲ್ಲಿ ಹನುಮನು ಕಂಡ ದೃಶ್ಯ,

ಆರಿದ ಕೋರೆಯ ತಲೆಯ ರಾಶಿಯ |
ಮುರಿದ ನವಿಲಿನ ಕೊರಲ ಬಂಬಲ |
ತರಿದ ಕುರಿಯೊಟ್ಟಲಿನ ಖಂಡಿಸೆ ಬಿದ್ದಹೋತುಗಳ ||

ತರಿದ ಕೋಣನ ಹಿಂಡುಗಳ ನುರೆ |
ಮೆರೆವ ಕೂಳ ಬಲಿಯ ರಾಶಿಯ |
ಹಿರಿಯ ಮದ್ಯದ ಘಟಗಳನು ನೋಡುತ್ತ ನಡೆತಂದ ||

ಕೊಂಡದೋಕುಳಿಯಾಡುವರ ನೆರಿ |
ಗೆಂಡದೊಳು ಹೊರಳಿದರ ಮಿಗೆ ತರಿ |
ಗೆಂಡದೊಳು ಮೀಯುವರನುರಿಯೊಳು ಹೊಕ್ಕುಹೊರಡುವರ ||

ಕಂಡಗಳ ಕೊಯ್ದಿಡುವ ಕರುಳಿನ |
ದಂಡೆಗಳ ತೆಗೆತೆಗೆದು ಮುಡಿಸುವ |
ಗಂಡುಗಲಿ ದಾನವರ ನೆರವಿಯು ನೋಡುತೈತಂದ ||

ನೆತ್ತಿಗಳ ಕೊರೆಕೊರೆದು ಕರುಳಿನ |
ಬತ್ತಿಗಳ ಹೊಸೆದಿಕ್ಕಿ ದೀಪವ |
ಹೊತ್ತಿಸುವ ಹರಕೆಗಳ ನೀವರು ಕೆಲರು ನಾಲಗೆಯ ||

ಕತ್ತರಿಸಿ ತೆಗೆದೀವ ಕರುಳನು |
ಕಿತ್ತು ಗುಡಿಗಳ ಕಟ್ಟೆ ಕಣಿಯುಂತೆ |
ಸುತ್ತಿಬಹ ದೈತ್ಯರ ಸಮೂಹವ ನೋಡುತೈದಿದನು ||

ಬೆರಲುಗಳ ಸಮಿಧೆಗಳ ಕಂಡದ |
ಚರುಕಪಾಲದ ಪಾತ್ರದೊಳು ಬಿಸಿ |
ನೊರೆಯ ರಕ್ತಾಜ್ಯದಲಿ ನರದರ್ಭೆಯ ಪವಿತ್ರದಲಿ ||

ಬರಿಯಲುವಿನಿಂದಾಗಲಗ್ನಿಯು ।
ನುರಿಬಿ ಹೋಮವ ಬೇರೆ ಕಡೆಯುಲಿ ।
ಶಿರವ ಪೂರ್ಣಾಹುತಿಗೆ ಕೊಡುವರ ನೋಡುತೈತಂದ ॥

ಸಿಡಿದಲೆಯು ಕೊಟ್ಟೆರದ ತಲೆ ಬೊ ।
ಬ್ಬಿಡಲು ಕರದಲಿ ಪಿಡಿದ ಮುಂಡವು ।
ನಡೆದು ವೈಯ್ಯಿಕ್ಕುತ್ತ ರಿಂಗಣಗುಣಿದು ನಲಿವವರ ॥
ಕಡಿದು ರುಂಡವ ಮುಂಡದಗ್ರದಿ ।
ಬಿಡದೆ ಸುರಿವರುಣಾಂಬುಧಾರೆಯು ।
ಹಿಡಿದು ನಿಜಕರಗಳಲಿ ತರ್ಪಣವೀವರನು ಕಂಡ ॥

ಪಸೆದಲಗಿನಿಂದಿರಿದು ರಕುತವ ।
ಬಸಿಯುತಭಿಷೇಕವನು ಮಾಡುವ ।
ಬಸಿರ ಬಗಿಯುತೆ ಕರುಳಿನಿಂ ದೇವತೆಯುನರ್ಚಿಸುವ ॥
ನಸುನಗುತ ಕೈಗಳನು ತುಂಡಿಸಿ ।
ಬಸಿವ ಮುಂಡದಿ ದಂಡವನು ವಿರ ।
ಚಿಸುವದನುಜೇಶ್ವರರ ನೆರವಿಯ ನೋಡುತೈತಂದ ॥

## ೮. ಕಲಿ–ಕೈದು–ಕಾಳೆಗಗಳು.

ಕನಕದಾಸರ ಕಾಲವು ವೀರರಸಪ್ರಧಾನವಾದುದು. ನಿರ್ವೀರ್ಯರಾದ ನಮಗೆ ಆ ರಸವೇ ಕಣ್ಮರೆಯಾಗಿದೆ. ಧರ್ಮಶಾಸ್ತ್ರಗಳು ರಾಜಕಾರಣವನ್ನು ಧರ್ಮಕಾರಣದಿಂದ ವಿಂಗಡಿಸುವ ಭೇದವನ್ನು ಹೇಳುವುದಿಲ್ಲ. ದಾಸರ ಕಾಲದಲ್ಲಿ ಅಂತಹ ಭೇದವು ಆಚರಣೆಯಲ್ಲಿರಲಿಲ್ಲ. ಧರ್ಮಾಚರಣೆಯಲ್ಲಿ ಕ್ಷಾತ್ರವೃತ್ತಿಗೂ ಯೋಗ್ಯವಾದ ಸ್ಥಾನವಿದ್ದಿತು. ದಾಸರು, “ ಶಾಸ್ತ್ರಾರ್ಥವ ತಿಳಿದು ನಾನಿದಪೇಳ್ವೆ ” ಎಂದು ಹೇಳಿ, ತಮ್ಮ ಕಾವ್ಯವನ್ನು ರಚಿಸಿರುವರು. ದಾಸರ ಕಾವ್ಯವು, “ ವೀರರ್ಗೆ ನುಚ್ಚು. ” ತರಂಗಿಣಿ ನಳಚರಿತ್ರೆಗಳಲ್ಲಿ ಅವರು ತಮ್ಮ ಕಾಲದ ಕ್ಷಾತ್ರವೃತ್ತಿಯ ಜೀವನವನ್ನೂ ಸಾದ್ಯಂತವಾಗಿ ಚಿತ್ರಿಸಿರುವರು.

ವೀರರು ಯುದ್ಧಕ್ಕೆ ಸನ್ನದ್ಧರಾಗಿ ಮನೆಯಿಂದ ಹೊರಟರೆಂದರೆ, ಅವರಿಗೆ ಮನೆಯ ಹೆಣ್ಣುಮಕ್ಕಳೂ ತಕ್ಕ ಪ್ರೋತ್ಸಾಹ ಕೊಡುವರು. ಉಷೆಯ

ಅರಮನೆಯಿಂದ ಯುದ್ಧಕ್ಕೆ ಹೊರಡುವ ಅನಿರುದ್ಧನನ್ನು ಅಲ್ಲಿಯ ಹೆಣ್ಣು ಮಕ್ಕಳು ಹೇಗೆ ಬೀಳ್ಕೊಟ್ಟರೆಂಬುದನ್ನು ದಾಸರು ಹೇಳಿದುದು,

**ಕಲಿಗಳ ಸಿದ್ಧತೆ.**

ಕಟ್ಟಾಣಿನುಡಿಗೇಳಿ ಕಡುಮೆಚ್ಚಿ ಪರಿತೋಷ । ವಟ್ಟು ಬಲಾನ್ವಿತ ನಗುತೆ ।
ಉಟ್ಟದಟ್ಟಿಯು ಚಲ್ಲಣವು ಕಂಗೊಳಿಸಲ್ಕೆ । ದಟ್ಟಡಿಯಿಟ್ಟನಾ ಕುಮರ ॥

ಒಮ್ಮಾರು ಕೇಶಪಾಶವಮಾಡಿ ತ್ರಿಭಾಗೆಯ । ಘಮ್ಮನೆ ನಿಡುಜಡೆವೆಣೆದು ।
ಕಮ್ಮಲರ್ಗಳ ಸೂಡಿ ಸಿರಿಮುಡಿಯಲಿ ವೀರ । ಚಿಮ್ಮುರಿಯನು ಹಾಯ್ಕಿದನು ॥

ಯಾದವರಾಯ ಕತ್ತುರಿತಿಲಕವನಿಟ್ಟು । ದ್ವಾದಶನಾಮಾಂಕಿತದಿ ।
ಮಾಧವ ಕೃಷ್ಣಗೋವಿಂದ ದೈತ್ಯಾರಿಯ । ಪಾದವ ಬಲಗೊಂಡ ಮುದದಿ ॥

ಪೂಸಿದ ಮೈಗೆ ಸುಗಂಧವ ಕರ್ಣಿಕೆ । ವಾಸಿತ ದಿವ್ಯ ಜವಾದಿ ।
ಭೂಷಿತ ನವರತ್ನಾಭರಣಗಳಿಂದೆ । ಭೂಷಿತನಾದ ಧೈರ್ಯದಲಿ ॥

ಕೊಬ್ಬಿದ ಭುಜಯುಗಳದಿ ವೀರರಸದಿಂ । ದುಬ್ಬಿದ ನಿಡುದೋಳ್ಗಳೆಡೆಯ ।
ಪರ್ಬಿದಕಾಂತಿ ತಾಣಗಳೆನೆ ನೆಣ । ಗೊಬ್ಬಿಲಿ ಗರುವನೊಪ್ಪಿದನು ॥

ಕೊಟ್ಟಳು ಕೋದಂಡ ಬಾಣವ ಕಪ್ಪಿನ । ಬೊಟ್ಟನಿಕ್ಕಿದಳು ಭಾಳದಲಿ ।
ನೆಟ್ಟನೆ ರಣವ ಜಯಿಸು ಎಂದು ಸೇಸೆಯ । ನಿಟ್ಟಳು ಸಿರಿಮುಡಿಯಲ್ಲಿ ॥

ಅವಳಿಷ್ಟ ಮಾಡಿ ಕುಸ್ತರಿಸಲ್ಕೆ ಕಡುಮೆಚ್ಚಿ । ಧವಳಸರೋಜಾಯತಾಕ್ಷಿ ।
ಪವಳದಧರಾಮೃತದುಣಿಸುತಂಬುಲದುಬ್ಬು । ಗವಳವನಿತ್ತಳಾಳ್ದಸಿಗೆ ॥

ಕಂದರ್ಪಸೂನು ಸೈರಿಸಿಕೊಂಬನ್ನ । ಬಂದನು ಬಲವಂತಮಂತ್ರಿ ।
ಮುಂದ ಬುದ್ಧಿಯ ಬಿಟ್ಟು ಬಾಗಿಲತಗೆಸ ಹೇ । ಳೆಂದ ನಾಯಕಗೆ ಹೇಳಿಸಿದ ॥

ಭೇರಿಯನ್ನು ಹೊಡಿದು ಸೈನ್ಯ ಕರೆಯುವರು. ಮೇಲೆ ಹೇಳಿದಂತೆ ರಾಜರೂ ನಾಯಕರೂ ಮನೆಬಿಟ್ಟು ಹೊರಟು ದಂಡಿನ ಮುಂಚೂಣಿಯಲ್ಲಿ ನೆಲಿಸುವರು. ಅವರು ಕುದುರೆ, ದಂಡಿಗೆ ಪಲ್ಲಕ್ಕಿಗಳನ್ನು ಏರುವರು. ಅವರ ಹಿಂದೆ ದಂಡು ಹೊರಡುವುದು. ದಂಡಿನಲ್ಲಿ "ಸಿಂಧದ ಸಾಲ ಝಲ್ಲರಿ ಗುರುಪತಾಕ ಛತ್ರ ಚಾಮರಗಳು" ಅನೇಕವಾಗಿರುವುವು.

ನಳನು ಪುಷ್ಕರನಮೇಲೆ ಸಾಗಿಹೋದುದು,

### ದಂಡಯಾತ್ರೆ.

ತುರಗ ಹಲ್ಲಣಿಸಿದುದು ರಥ ವೋ |
ಹರಸಿ ತೆರಳಿತು ಸಂಗರಕೆ ಮದ |
ಕರಿಗಳಿಟ್ಟಣಿಸಿದುದು ಕಾಲಾಳಿದರೆ ಸಂದಣಿಸಿ ||
ನೆರೆದುದಗಣಿತ ಸೈನ್ಯಸಾಗರ |
ಮೊರೆವವೊಲ್ ಗಂಭೀರ ಭೇರಿಗ |
ಳುರವಣಿಸೆ ಹೊರವಂಟ ನಳನೃಪನರಸ ಕೇಳೆಂದ ||

ತುರಗಚಯ ವೆಂಟಣಿಸಿ ಹೂಡಿದ |
ವರರಥಕೆ ಬಲವಂದು ಕೈದುವ |
ಧರಿಸಿಯೇರಿದನರಸ ಮಂಗಳವಾದ್ಯರಭಸದಲಿ ||
ತೆರಳಿತಲ್ಲಿ ಮಹಾರಥರು ಸಂ |
ಗರಕೆ ಮುಂಚುವ ಭಟರಗಡಣದಿ |
ಧುರಕೆ ನಡೆದರು ಮುಂದೆ ಸಾರುವ ಗೌರಗಹಳೆಯಲಿ ||

ನಳ ಚರಿತ್ರೆಯೊಳಗಿನ ಈ ದಂಡಯಾತ್ರೆಯು ಕೊಂಚು ಕವಿಸಮಯಕ್ಕೆ ಸೇರಿದುದು. ದಾಸರ ಕಾಲದ ನಿಜವಾದ ದಂಡಯಾತ್ರೆಯು ಇಲ್ಲಿ ಮಸಕು ಮಸಕಾಗಿ ಕಾಣುವದು. ಆದುದರಿಂದ, ಕದನಕ್ಕೆ ಹೊರಟವರಲ್ಲಿ ಆರಾರು ಅಡಕವಾಗಿದ್ದರೆಂಬುದನ್ನು ಅರಿತುಕೊಳ್ಳಬೇಕಾದರೆ, ತರಂಗಿಣಿಯಲ್ಲಿ ಕೃಷ್ಣನು ಬಾಣಾಸುರನ ಮೇಲೆ ಸಾಗಿಹೋದ ದಂಡಯಾತ್ರೆಯ ದೃಶ್ಯವನ್ನು ಮನಗೊಳ್ಳುವುದು ಉಚಿತ.

### ದಂಡಯಾತ್ರೆ.

ಹೊಂಗಳಸದ ಸತ್ತಿಗೆ ಡಾಳಿಪ ಚಮ | ರಂಗಳ ಸಂಚಿ ಸಗ್ಗಳೆಯ |
ಮಂಗಳ ಕುಂಚ ಕಾಳಾಂಜಿ ಬೀಸಣಿಗೆಯ | ಪೆಂಗಳೇರಿದರಿಕ್ಕೆಲದಿ ||

ಅಗಣಿತ ವರ್ಣಕೇತನದಲ್ಲಿ ಬರೆದಿರ್ದ | ಖಗರಾಜಶಂಖಚಕ್ರಗಳು |
ಸೊಗಯಿಪಗಜಮೀನಪತಗಳ | ಗಗನವ ತುಡುಕಲೆತ್ತಿದರು ||

ಮಂಡಳಿಸಿದರು ಮಂತ್ರಿಗಳು ಸೇನಭಾಗರು | ಪಂಡಿತ ಪಂಚಾಂಗಿಗಳು |
ದಂಡಿಗೆ ಪಲ್ಲಕ್ಕಿ ಬೊಕ್ಕಸ ಬಂಡಾರ | ಖಂಡಿತವಾಗಿ ತುಂಬಿದರು ||

ರಾಜರು ರಕ್ಕಸವಾಂತರು ಲಾಳಿ ಬಿ | ಲ್ಲೋಜರು ಪೆಟಲಂಬಿನವರು |
ತೇಜೋಮಯ ಬಾಣಗಾರರೇರಿತು ಖಗ | ರಾಜನೆರಂಕೆಯಿಕ್ಕಲದಿ ||
ಕೊಟ್ಟಿಗೆ ಕಾಮಾಟ ಕ್ರಮುಕ ಬೆಳ್ಳಿಲೆಗರು | ಜಟ್ಟಿಗ ಗೀತಪಾಠಕರು |
ಸೆಟ್ಟಿಗ ಬಲು ಚಿನ್ನವರದರು ಘಟ್ಟಿಪ | ಕಟ್ಟಿಗೆಕಾರರೇರಿದರು ||
ಹೊಳೆಯುವ ಕಡಗದ ಹೊದರಿನ ಧಾರೆಯ | ತಳತಳಿಸುವ ಪರಿಘೆಗಳ |
ಆಳವುಳ್ಳ ಸುಭಟರೇರಿತು ಸೇನಾನಿ | ಗಳೊಲವಿಂದೆ ಕೈವೀಸೆ ||
ಚೋದ್ಯವಾಗಿದೆ ಕಣ್ಮನಸಿಂಗೆ ವಿಹಗಾ | ರಾಧ್ಯನೆರಂಕೆಯಿಕ್ಕಲದೆ |
ಆದ್ಯಂತರಹಿತಾತಿಬಲವಡಗಿತು ಬಹು | ವಾದ್ಯಕೋಟಾನುಕೋಟಿಗಳು ||

ಈ ಕಾಲದಲ್ಲಿ ವಿಜಯನಗರದವರ ಕೇತನದಲ್ಲಿ ' ಖಗರಾಜಶಂಖಚಕ್ರ ಗಳು ಇದ್ದುವೊ ಇಲ್ಲವೊ, ಎಂಬುವನ್ನು ಸಂಶೋಧಕರು ವಿಚಾರಿಸಬೇಕು. ಶೋಣಿತಪುರದ ಬಳಿಯಲ್ಲಿ ಕೃಷ್ಣನು ಬೀಡು ಬಿಟ್ಟುದು,

**ಪಾಳಯ.**

ವಟಪತ್ರತಲ್ಪ ನಿರೂಪಿಸೆ ಬಹುವರ್ಣ | ಪಟಲಾಂಛನಭೂಭುಜರು |
ನಟನೆಯಿಂದಲ್ಲಲ್ಲಿ ಬಿಟ್ಟುದು ಯಾದವ | ಕಟಕಕ್ಕೆ ತಾವಿಲ್ಲದಂತೆ ||
ದೇಶಾಧಿಪರ ಬೆಳ್ಗೊಡೆಗಳು ನಕ್ಷತ್ರ | ರಾಶಿಯಂತೆಸೆಯೆ ಮಧ್ಯದಲಿ |
ಕೇಶವರಾಯನ ದೂಸ ರೋಹಿಣಿಯ ಪ್ರಾ | ಣೇಶನೆಂಬಂತೆ ರಂಜಿಸಿತು ||
ಓರಂತೆ ಬಲರಾಮ ಸಾತ್ಯಕಿ ಕೃತವರ್ಮ | ಮಾರಕುಮಾರ ದೂಸಗಳು |
ನಾರಾಯಣನ ಬೀಡಾರದ ಮುಂದೆ ಹ | ಜಾರಹೊಂಗಳಸವೆತ್ತಿದುವು ||
ಮಂಗಳ ಬೀದಿವಾಣದ ಮುಂದೆ ನಾಲ್ದೆಸೆ | ಪಿಂಗಡ ವೀಥಿವೀಥಿಯೊಳು |
ಕಂಗೊಳಿಸುವ ಸೋಪಸ್ಕರ ವ್ಯವಹಾರ | ದಂಗಡಿ ಮೆರೆದುವಿಕ್ಕೆಲದಿ ||

ದಾಸರು ವರ್ಣಿಸಿರುವ ದಂಡಯಾತ್ರೆ ಪಾಳಯಗಳ ವಸ್ತುಸ್ಥಿತಿಯನ್ನು ಅರಿತು ಕೊಳ್ಳಬೇಕಾದರೆ, ರಾಯಚೂರ ಯುದ್ಧವನ್ನು ವಿವರಿಸಿದ ನ್ಯೂನಿಝನ ವೃತ್ತಾಂತವನ್ನು ಮನಗೊಳ್ಳಬೇಕು.

"ಪಾಳಯದಲ್ಲಿ ಅಚ್ಚುಕಟ್ಟಾದ ಬೀದಿಗಳಿರುವುವು. ಒಬ್ಬೊಬ್ಬ ನಾಯಕನ ಪಾಳಯದಲ್ಲಿ ಒಂದೊಂದು ಪೇಟೆಯಿರುವುದು. ಅಲ್ಲಿ, ಆಡು, ಕುರಿ, ಹಂದಿ, ಕೋಳಿ, ಮೊಲ, ಪಾರಿವಾಳ ಮುಂತಾದವುಗಳ ಮಾಂಸವು ಹೇರಳವಾಗಿ ದೊರೆಯುವುದು. ಈ ಸೌಕರ್ಯವನ್ನು ವಿಚಾರಿಸಿದರೆ ವಿಜಯನಗರದಲ್ಲಿರು

ವೆನೆಂದು ಅನಿಸುವುದು. ಜನರ ಆಹಾರದ ತರತರದ ಅಕ್ಕಿ, ಗೋವಿನಜೋಳ, ಶೇಂಗಾ ಮೊದಲಾದ ಕಾಳುಕಡಿಗಳೂ ಅಲ್ಲಿ ಇರುವುವು. ಹೊಟ್ಟೆಗೆ ಅವಶ್ಯಕವಾದ ಈ ಪದಾರ್ಥಗಳ ಪೇಟೆಯ ಹೊರ್ತಾಗಿ ಬೇರೊಂದು ಪೇಟೆಯಿರುವುದು. ಅಲ್ಲಿ ಇಷ್ಟವಿರುವ ಪದಾರ್ಥಗಳು ಬೇಕಾದಷ್ಟು ಪ್ರಮಾಣದಲ್ಲಿ ದೊರೆಯುವುವು. ನಮ್ಮ ದೇಶದ ಮಾತು ಬೇರೆ. ವಿಶಿಷ್ಟ ವರ್ತಕರಷ್ಟೇ ಅವುಗಳನ್ನು ಪೂರೈಸಬಲ್ಲರು. ಕೈಗಾರಿಕೆಯ ಕಸಬಿನವರನ್ನೂ ಅವರವರ ಬೀದಿಯಲ್ಲಿ ಕಾಣಬಹುದು. ಅಲ್ಲಿ ಬಂಗಾರದ ವಸ್ತುಒಡವೆಗಳು ಸಿದ್ಧವಾಗುತ್ತವೆ. ತರತರದ ವಜ್ರ, ಮಾಣಿಕ ಹಾಗೂ ಮುತ್ತುಗಳು ಆ ಪೇಟೆಯಲ್ಲಿ ಸಿಗುವುವು. ಬಟ್ಟೆಯ ವ್ಯಾಪಾರವನ್ನೂ ಕಾಣಬಹುದು. ಬಟ್ಟೆಯ ವರ್ತಕರು ಬಹಳ. ಯಾಕಂದರೆ, ಅದು ಎಲ್ಲರಿಗೂ ಬೇಕಾಗುವ ಸರಕು. ವಸ್ತ್ರಗಳಲ್ಲಿ ನೂಲಬಟ್ಟೆಯೆ ಬಹಳ. ಪಾಳಯದಲ್ಲಿ ಮೇವು ಹೇರಳವಾಗಿ ಇರುವುದು ಕಂಡುಬರುತ್ತದೆ. ಈ ಮೇಲಿನ ಸಾಮುಗ್ರಿಯನ್ನು ಕುರಿತು ವಿಶ್ವಾಸ ಹುಟ್ಟುವಂತೆ ನಿರ್ವ್ಯಾಜವಾಗಿ ಯಾರು ವರ್ಣಿಸ ಬಲ್ಲರು ? ರಾಯಚೂರು ಒಂದು ರುಕ್ಷ ಉಸುಬಿನ ಪ್ರದೇಶ. ಅಲ್ಲಿ ಅಷ್ಟು ಹುಲ್ಲು ಹೇಗೆ ಒದಗಿತೆಂಬುದೊಂದು ಗೂಢ ಸಮಸ್ಯೆ. ಯುದ್ಧದ ಸಾಮುಗ್ರಿಯನ್ನೂ ಡೇರೆ ಮುಂತಾದ ಭಾರಗಳನ್ನೂ ಹೊರುವ ಅಸಂಖ್ಯ ಎತ್ತು, ಕತ್ತೆ, ಹೇಸರಗತ್ತೆ ಇವುಗಳನ್ನುಳಿದು, ೩೨೪೦೦ ಕುದುರೆಗಳಿಗೂ ೫೫೧ ಆನೆಗಳಿಗೂ, ದಿನವೊಂದಕ್ಕೆ ಎಷ್ಟು ಮೇವು ಬೇಕಾಗುತ್ತದೆಂಬುದನ್ನು ಕಲ್ಪನೆಯಿಂದಲೆ ತಿಳಿಯಬಹುದು. ತಾನು ಕಂಡ ದೃಶ್ಯದ ಯಥಾರ್ಥಜ್ಞಾನವಿಲ್ಲದವನಿಗೆ, ಆ ಜನರು ಅಲ್ಲಿ ಯುದ್ಧಕ್ಕಾಗಿ ಕಲೆತಿರುವರೆಂಬ ಕಲ್ಪನೆಯೆ ಬರುವಂತಿಲ್ಲ. ತಾನೊಂದು ದೊಡ್ಡ ಪಟ್ಟಣದಲ್ಲಿರುವೆನೆಂದು ಅವನಿಗೆ ಭಾಸವಾಗುವುದರಲ್ಲಿ ಸಂದೇಹವಿಲ್ಲ. ಆ ಮೇಲೆ ವಿಚಾರಿಸತಕ್ಕ ವಿಷಯವೆಂದರೆ, ಭೇರಿ, ಕಹಳೆ ಮುಂತಾದ ಅಸಂಖ್ಯ ವಾದ್ಯಗಳು. ಕದನವು ಪ್ರಾರಂಭವಾಯಿತೆಂದು ಸೂಚಿಸುವದಕ್ಕಾಗಿ ವಾದ್ಯಗಳು ಮೊಳಗತೊಡಗಿದುವೆಂದರೆ, ಆಕಾಶವೇ ಕಳಚಿ ಬೀಳುವುದೆಂದು ಅನಿಸುವುದು. ಈ ಅದ್ಭುತ ಸಪ್ಪಳವು ಸಾಗುತ್ತಿರುವಾಗ್ಗೆ ಪಾಳಯದ ಮೇಲೆ ಹಾರಾಡುವ ಪಕ್ಷಿಯು ಹೆದರಿ ಕೆಳಗೆ ಇಳಿಯುವುದುಂಟು. ಅಂತಹ ಪಕ್ಷಿಗಳನ್ನು ಕೈಯಿಂದ ಹಿಡಿಯಬಹುದು. ಅಂತಹ ಅನೇಕ ಹದ್ದುಗಳನ್ನು ಹಿಡಿಯುವರು. ಈ ವೃತ್ತಾಂತಕ್ಕೆ ಕೊನೆಯಿಲ್ಲ; ಅದನ್ನು ವಿಸ್ತರಿಸಲಾರೆನು. ”

ದಾಸರ ಕಾಲದ ಕಲಿಗಳು ಉಪಯೋಗಿಸುವ ಆಯುಧಗಳೂ ಅನೇಕ ವಾಗಿರುವುವು. ಅವುಗಳಿಗೆ 'ಬತ್ತೀಸಾಯುಧಗಳೆ'ಂಬ ಹೆಸರು. ಆ ಮೂವತ್ತೆರಡು ಆಯುಧಗಳಲ್ಲಿ ಕೆಲವೆಂದರೆ,

**ಕೈದುಗಳು.**

ಹರಿಗೆ ಖಡ್ಗ ಕಠಾರಿ ತೋಮರ ।
ಪರಶು ಮುದ್ಗರ ಕುಂತ ಶಲ್ಲೆಹ ।
ಪರಿಘ ಚಕ್ರ ತ್ರಿಶೂಲ ಕಕ್ಕಡ ಭಿಂಡಿವಾಳಚಯ ॥
ಸುರಗಿ ಸಬಳ ಮುಸುಂಡಿ ಮೊದಲಾ ।
ದುರು ತರದ ಕೈದುಗಳ ಪಟುಭಟ ।
ರುರವಣಿಸಿ ತಾಗಿದರು ರಿಪು ಮೋಹರವನನುಗೊಳಿಸಿ ॥

ದಾಸರು ಪೆಟಲಂಬುಗಳ ಪಥಕಗಳನ್ನು ಬರೆದಿರುವರು. ಕೋವಿಯೂ ಮತ್ತೊಂದು ಅವರ ಕಾಲದ ಆಯುಧ. ಪೆಟಲುಗುಂಡು ಅಂಬುಗಳ ಕುಲಕ್ಕೆ ಸೇರಿದುದು.

ಕುಮಾರವಾಲ್ಮಿಕಿಯ ವೈರಾವಣನ ಕಾಳೆಗದಲ್ಲಿ ಕೊಟ್ಟ ಬತ್ತೀಸಾಯುಧಗಳು,—

ಪರಶು ತೋಮರ ಕುಂತವಸಿ ಮು ।
ದ್ಗರ ಮುಸುಂಡಿ ಗದಾತಿಭಲ್ಯದ ।
ಸರಳಧನು ಕಕ್ಕಡೆಯ ಭಾರಿಯ ಭಿಂಡಿವಾಳಗಳ ॥
ಪರಿಘವಂಕುಶ ಶಕ್ತಿ ಲೌಡಿಯ ।
ಹರಿಗೆ ಖಂಡೆಯ ಸಬಳ ಮೊದಲಾ ।
ದುರುತರದ ಬತ್ತೀಸ ಕೈದುಗಳೆಸೆದುವಗಲದಲಿ ॥
ಜೋಡು ಸೀಸಕ ಬಾಹು ರಕ್ಷೆಯ ।
ಮೂಡಿಗೆಯ ಮೊಚ್ಚೆಯುದ ಸವಗದ ।
ನೀಡುಗಳ ಗಬ್ಬಿಗೆಯ ಮೊಗರಂಬಗಳ ಹಲ್ಲಣದ ॥
ಬೇಡಯುದಗುಳ ರೆಂಚೆಹೊರಬೆಯ ।
ದಾಡೆ ಸೂನಗೆನಿಗಳ ಪಟ್ಟೆಯ ।
ನಾಡೆಕಟ್ಟೆಗೆ ಕೊಡಲಿಗಳನೊಪ್ಪಿದುದು ರಣರಂಗ ॥

ನಳಪುಷ್ಕರರ ಕಾಳೆಗವಾದಮೇಲೆ ರಣರಂಗದ ದೃಶ್ಯ,

ಕಾಳೆಗದ ಕಣ.

ಕಡಿದ ತಲೆಗಳ ಸಿಡಿದ ಹುಬ್ಬಿನ ।
ಕಡಿದ ತೋಳ್ಗಳ ನೆಗ್ಗಿದೆಲುಗಳ ।
ವುಡಿದ ತಲೆಗಳ ಮಿದುಳ ಖಂಡದ ಹರಿದ ಕರಳುಗಳ ॥
ಒಡೆದ ನೆತ್ತಿಗಳಿಂದ ರಗುತದ ।
ಮಡುಹರಿಯೆ ತರಹರಿಸಲಾರದೆ ।
ಪಡಿ ಮುರಿದು ಬರುತಿರಲು ಕಂಡನು ಖಾತಿಯಲಿ ನಳಲು ॥

ಶ್ರೀಕೃಷ್ಣ-ಬಾಣರ ಕಾಳೆಗದ ಕಣ.

ತಲೆಗಳ ತುಂಡು ತೋಳ್ಗಳ ತುಂಡು ನಡು ತುಂಡು । ಸಲೆಜಾನುಜಂಘೆಯು ತುಂಡು ।
ಬಲೆಯಿಂದೆ ಕಟುಕರಂಗಡಿಯಂತೆ ರಣರಂಗ। ಸಲೆ ಜುಗುಪ್ಸೆಯ ತೋರಿಸಿತು॥
ಎಲ್ಲಿ ನೋಡಿದೊಡಶ್ವಗಜರಥದೊಳಗಿರ್ದು । ಚಲ್ಲಿದಾಕರುಳು ಕಾಲ್ವಲೆಗೆ ।
ಬಲ್ಲಿದ ಚಮರಿಯ ಮಿಗ ಸಿಕ್ಕಿಕೊಂಡಂತೆ । ಝಲ್ಲಿಯ ಕುದುರೆ ಬಿದ್ದಿಹುದು॥
ಕೇಣವಿಲ್ಲದ ರೋಹಿತವಾರ್ಧಿಯೊಳು ಕಟ್ಟು। ಗಾಣಕ್ಕೆ ಪಾಯ್ವ ಮೀನೆನಲು।
ಗೋಣರೆಗಡಿದು ಪೆರ್ನೆರವಾಂತು ಮಿಡುಕುವ। ಪ್ರಾಣದ ಶವಗಳೊಪ್ಪಿದುವು॥

## ೯. ವಾದ್ಯಗಳು.

ಕನಕದಾಸರು, ರಣವಾದ್ಯಗಳಾದ ಭೇರಿ ಪಣವ ಕಹಳೆಗಳು, ಸಂಗೀತದ ಸಾಧನಗಳಾದ ತಾಳ ಮದ್ದಳೆ, ಪಾವುಜ, ಶೃತಿಮುಖ, ವೀಣೆ, ಸಾಳಂಗ, ರಾವಣಹಸ್ತ, ಕಿನ್ನರಿ ಜಂತ್ರವುಡುಕುಗಳೇ ಕೆಲವು ವಾದ್ಯಗಳನ್ನು ಬರೆದಿರುವರು. ಚೆನ್ನಬಸವ ಪುರಾಣದಲ್ಲಿ ಇದಕ್ಕೂ ಹೆಚ್ಚು ಸಂಖ್ಯೆಯಿರುವುದಾಗಿ ತೋರುತ್ತದೆ. ಚೆನ್ನಬಸವಣ್ಣನವರ ಪುಷ್ಪಕೋತ್ಸವದೊಳಗಿನ ವಾದ್ಯಗಳನ್ನು ಕುರಿತು ಚೆನ್ನಬಸವ ಪುರಾಣದಲ್ಲಿ ಹೇಳಿದುದು.

ಪಟಹ ಸಿಸ್ಪಾಳ ಗಿಡಿಬಿಡಿ ಭೇರಿ ಡವುಡೆ ಜೇ ।
ಗಟೆ ಕರಡೆ ಕಂಸಾಳ ಡೊಳ್ಳಾರಿ ಟುಮುಕು ತಂ।
ಬಟಮೆಸೆವ ವೀರಣ ಡಮಾನ ಚಂಬಕ ಬುರುಗುಗಾಳೆ ಹೆಗ್ಗಾಳೆ ಗಜರ್ವ ॥
ಪಟು ಕಹಳೆಯುಂ ಕೊಂಬುಗಹಳೆ ಪೊಂಗಹಳೆಯು ।
ತ್ಕಟಿತಾಳ ಮದ್ದಳೆಗಳೆಂಬ ಬಹುವಾದ್ಯದು ।
ಭ್ಬಟಿಯಖಿಳದೆಸೆಯೊಳಾವರಿಸಲಾ ಕುವರನ ಪುಷ್ಪಕಂಪೊರಮೊಟ್ಟುದು ॥

# ೮. ಕೊನೆಯ ಮಾತು.

ಕನಕದಾಸರ ಕಬ್ಬಗಳನ್ನು ಹೀರಿ ಹಾಲು ತೆಗೆಯಲಾಯಿತು. ಆ ಕಬ್ಬಗಳ ರಸಬಣ್ಣಗಳನ್ನು ವಿಮರ್ಶಿಸಲಾಯಿತು. ಇಲ್ಲಿ ಅವುಗಳ ಭೂಮಿಕೆಯನ್ನು ವಿವೇಚಿಸಲಿದೆ.

೧. ಮೋಹನತರಂಗಿಣಿ ನಳಚರಿತ್ರೆಗಳಲ್ಲಿ ಆ ಕಾಲದ ರಾಜಕೀಯ ಪರಿಸ್ಥಿತಿಯ ಪಡಿನೆರಳು ಬಿದ್ದಿರುವುದುಂಟು. ತರಂಗಿಣಿಯು ರಾಕ್ಷಸದಂಗಡಿಯ ಕಾಳೆಗದಕಿಂತಲು ಮುಂಚಿನದು. ಆ ಕಾವ್ಯದೊಳಗೆ ವಿಜಯನಗರ ಸಾಮ್ರಾಜ್ಯದಲ್ಲಿ ನೆಲೆಗೊಂಡ ವೈಭವ, ಜನರಲ್ಲಿರುವ ಹುರುಪು, ಎಲ್ಲಿ ನೋಡಿದಲ್ಲೆಲ್ಲ ಸುಖಸಮೃದ್ಧಿ ಇವುಗಳ ದೃಶ್ಯವು ಸ್ಪಷ್ಟವಾಗಿ ಕಾಣುವುದುಂಟು. ಪಾತ್ರಗಳಾದರೂ ಶೌರ್ಯ ಸಾಹಸಗಳಿಗೆ ತಕ್ಕಂತೆ ಫಲ, ಉತ್ತರೋತ್ತರ ಅಭಿವೃದ್ಧಿ ಪಡೆಯುತ್ತ ಆ ಕಾವ್ಯವು ಕೊನೆಗಾಣುತ್ತದೆ. ತರಂಗಿಣಿಯಲ್ಲಿ ಮೂರು ದಂಪತಿಗಳ ಶೃಂಗಾರವು ಕಂಗೊಳಿಸುವುದು. ದಂಪತಿಗಳ ಸುಖದಲ್ಲಿ ಕೊಂಚ ಎಡರುತೊಡರುಗಳುಂಟಾದರೂ ಅವು ಸುಖಪರ್ಯವಸಾಯಿಗಳು. ಮೊಮ್ಮಕ್ಕಳ ಮದುವೆಯಾದರೂ ಕೃಷ್ಣರುಕ್ಮಿಣಿಯರ ಉತ್ಸಾಹಕ್ಕೆ ಕೊರತೆಯಿಲ್ಲ. ರತಿಪ್ರದ್ಯುಮ್ನರ ಮಾತೇ ಬೇರೆ. ಅವರು ಕಡೆತನಕ ಯುವಕ ಯುವತಿಯರು! ಮುಪ್ಪಿನ ಸುದ್ದಿಯಿಲ್ಲ! ಕೃಷ್ಣಪ್ರದ್ಯುಮ್ನಅನಿರುದ್ಧರಿಗೆ ಸೋಲಿನ ಅಂಜಿಕೆಯಿಲ್ಲ; ದುರ್ದೈವದ ಅರಿವಿಲ್ಲ; ಅವರ ಕ್ಷಾತ್ರವೃತ್ತಿಗೆ ಎಣೆಯಿಲ್ಲ; ಕಾಳೆಗಕ್ಕೆ ನಿಂತ ಪ್ರತಿಭಟನಲ್ಲಿ ದಯವಿಲ್ಲ; ಶರಣಾಗತನಾದವನಿಗೆ ಭಯವಿಲ್ಲ. ಯುದ್ಧದ ಪ್ರಸಂಗಗಳಿಲ್ಲದ ಸಮಯಗಳಲ್ಲಿ ಅರಸು ಮನೆತನದವರು ಬೇಟೆ, ಉದ್ಯಾನ ವಿಹಾರ, ಜಲಕ್ರೀಡೆ ಮುಂತಾದ ವಿನೋದಗಳಲ್ಲಿ ಮನಸ್ಸುಳ್ಳವರು. ರಾಜಧಾನಿಗಳು ವ್ಯಾಪಾರ ಉದ್ಯಮಗಳಿಂದ ಕಿಕ್ಕಿರಿದುವುಗಳಾಗಿದ್ದುವು. ಜನರು ಸುಖದಿಂದ ನೆಲಿಸಿದ್ದರು. ರಾಜ್ಯದಲ್ಲಿ ಅಲ್ಲಲ್ಲಿ ತೋಟಗಳು, ಕೆರೆಗಳು, ಬಾವಿಗಳು, ಕಾಲುವೆಗಳು, ನೀರಿಲ್ಲದಲ್ಲಿ ಅರವಟ್ಟಿಗೆಗಳು ಇರುವುವು. ದೇವಸ್ಥಾನಗಳು, ಅಗ್ರಹಾರಗಳು, ಖೇಡ ಖರ್ವಡಗಳು ಸುಸಂಪನ್ನವಾಗಿದ್ದುವು. ತೋಟಗಳಲ್ಲಿ ತರತರದ ಹೂಕಾಯಿಗಳು ತೆರಪಿಲ್ಲದೆ ಬೆಳೆಯುವುವು. ಬತ್ತದ ಗದ್ದೆಗಳೂ

ಕಬ್ಬಿನ ತೋಟಗಳೂ ಫಲದ್ರೂಪವಾಗಿದ್ದುವು. ರಾಜ್ಯದಲ್ಲಿ ಕೊಲೆಸುಲಿಗೆಗಳಿಲ್ಲ. ಎಲ್ಲೆಲ್ಲಿಯೂ ಅಚ್ಚುಕಟ್ಟು ಕಂಗೊಳಿಸುವುದು.

೨. ನಳಚರಿತ್ರೆಯ ಮಾತು ಬೇರೆ. ನಳನು ಮೊದಲು ಸುಖ ಅನುಭವಿಸಿ ಕಲಿಯ ಕಾಟದಿಂದ ದುಃಖಗಳನ್ನು ಅನುಭವಿಸುವನು. ಅವನಂತೆಯೆ ಅವನ ಹೆಂಡತಿಯಾದ ದಮಯಂತಿಯೂ ದುಃಖಕ್ಕೆ ಈಡಾಗುವಳು. ನಳನು ತನ್ನ ರಾಜ್ಯವನ್ನು ಕಳೆದುಕೊಂಡು ಕೆಲ ಕಾಲದ ನಂತರ ಯುದ್ಧ ಮಾಡಿ ತನ್ನ ರಾಜ್ಯವನ್ನು ಗೆಲ್ಲುತ್ತಾನೆ. ನಲೋಪಾಖ್ಯಾನದಲ್ಲಿ ನಳಪುಷ್ಕರರ ಕಾಳೆಗದ ಸಂದರ್ಭವಿಲ್ಲ. ಆದರೆ, ದಾಸರು ನಳಚರಿತ್ರೆಯಲ್ಲಿ ಅವರಿಗೆ ಕಾಳೆಗವನ್ನು ಹಚ್ಚಿ ಅದನ್ನು ವಿಶದವಾಗಿ ಬಣ್ಣಿಸಿರುವರು! ವಿಜಯನಗರದ ಅರಸರು ರಾಕ್ಷಸದಂಗಡಿಯಲ್ಲಿ ಸೋತು, ಕೆಲಕಾಲ ಸಂಕಟಕ್ಕೊಳಗಾಗಿ, ಮುಂದೆ ಮತ್ತೆ ರಾಜ್ಯವನ್ನು ಸಂಪಾದಿಸಿದ ತಮ್ಮ ಕಾಲದ ರಾಜಕೀಯ ಪರಿಸ್ಥಿತಿಯನ್ನು ದಾಸರು ನಳಚರಿತ್ರೆಯಲ್ಲಿ ಬರೆದಿರಬೇಕಾಗಿ ತೋರುತ್ತದೆ. ಈ ಐತಿಹ್ಯವನ್ನು ವರ್ಣಿಸುವುದಕ್ಕಾಗಿ ನಳಚರಿತ್ರೆಯೆ ಯೋಗ್ಯವೆಂದು ದಾಸರು ಕಂಡುಹಿಡಿದಿರಬಹುದು. ನಳಚರಿತ್ರೆಯು ಬಹುತರವಾಗಿ ವೆಂಕಟಪತಿದೇವರಾಯನ ಕಾಲದಲ್ಲಿ ರಚಿಸಲಾಗಿರಬೇಕೆಂದು ತೋರುತ್ತದೆ. ವೆಂಕಟಪತಿಯು ಪಟ್ಟವನ್ನೇರಿದ ಕೂಡಲೆ ಉದಯಗಿರಿಯ ಮೇಲೆ ದೊಡ್ಡ ದಾಳಿಯನ್ನಿಕ್ಕಿದನು. ಆ ಮೇಲೆ ಹಂಪೆ-ವಿಜಯನಗರದವರು ಆಳಿದ ಬಹುತರ ಎಲ್ಲ ಪ್ರದೇಶವನ್ನು ವೆಂಕಟಪತಿಯು ಗೆದ್ದುಕೊಂಡನು. ಮುಂದೆ ರಾಕ್ಷಸದಂಗಡಿಯ ಯುದ್ಧವಾಗುತ್ತದೆಂದು, ದಿವ್ಯದೃಷ್ಟಿಯಿಂದ ತಿಳಿದು, ಕನಕದಾಸರು, ಮೊದಲು ತರಂಗಿಣಿಯನ್ನು ರಚಿಸಿ, ಆ ಮೇಲೆ ನಳಚರಿತ್ರೆಯನ್ನು ಬರೆದರೆಂದು ಮಾತ್ರ ತಿಳಿಯಕೂಡದು. ತರಂಗಿಣಿಯಲ್ಲಿ ಸ್ವಾಭಾವಿಕವಾಗಿ ಆ ಕಾಲದ ಪಡಿನೆರಳುಬಿದ್ದುದು ನಿಜ. ಅದೇ ಸ್ಥಿತಿಯು ನಳ ಚರಿತ್ರೆಯಲ್ಲಿದೆ. ನಳಚರಿತ್ರೆಯ ಕಾಲವನ್ನು ದಾಸರು ತಮ್ಮ ಕತೆಯ ಆಯ್ಕೆಯಿಂದಲೂ ಅದರೊಳಗಣ ಯುದ್ಧದ ಸಂದರ್ಭದಿಂದಲೂ ಪರ್ಯಾಯವಾಗಿ ತಿಳಿಸಿರಬೇಕೆಂದು ಅನಿಸುತ್ತದೆ.

ಮೋಹನತರಂಗಿಣಿ, ನಳಚರಿತ್ರೆ, ಭಕ್ತಿಸಾರಗಳು ಕನಕದಾಸರ ಆಧ್ಯಾತ್ಮಿಕ ವಿಕಾಸದ ಮೂರು ಅವಸ್ಥಾನಗಳು. ದಾಸರು ಭಕ್ತಿವೈರಾಗ್ಯ

ಗಳಲ್ಲಿ ದಿನವೊಂದಕ್ಕೆ ಪ್ರಗತಿಪರರಾಗತೊಡಗಿದರೆಂದು ಆ ಕಾವ್ಯಗಳು ಗಟ್ಟಿಯಾಗಿ ಹೇಳುವುವು.

೧. ತರಂಗಿಣಿಯನ್ನು ಬರೆಯುವಾಗ್ಗೆಯೆ, ಕನಕದಾಸರು, 'ಭಾಗವತರೂ', 'ದಾಸೋತ್ತಮರೂ' ಆಗಿದ್ದುದು ನಿಜ. ಆದರೂ ದಾಸತ್ವವು ಪೂರ್ಣವಾಗಿ ಬಿಂಬಿಸಬೇಕಾದರೆ, ದಾಸರಲ್ಲಿ ಕೆಲಕಾಲ ಗತಿಸಿಹೋದಂತೆ ತೋರುತ್ತದೆ. ತರಂಗಿಣಿಯ ಕಾಲದಲ್ಲಿ ಕನಕದಾಸರು ಹೆಸರಿಗೆ ದಾಸರಾಗಿದ್ದರೆಂದು ತಿಳಿಯಕೂಡದು. ಸುತ್ತಲಿರುವ ಸೃಷ್ಟಿಯನ್ನು ಮರೆತು, ದೇಹದ ಅಭಿಮಾನವನ್ನು ತೊರೆದು, ಪೂರ್ಣವೈರಾಗ್ಯ ಪಡೆಯಬೇಕಾದರೆ, ದಾಸರು ಪ್ರಯತ್ನ ಪಟ್ಟಿರಬೇಕು. ಅದರ ಪಡಿನೆರಳು ಈ ಮೂರು ಕಾವ್ಯಗಳಲ್ಲಿ ಕಂಡುಬರುವುದು. ತರಂಗಿಣಿಯೊಳಗೆ ತಮ್ಮನ್ನಾವರಿಸಿರುವ ಪರಿಸ್ಥಿತಿಯಲ್ಲಿ ದಾಸರು ತುಂಬ ಪ್ರೀತಿಯುಳ್ಳವರು. ತಾವು ವರ್ಣಿಸುವ ವಸ್ತುಗಳ ವಿಷಯದಲ್ಲಿ ಅಭಿರುಚಿಯುಳ್ಳವರು. ಕ್ರೀಡೆ, ಕದನ, ಶೃಂಗಾರ ಮುಂತಾದ ಎಲ್ಲ ಸಂದರ್ಭಗಳಲ್ಲಿ ಸಹಾನುಭೂತಿಯುಳ್ಳವರು. ದುರ್ದೈವದ ಅರಿವಿಲ್ಲ. ದುಃಖದ ಸುಳಿವಿಲ್ಲ ಆದರೂ ದಾಸರ ಭಕ್ತಿ, ಸರಲತೆಗಳು ಸ್ಪಷ್ಟವಾಗಿ ಕಂಗೊಳಿಸುವುವು.

೨. ನಳಚರಿತ್ರೆಯು ಮೋಹನತರಂಗಿಣಿಯ ಪುನರಾವೃತ್ತಿಯೆಂದು ಹೇಳಲಾಯಿತು. ತರಂಗಿಣಿಯೊಳಗಣ ಅನುಭವಗಳನ್ನೇ ದಾಸರು ನಳಚರಿತ್ರೆಯಲ್ಲಿ ಕಾವ್ಯಕಲೆಯಿಂದ ಅಡಕ ಮಾಡಿರುವರು. ನಳಚರಿತ್ರೆಯೊಳಗಿನ ವರ್ಣನೆಗಳು ಸ್ಮರಣೆಯಿಂದ ಬಂದವುಗಳು ತರಂಗಿಣಿ ನಳಚರಿತ್ರೆಗಳ ರಚನೆಯಲ್ಲಿ ಬಹುಕಾಲ ಗತಿಸಿಹೋದಂತೆ ತೋರುತ್ತದೆ. ಸುತ್ತಲಿರುವ ಸೃಷ್ಟಿಗೂ ದಾಸರಿಗೂ ಕೊಂಚು ಸಂಬಂಧ ತಪ್ಪಿದ ಹಾಗೆ ಕಾಣುತ್ತದೆ. ತರಂಗಿಣಿಯಲ್ಲಿ ಮೂರು ದಂಪತಿಗಳ ಶೃಂಗಾರವು ತುಂಬಿಕೊಂಡಿದೆ. ನಳಚರಿತ್ರೆಯಲ್ಲಿ ದಮಯಂತಿಯ ದಾಂಪತ್ಯಶೃಂಗಾರವು ಕಂಡುಬರುವುದಿಲ್ಲ. ಅವಳ ಕೌಮಾರದ ಶೃಂಗಾರವಷ್ಟೇ ದೃಗ್ಗೋಚರವಾಗುವುದು. ಹೆಣ್ಣುಮಕ್ಕಳನ್ನು ಪರಿಪರಿಯಿಂದ ವರ್ಣಿಸುವ ದಾಸರು ವೈರಾಗ್ಯತಾಳಿ, ಆ ಕಾಲದ ತತ್ವಜ್ಞಾನದಂತೆ, ಹೆಂಗಸರನ್ನು ಮನಸಾರೆ ಹಳಿದಿರುವರು.

ಆ ಯುವತಿಯರು ಕಾರ್ಯಗತಿಗಳ ।
ಬೀಯುವಮಾಳ್ಪರು ಕುಟಿಲವಿದ್ಯದಿ ।
ಮಾಯಗಳ ಹಣ್ಣುವರು ಸತ್ಯದಿ ಹುಸಿಯನಾಡುವರು ॥
ಕಾಯವಳಿದರು ಅಂತರಂಗದ ।
ಬಾಯ ಬಿಡರನ್ಯಾಯವಾಡುವ ।
ರಾಯತಾಕ್ಷಿಯರಂಗವಿದು ಸುರರಾಜ ಕೇಳೆಂದ ॥

.ಕಪಟವನು ಬಿಡರಾತ್ಮಬುದ್ಧಿಯೊ ।
ಳುಪಮೆಗಾಣದೆ ನುಡಿದು ಹೊಳೆವರು ।
ಚಪಲ ಚಿತ್ತದಿ ಮನವ ವಂಚಿಸಿ ಮಾತನಾಡುವರು ॥
ಗುಪಿತವಳವಡರಾಪ್ತರೊಡವೆಯ ।
ನಪಹರಿಸಿ ಸಾಹಸದಿ ಮರೆವರು ।
ನಿಪುಣೆಯರಗಿದು ಸಹಜಗುಣವಮರೇಂದ್ರ ಕೇಳೆಂದ ॥

ಸಾವಿಗೆಣಿಸರು ಮನದಿ ಸತ್ಯವ ।
ಭಾವಿಸರು ಹುಸಿಯೊಲುವೆಂದೋರುವ ।
ರಾವ ಪರಿಯಲಿ ಹೃದಯಗೊಡರನೃತಗಳನಾಡುವರು ॥
ವಾವಿವರ್ತನವಿಲ್ಲ ಸತ್ಯಕೆ ।
ಪಾವಕನ ಮುಟ್ಟುವರು ಸತಿಯರ ।
ನಾವ ಪರಿಯಲಿ ನಂಬಬಹುದ್ಯೆಯೆನುತ ಹೊರವಂಟ ॥

ಮತ್ತೊಂದುವಿಷಯವೆಂದರೆ, ನಳಚರಿತ್ರೆಯಲ್ಲಿ ದಾಸರ ದೈವವಾದವು ತಲೆದೋರಿದುದು. ಸಂಕಟಕ್ಕೀಡಾದ ನಳದಮಯಂತಿಯರು ತಮ್ಮ ದೈವವನ್ನು ಹೆಜ್ಜೆಜ್ಜೆಗೆ ಹಳಿಯುವರು. ನಳಚರಿತ್ರೆಯಲ್ಲಿ ದೇವರ ಸಹಾಯದ ಮೇಲೆ ದಾಸರ ವಿಶ್ವಾಸವು ಬೆಳೆದುದು ಕಂಡುಬರುವುದು. ದುರ್ಧರ ಪ್ರಸಂಗಗಳಲ್ಲಿ ಭಕ್ತಿಯಿಂದ ದೇವರನ್ನು ಕೊಂಡಾಡಿದರೆ ಸಂಕಟಗಳು ನಾಶವಾಗುತ್ತವೆಂಬ ಮನವರಿಕೆಯು ನಳಚರಿತೆಯಲ್ಲಿ ಸ್ಪಷ್ಟವಾಗಿ ತೋರುವುದು.

೩. ಭಕ್ತಿಸಾರವು ದಾಸರ ಆಧ್ಯಾತ್ಮಿಕ ವಿಕಾಸದ ಕೊನೆಯ ಮೆಟ್ಟಲು. ಆ ಗ್ರಂಥದಲ್ಲಿ ಸುತ್ತಲಿರುವ ಸೃಷ್ಟಿಯ ಸಂಪರ್ಕವೇ ಕಂಡುಬರುವುದಿಲ್ಲ. ದೇವರನ್ನು ಅನನ್ಯಭಾವದಿಂದ ಭಜಿಸಿದರೆ ಮುಕ್ತಿಯಾಗುವುದೆಂದು ದಾಸರ

ಮನವರಿಕೆ. ಪಾಪಾಚರಣೆಯನ್ನು ಕೈಕೊಂಡಿದ್ದರೂ ದೇವರ ನಿಜ ಭಕ್ತನಾದರೆ, ಅವನಿಗೆ ಮುಕ್ತಿದೊರೆಯುವುದೆಂದು ದಾಸರು ಮುಕ್ತಕಂಠವಾಗಿ ಹೇಳತೊಡಗಿದರು. ಭಕ್ತಿಸಾರದಲ್ಲಿ, ದಾಸರ ದೇಹಾಭಿಮಾನವೂ ಅಳಿದು ಹೋಯಿತು. ಜಾತಿಗೊತ್ತುಗಳು, ಮಡಿಮೈಲಿಗೆ, ಎಂಜಲುಮುಸುರಿ ಮುಂತಾದ ಬಾಹ್ಯವಿಷಯಗಳಂತೂ ಹೇಳಹೆಸರಿಲ್ಲದೆ ಮಾಯವಾದುವು. ದೇವರ ಅಗಾಧ ಮಹಿಮೆಯೊಂದೇ ದಾಸರ ಕಣ್ಣಮುಂದೆ ಕಟ್ಟಿತು. ಭಕ್ತಿಸಾರದ ಕನಕದಾಸರು ಜೀವನ್ಮುಕ್ತರು !

ಆದಿಪಂಪನು ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ ತನ್ನ ವಿಕ್ರಮಾರ್ಜುನವಿಜಯ ಕಾವ್ಯವನ್ನು ಬರೆದಂತೆ, ರನ್ನನು ಇರಿವಬೆಡಂಗ ಸತ್ಯಾಶ್ರಯ ಚಾಳುಕ್ಯನನ್ನು ಭೀಮನಿಗೆ ಹೋಲಿಸಿ ಗದಾಯುದ್ಧವನ್ನು ರಚಿಸಿದಂತೆ, ಕನಕದಾಸರು ಕೃಷ್ಣದೇವರಾಯನನ್ನು ಶ್ರೀಕೃಷ್ಣನಿಗೆ ಹೋಲಿಸಿ ತಮ್ಮ ಕಾವ್ಯವಾದ ಮೋಹನತರಂಗಿಣಿಯನ್ನು ನಿರ್ಮಿಸಿದರೆಂದು ಅನಿಸುವುದು. ಇಬ್ಬರೂ ಯದುಕುಲದವರು. ಶ್ರೀಕೃಷ್ಣ ಕೃಷ್ಣದೇವರಾಯರ ಸಾಹಸಗಳು ಸರಿಪಡುವ ಸಂದರ್ಭಗಳಲ್ಲಿ, ದಾಸರು, ಕೃಷ್ಣನಿಗೆ ಬದಲಾಗಿ 'ಕೃಷ್ಣರಾಯ,' 'ದೇಶಾಧಿಪ ಶ್ರೀಕೃಷ್ಣರಾಯ' ಎಂದು ಸಂಬೋಧಿಸಿದುದುಂಟು. (೧) ಕೃಷ್ಣನ ದ್ವಾರಕೆಯನ್ನು ವರ್ಣಿಸುವಾಗ್ಗೆ ತರಂಗಿಣಿಯಲ್ಲಿ, 'ದೇಶಾಧಿಪ ಕೃಷ್ಣರಾಯ,' ಎಂದು ಸಂಬೋಧಿಸಲಾಗಿದೆ. ಕೃಷ್ಣನು ಬಾಣಾಸುರನ ಶೋಣಿತಪುರದ ಮೇಲೆ ದಾಳಿ ಮಾಡಲು ದಂಡಯಾತ್ರೆಯನ್ನು ಕೈಕೊಳ್ಳುವ ಮುಂದೆ, 'ಗರುಡನ ಮೇಲೆ ಹತ್ತಿದ ಶ್ರೀಕೃಷ್ಣರಾಯ' ಎಂದು ಪ್ರಯೋಗವಾಗಿದೆ. (೨) ಕೃಷ್ಣನ ಈ ದಂಡಯಾತ್ರೆಯೆಂದರೆ, ಕೃಷ್ಣದೇವರಾಯನು ಅಲ್ಲಿ ಆದಿಲ ಶಹನ ವಶದಲ್ಲಿರುವ ರಾಯಚೂರ ಕೋಟೆಯನ್ನು ಮುತ್ತಿದ ವಿಷಯವೆಂದು ಹೇಳಬಹುದು. ವಿಜಯನಗರದವರು, ಅಷ್ಟೇಕೆ? ದಕ್ಷಿಣದೇಶದಲ್ಲಿಯ ಕಾಳೆಗಗಳೊಳಗೆ, ರಾಯಚೂರ ಯುದ್ಧದಲ್ಲಿ ಪೆಟಲಂಬುಗಳನ್ನು ಮೊತ್ತ ಮೊದಲು ಉಪಯೋಗಿಸಿದರೆಂದು ನ್ಯೂಸಿಝನು ಬರೆಯುವನು. ಕನಕದಾಸರೂ ಈ ವೈಶಿಷ್ಟ್ಯವನ್ನು ನಿರ್ದೇಶಿಸಿದುದುಂಟು. (೩) ಶೋಣಿತಪುರದ ಮೇಲೆ ಸಾಗಿಹೋಗುವ ಸಮಯದಲ್ಲಿ, ಕೃಷ್ಣನು "ಧರಿಸಿದ ಶಂಖಚಕ್ರವನಾಕ್ಷಣದಲ್ಲಿ ಸ್ಮರಿಸಿದ ವಿಹಗೇಶ್ವರನ" ಎಂದು ದಾಸರು ಅಂದಿರುವರು.

ಕೃಷ್ಣದೇವರಾಯನು ರಾಮಾನುಜನಾದುದರಿಂದ ಶ್ರೀವೈಷ್ಣವ ಚಿನ್ಹೆಗಳಾದ ಶಂಖಚಕ್ರಗಳನ್ನು ಮೈಮೇಲೆ ಧರಿಸಿದನೆಂದು ಅನ್ನಲಾಯಿತು. ಮೇಲಾಗಿ, ಕೃಷ್ಣರಾಯನು ವಿಜಯನಗರದ ರಣಘೋಷಣೆಯಾದ, "ಗರುಡ, ಗರುಡ," ಎಂಬ ಗರ್ಜನೆ ಮಾಡಿದನೆಂದು ಹೇಳಲಾಗಿದೆ. (೪) ಮೊದಲಿನ ಪದ್ಯದಲ್ಲಿ ಕಾಗಿನೆಲೆಯ ರಂಗನಿಗೆ "ಸುರಸಾರ್ವಭೌಮ," ಎಂದು ಬರೆದಿದೆ. ಮತ್ತು ಆದೆ ತರಂಗಿಣಿ ಕಾವ್ಯದ ಕೊನೆಯಲ್ಲಿ ಶ್ರೀಕೃಷ್ಣನು ಸುಖದಿಂದ ಬಾಳಿದ ನೆಂದೆನ್ನುವ ಸಂದರ್ಭದಲ್ಲಿ, "ಕೃಷ್ಣ ಸುಖಸಾಮ್ರಾಜ್ಯವನಾಳಿದ ಮುದದೆ" ಎಂದು ಇರುವುದರಿಂದ, ಕೃಷ್ಣರಾಯನು ವಿಜಯನಗರ ಸಾಮ್ರಾಜ್ಯವನ್ನು ಆಳಿದನೆಂದು ಸೂಚಿಸಲಾಗಿದೆ. ಇಂತಹ ಅನೇಕ ಉದಾಹರಣೆಗಳನ್ನು ವಿಸ್ತರಿಸ ಬಹುದು.

ಈ ಶಂಕೆಗಳ ನಿರಸನ ಮಾಡಲು ಕೆಳಗಣ ಉತ್ತರವನ್ನೀಯಬಹುದು.

೧. ಕನಕದಾಸರ ಕಾಲದಲ್ಲಿ ದೇವರ ಹೆಸರಿನ ಕೊನೆಯಲ್ಲಿ 'ರಾಯ' ಎಂಬ ಪದವನ್ನು ಜೋಡಿಸುವ ವಾಡಿಕೆಯಿದ್ದಿತು. ವ್ಯಾಸರಾಯರ ಪದಗಳಿಗೆ ಶ್ರೀಕೃಷ್ಣನ ಅಂಕಿತವದೆ. ವ್ಯಾಸತೀರ್ಥರ ಅನೇಕ ಪದಗಳಲ್ಲಿ ಶ್ರೀಕೃಷ್ಣನಿಗೆ 'ಕೃಷ್ಣರಾಯ' ಎಂದು ಅಂದುದು ಕಂಡುಬರುತ್ತದೆ. ವಾದಿರಾಜರ ಕೀರ್ತನೆ ಗಳಿಗೆ ಹಯವದನನ ಅಂಕಿತವಿದೆ ರಾಜರು ಎಷ್ಟೋ ಪದಗಳ ಮುದ್ರಿಕೆ ಯಲ್ಲಿ 'ಹಯವದನರಾಯ' ಎಂದು ನುಡಿದುದುಂಟು. ಅಷ್ಟೇಕೆ, ಕನಕ ದಾಸರೇ ಅನೇಕ ಸಂದರ್ಭಗಳಲ್ಲಿ ಕೇಶವದೇವರಿಗೆ, 'ಕೇಶವರಾಯ' ಎಂದು ಸಂಬೋಧಿಸಿದುದುಂಟು. ಇದಲ್ಲದೆ, ದೇವರಿಗೆ 'ದೇಶಾಧಿಪ,' ಇಲ್ಲವೆ, 'ದೇಶಾಧಿಪತಿ' ಎಂಬ ಪೂರ್ವಪದವನ್ನು ಹಚ್ಚುವ ಪರಿಪಾಠವೂ ಆ ಕಾಲ ದಲ್ಲಿ ಇದ್ದಿತೆಂದು ಹೇಳಬಹುದು. ಕನಕದಾಸರ ಒಂದು ಪದದಲ್ಲಿರುವುದು,

ದೇಶಾಧಿಪತಿನರಹರಿಯೆ ನಿನ್ನಯ ಪಾದ।
ದಾಸರ ದಾಸನೆಂದೆನಿಸಬೇಕೆನ್ನ ॥ ಪ ॥

೨. ರಾಯಚೂರ ಕಾಳೆಗದಲ್ಲಿ ಪೆಟಲಂಬುಗಳ ಉಪಯೋಗವು ಮೊದಲು ಆಯಿತೆಂದು ನ್ಯೂನಿಝನು ಅನ್ನುವುದು ನಿಜ. ಆದರೆ, ತರಂಗಿ ಣಿಯು ೧೫೫೩–೫೪ ರಲ್ಲಿ ರಚಿತವಾಯಿತು. ಅಷ್ಟೊತ್ತಿಗೆ ದಕ್ಷಿಣದೇಶದ

ಪಡೆಗಳಲ್ಲಿ ಪೆಟಲಂಬಿನ ಪಥಕಗಳು ರೂಢವಾಗಿರಬಹುದು. ಆದುದರಿಂದ ಶೋಣಿತಪುರದ ಕಾಳಗವೇ ರಾಯಚೂರ ಯುದ್ಧವೆಂದು ಹೇಳಲಾಗದು.

೩. ಕೃಷ್ಣನು ಶಂಖಚಕ್ರಗಳನ್ನು ಧರಿಸಿದನೆಂದು ಹೇಳಿದರೂ, ಅವು ಶ್ರೀಕೃಷ್ಣನ ಹೆಸರಾದ ಆಯುಧಗಳಾದುದರಿಂದ ಅವು ಕೃಷ್ಣದೇವರಾಯನ ವೈಶಿಷ್ಟ್ಯವನ್ನು ಬೆಳಕಿಗೆ ತರಲಾರವು. ರಾಕ್ಷಸದಂಗಡಿಯ ಯುದ್ಧದಲ್ಲಿ ಹಂಗುದೊರೆದು ಕಾದುವ ಕಾಲದಲ್ಲಿ ಅಳಿಯ ರಾಮರಾಯನು, "Gorida, Gorida," ಅಂದರೆ, "ಗರುಡ," ಎಂದು ಗರ್ಜನೆ ಮಾಡಿದುದರಿಂದ ವಿಜಯನಗರದವರ ರಣಗರ್ಜನೆಯು, "ಗರುಡ, ಗರುಡ," ಎಂದಿದ್ದಿತೆಂದು ಫಾದರ ಹೇರಾಸರು ಅನ್ನುವರು. ಆ ಕಾಲದಲ್ಲಿ ವಿಜಯನಗರದವರ ರಣಗರ್ಜನೆಯು, ಗರುಡ, ಎಂದಿದ್ದಿತೊ, ಗೋವಿಂದ, ಎಂದಿದ್ದಿತೊ, ಅದನ್ನು ಸಂಶೋಧಕರು ವಿಚಾರಿಸಬೇಕು. ಇಲ್ಲವೆ, ಗರುಡ ಮತ್ತು ಗೋವಿಂದ ಇವೆರಡು ಪ್ರತ್ಯೇಕವಾಗಿ ರಣಗರ್ಜನೆ ಮತ್ತು ಜಯಘೋಷಗಳಿದ್ದುವೆಂಬುದನ್ನೂ ಪರಿಕಿಸಬೇಕು. ವಿಷ್ಣುಪುರಾಣದಲ್ಲಿ ಶೋಣಿತಪುರದ ದಾಳಿಯ ಸಂದರ್ಭದಲ್ಲಿರುವ ಪದ್ಯ,

ತತೋ ಗರುಡಮಾರುಹ್ಯ ಸ್ಮೃತಮಾತ್ರಾಗತಂ ಹರಿಃ।
ಬಲಪ್ರದ್ಯುಮ್ನಸಹಿತೋ ಬಾಣಸ್ಯ ಪ್ರಯಯೌ ಪುರೀಂ ॥

ವಿಷ್ಣುಪುರಾಣ ಮೋಹನತರಂಗಿಣಿಗಳಲ್ಲಿ ಅದೇ ಸಂದರ್ಭದಲ್ಲಿ, ಸ್ಮೃ, ಧಾತುವಿನ ರೂಪವು ಉಪಯೋಗವಾದುದರಿಂದ, ಕೃಷ್ಣದೇವರಾಯನು ವಿಜಯನಗರದವರ ರಣಘೋಷವಾದ, 'ಗರುಡ, ಗರುಡ,' ಎಂಬ ಗರ್ಜನೆ ಮಾಡಿದನೆಂದು ನಿಶ್ಚಯವಾಗಿ ಹೇಳಲಿಕ್ಕಾಗದು. ಯಾಕಂದರೆ, ದಾಸರು ವಿಷ್ಣುಪುರಾಣದೊಳಗಿನ ವಿಷಯವನ್ನೇ ಅನುವಾದಿಸಿರಬಹುದು.

೪. ಪರಮಾತ್ಮನು, ಸಾಮ್ರಾಜ್ಯ, ಸ್ವಾರಾಜ್ಯ, ವೈರಾಜ್ಯ, ರಾಜ್ಯ ಮೊದಲಾದವುಗಳನ್ನಾಳುವನೆಂಬುದು ಬುನಾದಿಯ ವಿಚಾರ.

ಈ ಬಗೆಯಾಗಿ ಊಹಾಪೋಹಗಳ ಉಯ್ಯಾಲೆಯಲ್ಲಿ ಮನಸ್ಸು ಅಲೆದಾಡುತ್ತಲಿದೆ. ಮನದ ಒಲುವನ್ನು ಬಿರಿದು ನುಡಿಯುವ ಗೋಜಿಗೆ ಹೋಗದೆ ಗುಂಜುಗಟ್ಟಿದ ಈ ತೊಡಕು ಬಿಡಿಸುವ ಶ್ರೇಯವು ಓದುಗರಿಗಾಗಿ ಮೀಸಲಾಗಿದೆ.

---



ಕನಕನ ಕಿಂಡಿ ( ಉಡುಪಿ. )

( ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ. )

# ಕನಕದಾಸರ ಪದಗಳು.

ಪುಟ್ಟಿದಂದಿನಾರಭ್ಯ ಸುಖವೆಂಬುವುದನರಿಯೆ।
ಕಷ್ಟಪಟ್ಟೆನು ಕೇಳೊ ಕೃಷ್ಣ।
ತೊಟ್ಟಿಲ ಶಿಶು ತಾಯ್ಗೆ ಬಾಯ್ಬಿಟ್ಟ ತೆರನಂತೆ ಕಂ।
ಗೆಟ್ಟು ಶೋಕಿಪೆನೊ ಕೃಷ್ಣ।
ಮುಟ್ಟಲಮ್ಮರು ಎನ್ನ ಬಂಧುಗಳು ಕಂಡರೆ।
ಅಟ್ಟಿ ಬಿಡುವುತಲಿಹರೊ ಕೃಷ್ಣ।
ದಟ್ಟದಾರಿದ್ರ್ಯವನು ಪರಿಹರಿಸದಿದ್ದರೆ।
ಮುಟ್ಟುವುದು ದೂರು ನಿನಗೆ ಕೃಷ್ಣ॥

ಕೃತಯುಗದೊಳು ವೇದ ತ್ರೇತೆಯೊಳಧ್ವರ। ವತಿದಾನಶೀಲ ದ್ವಾಪರದೆ॥
ಸ್ತುತಿಪುಣ್ಯಕಲಿಯುಗದೊಳಗೆ ಶ್ರೀಹರಿನಾಮ। ಮತಿವಂತೆ ಕೇಳು ಪೇಳ್ದಪೆನು॥
ನೋಡಲು ದೃಕ್ಪುಣ್ಯಪಿರಿದು ಸಂತಸದಿ ಕೊಂ। ಡಾಡಲು ಜಿಹ್ವೆ ಪವಿತ್ರ॥
ಹಾಡ ಕೇಳಲು ಕರ್ಣದೊಳಿರ್ದ ಪಾತಕ। ವೋಡುವುದಿಳೆಯ ಜೀವರಿಗೆ॥

ಕನಕದಾಸ.

# ಕನಕದಾಸರ ಪದಗಳು.

ಕನಕದಾಸರ ಕೀರ್ತನೆಗಳ ವಿಷಯದಲ್ಲಿ ಈವರೆಗೆ ಏನೂ ಬರೆದುದಿಲ್ಲ. ಅವುಗಳೊಳಗೆ ಹುರುಳಿಲ್ಲವಂತಲ್ಲ. ಆ ಪದಗಳು ನೂರಾರು ವರ್ಷಗಳಿಂದ ಅನೇಕ ಜನರ ಬಾಯಿಯಲ್ಲಿ ಹಾಯ್ದು ಬಂದಿವೆ. ಕೆಲವು ಮಾರ್ಪಾಟು ಹೊಂದಿರಬಹುದು. ಕೆಲವು ಪ್ರಕ್ಷಿಪ್ತವಾಗಿರಬಹುದು. ಅಂತಹ ಕೀರ್ತನೆಗಳ ಆಡಿಗಲ್ಲಿನ ಮೇಲೆ ನಿಂತು ದಾಸರ ಐತಿಹ್ಯ ಮತ ಮುಂತಾದವುಗಳನ್ನು ಗೊತ್ತುಪಡಿಸುವುದು ಸುಸಂಬದ್ಧವಲ್ಲ. ಆದುದರಿಂದ, ದಾಸರ ಪದಗಳಿಗಾಗಿ ಬೇರೊಂದು ಭಾಗವನ್ನೇ ಮೀಸಲಾಗಿರಿಸಿದೆ. ದಾಸರ ವಿಷಯದಲ್ಲಿ ಗೊತ್ತಾದ ಸಂಗತಿಗಳೊಡನೆ ಅವರ ಪದಗಳೊಳಗಣ ಸಂದರ್ಭಗಳನ್ನು ಒರೆಗಲ್ಲಿನ ಮೇಲೆ ತಿಕ್ಕಿ ತೂಗಿ ಯೋಗ್ಯ ಬೆಲೆಗಟ್ಟಿದರೆ ಅವುಗಳನ್ನು ತಕ್ಕ ರೀತಿಯಲ್ಲಿ ಉಪಯೋಗಿಸಿದಂತಾಗುವುದರಲ್ಲಿ ಸಂದೇಹವಿಲ್ಲ.

ದಾಸರ ಪದಗಳೆಂದು ಪ್ರಕಟವಾದ ಸುಮಾರು ೧೭೫ ಕೀರ್ತನೆಗಳನ್ನು ಅವಲೋಕಿಸಲಾಯಿತು. ಕನಕದಾಸರು ವರಕವಿಗಳೆಂದು ಕೂಗಿ ಹೇಳಲಿಕ್ಕೆ ಅವರ ಕೀರ್ತನೆಗಳಷ್ಟೇ ಸಾಕು. ಅವುಗಳಲ್ಲಿ ಅಡಕವಾದ ತಿಳಿಗನ್ನಡು ಭಾವ ರಸಗಳು ಮೇಲ್ತರಗತಿಯವು. ದಾಸರ ಪದಗಳೆಂದರೆ ನೀತಿಯ ನೆಲೆವೀಡು. ದಂಭಾಚಾರಗಳನ್ನು ಖಂಡಿಸುವುದು, ಕೆಳಗಿನ ತರಗತಿಯ ಜನರಲ್ಲಿ ಬೇರೂರಿದ ಕೀಳು ಕಲ್ಪನೆಗಳನ್ನು ಕಿತ್ತೊಗೆಯುವುದು, ಹೀನ ಸಂಪ್ರದಾಯಗಳನ್ನು ಹೀಯಾಳಿಸುವುದು, ಬಣಗು ದೈವಗಳ ಗೊಡವೆಗೆ ಹೋಗದೆ, ನಾರಾಯಣನನ್ನು ಒಬ್ಬನೇ ಪರದೈವನೆಂದು ಬೋಧಿಸುವುದು, ಇವೇ ಮೊದಲಾದ ಸಮಾಜ ಸೇವೆಯನ್ನು ದಾಸರು ತಮ್ಮ ಕೀರ್ತನೆಗಳಿಂದ ಎಸಗಿದರೆಂದು ಹೇಳಬಹುದು.

ಕನಕದಾಸರು ತಮ್ಮ ಕಾವ್ಯದಲ್ಲಿ ಹೇಳಿದ ಆತ್ಮಕತೆಯನ್ನು, ಹರಕು ಮುರಕಾಗಿ ಹೇಳಿತು. ಅವರ ಸಾದ್ಯಂತ ಚರಿತ್ರೆಯು ಎಲ್ಲಿಯೂ ದೊರೆಯು ವುದಿಲ್ಲ. ಜನರು ದಾಸರ ವಿಷಯವಾಗಿ ಅನೇಕ ಕತೆಗಳನ್ನು ಹೇಳುವರು. ಬಹಳ ಜನರು ವಿವರಿಸುವ ದಾಸರ ಚರಿತ್ರೆಯನ್ನು ಬರೆಯಲಿದೆ.

"ಕನಕದಾಸರು ಬಂಕಾಪುರದ ಸಮೀಪದಲ್ಲಿರುವ ಬಾಡ ಗ್ರಾಮದವರು. ದಾಸರ ತಂದೆಯ ಹೆಸರು ಬೀರೆಗೌಡ, ತಾಯಿಯ ಹೆಸರು ಬಚ್ಚಮ್ಮ. ಅವರು ಹಂಡೆ ಕುರುಬರು. ಅವರಿಬ್ಬರಿಗೆ ದಾಸರು ಒಬ್ಬರೇ ಮಗು. ಕನಕದಾಸರ ಪೂರ್ವದ ಹೆಸರು ತಿಮ್ಮ. ತಿಮ್ಮನ ತಾಯಿ ತಂದೆಗಳು ಚಿಕ್ಕಂದಿನಲ್ಲಿಯೆ ತೀರಿದರು. ತಿಮ್ಮನು ಊರವರಿಂದ ಬೆಳೆದನು. ವಯಸ್ಸಿಗೆ ಬಂದ ಕೂಡಲೆ, ತಿಮ್ಮನಿಗೆ ಹೂಳಿಟ್ಟ ನಿಧಿ ಕಾಣತೊಡಗಿತು. ಅದರಿಂದ, ತಿಮ್ಮನಿಗೆ ಕನಕ ನೆಂಬ ಹೆಸರು ಬಿದ್ದಿತು. ಬರಬರುತ್ತ ಕನಕನ ಕೀರ್ತಿಯು ಬೆಳೆಯು ತೊಡಗಿತು. ವಿಜಯನಗರ ರಾಜ್ಯಕ್ಕೆ ಒಳಪಟ್ಟ ಬಂಕಾಪುರ ಪ್ರಾಂತದಲ್ಲಿ ಕನಕನು ಸೈನ್ಯಾಧಿಪತಿಯಾದನು. ಒಂದು ಕಾಳೆಗದಲ್ಲಿ ಕನಕನು ಗಾಯ ಪಟ್ಟು ಎಚ್ಚರದಪ್ಪಿ ಹೊರಳಾಡುವಾಗ, ದೇವರು ಅವನಿಗೆ ತನ್ನ ದಾಸನಾದರೆ ನೆಟ್ಟಗಾಗುವುದೆಂದು ಹೇಳಿದನು. ಕನಕನು ಒಪ್ಪಿದನು. ಮುಂದೆ ವೈರಾಗ್ಯ ತಾಳಿ ಕನಕನಾಯಕನು ಕನಕದಾಸನಾದನು. ಕನಕನು ವ್ಯಾಸ ಸಮುದ್ರ ವನ್ನು ಕಟ್ಟಿಸುವ ಮುಂದೆ, ಶ್ರೀವ್ಯಾಸರಾಯರನ್ನು ಕಂಡು ಅವರಿಂದ ಮಂತ್ರೋಪದೇಶವನ್ನು ಕೋರಿದನು. ವ್ಯಾಸರಾಯರು, "ಕುರುಬರಿಗೆ ಎಂತಹಮಂತ್ರ? ಕೋಣ ಮಂತ್ರ!" ಎಂದು ನುಡಿದರಂತೆ. ಕನಕನು 'ಕೋಣ' ಮಂತ್ರವನ್ನು ಜಪಿಸಿ ಯಮಧರ್ಮನ ಕೋಣವನ್ನು ಸಾಕ್ಷಾತ್ಕರಿಸಿ ಅದರ ಸಾಮರ್ಥ್ಯದಿಂದ ಒಂದು ಬಂಡೆಗಲ್ಲನ್ನು ಸರಿಸಿದನಂತೆ! ವ್ಯಾಸಸಮುದ್ರದಲ್ಲಿ 'ಕೋಣನ ತೂಬು' ಎಂಬುವುದು ಈಗ್ಗೆಯೂ ಇದೆ. ಕನಕದಾಸರು ಯಮಧರ್ಮನ ಅವತಾರವೆಂದು ಭಾವಿಕರು ನಂಬು ವುದುಂಟು. ಕಾಗಿನೆಲ್ಲಿಯಲ್ಲಿ ಆದಿಕೇಶವನ ಮೂರ್ತಿಯನ್ನು ಸ್ಥಾಪಿಸಿ ಅಲ್ಲಿ ಒಂದು ಗುಡಿಯನ್ನು ಕಟ್ಟಿಸಿದನು. ಆದಿಕೇಶವನ ಅಂಕಿತದ ಪದಗಳನ್ನು ರಚಿಸಿದನು.

ಕನಕದಾಸರು ಮೊದಲಿನಿಂದ ತಿರುಪತಿಯ ಯಾತ್ರೆಯನ್ನು ಕೈಕೊಂಡವರು. ಶ್ರೀವೈಷ್ಣವ ಗುರುಗಳಿಂದ ನಾಮಮುದ್ರೆಗಳನ್ನು ಪಡೆದರು. ಸೋದೆಯ ವಾದಿರಾಜರ ಶಿಷ್ಯರಾಗಿದ್ದರು. ಕೊನೆಗೆ ಕನಕದಾಸರು ಕಾಗಿನೆಲ್ಲಿಯ ಶ್ರೀನರಸಿಂಹನ ಉದರದಲ್ಲಿ ಸೇರಿದರು !"

೧. ಕನಕದಾಸ ಕೀರ್ತನೆಗಳಲ್ಲಿ ಕೆಲವನ್ನಷ್ಟೇ ಇಲ್ಲಿ ಉದಾಹರಿಸಲಿದೆ. ಸಂಪ್ರದಾಯಾನುಸಾರವಾಗಿ ದಾಸರ ದೇವತಾಸ್ತೋತ್ರಗಳಲ್ಲೊಂದಾದ ಗಣಪತಿಯ ಪದವನ್ನು ಮೊದಲು ಇರಿಸಿದೆ. ಅದರೊಳಗಿನ ದಾಸರ ಕನ್ನಡದ ಸೊಬಗನ್ನು ಸವಿಯಬೇಕು.

ರಾಗ:—ಮೋಹನ ಅಟತಾಳ.

ನಮ್ಮಮ್ಮ ಶಾರದೆ ಉಮಾಮಹೇಶ್ವರಿ।
ನಿಮ್ಮೊಳಗಿಹನ್ಯಾರಮ್ಮ। ॥ ಪ ॥
ಕಮ್ಮಗೋಲನ ವೈರಿಸುತನಾದ ಸೊಂಡಿಲ।
ಹೆಮ್ಮಯ್ಯ ಗಣನಾಥನೆ ॥ ಅ ॥

ಮೋರೆ ಕಪ್ಪಿನ ಭಾವ ಮೊರದಗಲ ಕಿವಿ।
ಕೋರೆದಾಡಿಯುವನ್ಯಾರಮ್ಮ।
ಮೂರು ಕಣ್ಣಿನ ಸುತ ಮುರಿದಿಟ್ಟ ಚಂದ್ರನ।
ಧೀರ ತಾ ಗಣನಾಥನೆ ಅಮ್ಮಯ್ಯ॥

ಉಟ್ಟದಟ್ಟಿಯು ಬಿಗಿದುಟ್ಟ ಚಲ್ಲಣದ।
ದಿಟ್ಟತಾನಿವನ್ಯಾರಮ್ಮ।
ಪಟ್ಟದರಾಣಿ ಪಾರ್ವತಿಯ ಕುಮಾರ।
ಹೊಟ್ಟೆಯ ಗಣನಾಥನೆ ಅಮ್ಮಯ್ಯ ॥

ರಾಸಿ ವಿದ್ಯೆಯ ಬಲ್ಲ ರಮಣಿಹಂಬಲನೊಲ್ಲ।
ಭಾಷಿಗನಿವನ್ಯಾರಮ್ಮ।
ಲೇಸಾಗಿ ಸುಜನರ ಸಲಹುವ ನೆಲೆಯಾದಿ।
ಕೇಶವನ ದಾಸ ಕಾಣೇ ಅಮ್ಮಯ್ಯ ॥

೨. ದಾಸರು ವಿಷ್ಣುವಿನ ದಶಾವತಾರಗಳನ್ನು ಸೊಗಸಾಗಿ ಕನ್ನಡದಲ್ಲಿ ಹಾಡಿದ ಒಂದು ಪದವನ್ನು ಕೆಳಗೆ ಉದ್ಧರಿಸಲಿದೆ. ಒಂದು ಶ್ಲೋಕ

ದಲ್ಲಿ ದೇವರು ನೆರವೇರಿಸಿದ ಮಹತ್ಕಾರ್ಯಗಳನ್ನು ಹೇಳಿ, ಅದರ ಕೆಳಗೆ ಆ ದೇವರ ಕೊರತೆಯನ್ನು ಕೊಟ್ಟಿರುವರು. ನಿಜವಾಗಿ ಅದೂ ಅವನ ಗುಣವೇ. ಒಂದರಲ್ಲಿ ಸ್ತುತಿ, ಮತ್ತೊಂದರಲ್ಲಿ ವ್ಯಾಜಸ್ತುತಿ. ಈ ಕೀರ್ತನೆಯಲ್ಲಿ ದಾಸರು ತಮ್ಮ ಕೌಶಲ್ಯವನ್ನು ಚೆನ್ನಾಗಿ ವಿಶದಪಡಿಸಿದ್ದಾರೆ.

ರಾಗಃ—ಮೋಹನ ಅಟತಾಳ.

ನಿನ್ನ ನಾನೇನೆಂದೆನೊ ರಂಗಯ್ಯ ರಂಗ ।
ನಿನ್ನ ನಾನೇನೆಂದೆನೊ ॥ ಪ ॥

ನಿನ್ನ ನಾನೇನೆಂದೆ ನಿಗಮಗೋಚರ ಸ್ವಾಮಿ ।
ಪನ್ನಂಗಶಯನ ಪಾಲ್ಗಡಲೊಡೆಯನೆ ರಂಗ ॥ ಅ ॥

ಧೀರ ಸೋಮಕ ವೇದಚೋರ ಖಳನ ಸೀಳಿ ।
ವಾರಿಧಿಗಿಳಿದು ಪರ್ವತವನೆತ್ತಿ ।
ಧಾರುಣಿಯನು ಕದ್ದ ದನುಜದಲ್ಲಣನಾದ ।
ನಾರಸಿಂಹ ನಮೋ ನಮೋ ಎಂದೆನಲ್ಲದೆ ॥

ನೀರಪೊಕ್ಕವನೆಂದೆನೆ-ಬೆನ್ನಿನ ಮೇಲೆ ।
ಭಾರ ಪೊತ್ತವನೆಂದೆನೆ-ಮಣ್ಣನು ಅಗೆದು ।
ಬೇರ ಮೆದ್ದವನೆಂದನೆ-ರಕ್ಕಸನೊಳು ।
ಹೋರಿ ಹೊಯ್ದನೆಂದು ಹೊಗಳಿದೆನಲ್ಲದೆ ॥

ಧರೆಯ ದಾನವ ಬೇಡಿ ಧರಣಿ ಈರಡಿ ಮಾಡಿ ।
ಪರಶುವ ಪಿಡಿದು ಕ್ಷತ್ರಿಯರ ಕಾಡಿ ।
ಚರಣದಿ ಪಾಷಾಣ ಪೆಣ್ಣೆ ಮಾಡಿದ ಪುಣ್ಯ ।
ಚರಿತ ಯಾದವಪತಿ ಶರಣೆಂದೆನಲ್ಲದೆ ॥

ತಿರಿಕ ಹಾರುವನೆಂದೆನೆ-ಹೆತ್ತತಾಯ ।
ಕೊರಳ ಕೊಯ್ದವನೆಂದೆನೆ-ವನವಾಸದಿ ।
ಧುರಕೆ ನೆರೆದವನೆಂದೆನೆ-ಪೂತಣಿಯನು ।
ಸರಕು ಮಾಡದೆ ಕೊಂದ ಹರಿಯೆಂದೆನಲ್ಲದೆ ॥

ಚಿತ್ತಜಕೋಟಿಲಾವಣ್ಯತೇಜದಿ ಬಂದು |
ಉತ್ತಮ ಸ್ತ್ರೀಯರ ವ್ರತವಳಿದು |
ಮತ್ತೆ ಕಲ್ಕಿಯಾಗಿ ಮಧುಪರ ಮಡುಹಿದ |
ಹತ್ತವತಾರದ ಹರಿಯೆಂದೆನಲ್ಲದೆ ||

ಬತ್ತಲಿದ್ದವನೆಂದೆನೆ—ತೇಜಿಯನೇರಿ |
ಒತ್ತಿ ಆಳ್ದವನೆಂದೆನೆ- ಬಾರಿಬಾರಿಗು |
ಮತ್ತೆ ಪುಟ್ಟಿದನೆಂದೆನೆ- ಆದಿಕೇಶವ |
ಭಕ್ತವತ್ಸಲನೆಂದು ಪೊಗಳಿದೆನಲ್ಲದೆ ||

೩. ಕೆಳಗಿನ ತರಗತಿಯ ಕುಲಗಳು ಬಣಗು ದೈವಗಳನ್ನು ಆರಾಧಿಸು ವುದು, ಅವುಗಳನ್ನು ಕುರಿತು ಕೀರ್ತನೆ ಗೈಯುವುದು, ಈಗಿನಕಿಂತಲೂ ದಾಸರ ಕಾಲದಲ್ಲಿ ವಿಶೇಷವಾಗಿದ್ದಿತು. ನಾರಾಯಣನೇ ಪರದೈವತ; ಅವನ ಮಹಾತ್ಮೆಯು ಜನರಿಗೆ ತಿಳಿಯಬೇಕು; ಅವನನ್ನೇ ಭಜಿಸಬೇಕು ಎಂದು ದಾಸರು ಹೆಣಗಿದರು. ಅದಕ್ಕೆ ಆ ಜನರು ಮನಗೊಳ್ಳುವಂತಹ ಪದಗಳನ್ನು ರಚಿಸಿದರು. ಕೆಳಗಿನ ಪದ್ಯವೂ ಹತ್ತವತಾರದ ಮಹಾತ್ಮ್ಯವನ್ನೇ ಹೇಳುತ್ತದೆ. ಆದರೆ, ಅದರಲ್ಲಿ ಅಡಕವಾದ ನುಡಿಮುಟ್ಟುಗಳು ಪ್ರಾದೇಶಿಕವಾಗಿರುವುದು ಕಂಡುಬರುತ್ತದೆ.

ರಾಗಃ—ದೇಶಿ ಛಾಪುತಾಳ.

ದೇವಿ ನಮ್ಮ ದ್ಯಾವರು ಬಂದರು |
ಬನ್ನೀರೆ ನೋಡ ಬನ್ನೀರೆ |
ಬನ್ನೀರೆ ನೋಡ ಬನ್ನೀರೆ |
ನೋಡ ಬನ್ನೀರೆ ನೋಡ ಬನ್ನೀರೆ | || ಪಲ್ಲ ||

ಕೆಂಗಣ್ಣ ಮೀನನಾಗಿ ನಮರಂಗ |
ಗುಂಗಾಡಿ ಸೋಮನ ಕೊಂದಾನ್ಮ್ಯ |
ಗುಂಗಾಡಿ ಸೋಮನ ಕೊಂದು |
ವೇದವ ಬಂಗಾರದೊಡಲಗಿತ್ತಾನ್ಮ್ಯ ||

ದೊಡ್ಡ ಮಡುವಿನೊಳಗೆ ನಮರಂಗ ।
ಗುಡ್ಡವ ಹೊತುಕೊಂಡು ನಿಂತಾನ್ಮ್ಯ ।
ಗುಡ್ಡವ ಹೊತುಕೊಂಡು ನಿಂತು ಸುರರನ್ನು ।
ದೊಡ್ಡವರನ್ನು ಮಾಡಾನ್ಮ್ಯ ॥

ಚಿನ್ನ ಕಾಡಿನ ಹಂದಿ-ಯಾಗಿ ನಮರಂಗ ।
ಚಿನ್ನದ ಕಣ್ಣಿನ ಕೊಂದಾನ್ಮ್ಯ ।
ಚಿನ್ನನ ಕಣ್ಣಿನಕೊಂದು ಭೂಮಿಯ ।
ವನ್ನಜಸಂಭವಗಿತ್ತಾನ್ಮ್ಯ ॥

ಸಿಟ್ಟಿನ ಸಿಂಹ-ನಾಗಿ ನಮರಂಗ ।
ಹೊಟ್ಟೆಯ ಕರುಳ ಬಗೆದಾನ್ಮ್ಯ ।
ಹೊಟ್ಟೆಯ ಕರುಳ ಹಾರವ ಮಾಡಿ ।
ಪುಟ್ಟಗೆ ವರವ ಕೊಟ್ಟಾನ್ಮ್ಯ ॥

ಹುಡುಗ ಹಾರುವ-ನಾಗಿ ನಮರಂಗ ।
ಬೆಡಗಿಲಿ ಮುಗಿಲಿಗೆ ಬೆಳೆದಾನ್ಮ್ಯ ।
ಬೆಡಗಿಲಿ ಮುಗಿಲಿಗೆ ಬೆಳೆದು ಬಲಿಯನ್ನು ।
ಅಡಿಯಿಂದ ಪಾತಾಳಕ್ಕೊತ್ತ್ಯಾನ್ಮ್ಯ ॥

ತಾಯ ಮಾತನು ಕೇಳಿ ಸಾಸಿರ ತೋಳಿನ ।
ಆವಿನ ಕಳ್ಳನ ಕೊಂದಾನ್ಮ್ಯ ।
ಆವಿನ ಕಳ್ಳನಕೊಂದು ಭೂಮಿಯ ।
ಅವನಿಸುರರಿಗಿತ್ತಾನ್ಮ್ಯ ।

ಪಿಂಗಳ ಕಣ್ಣಿನ ಕೊಂಗಗಳಕೂಡಿ ।
ಭಂಗನೆ ಲಂಕೆಗೆ ಪೋದಾನ್ಮ್ಯ ।
ಭಂಗನೆ ಲಂಕೆಗೆ ಪೋಗಿ ನಮರಂಗ ।
ಹೆಂಗಸು ಕಳ್ಳನ ಕೊಂದಾನ್ಮ್ಯ ॥

ಕರಿಯ ಹೊಳೆಯಲ್ಲಿ ತುರುಗಳ ಕಾಯುತ್ತ |
ಉರಗನ ಮಡುವ ಧುಮುಕ್ಯಾನ್ಮ್ಯ |
ಉರಗನ ಹೆಡೆಮೇಲೆ ಹಾರಾರಿ ಕುಣಿವಾಗ |
ನಾರೇರಿಂಗೊರವ ಕೊಟ್ಟಾನ್ಮ್ಯ ||

ಬಿಂಕದ ಗೋವಳನಾಗಿ ನಮರಂಗ |
ಡೊಂಕಿನ ಮುದುಕಿಯು ಕೂಡ್ಯಾನ್ಮ್ಯ |
ಡೊಂಕಿನ ಮುದುಕಿಯು ಕೂಡಿ |
ಮಾವನ ಬಿಂಕವನೆಲ್ಲ ಮುರಿದಾನ್ಮ್ಯ ||

ಭಂಡನಂದದಿ ಕುಂಡೆಯು ಬಿಟ್ಟುಕೊಂಡು |
ಕಂಡಕಂಡಲ್ಲಿಗೆ ತಿರುಗ್ಯಾನ್ಮ್ಯ |
ಕಂಡಕಂಡಲಿಗೆ ತಿರುಗಿ ತ್ರಿಪುರರ |
ಹೆಂಡರನೆಲ್ಲ ಕೆಡಿಸ್ಯಾನ್ಮ್ಯ ||

ಚೆಲುವ ಹೆಂಡತಿ ಕುದುರೆಯು ಮಾಡಿ |
ಒಳ್ಳೆಯ ರಾವುತನಾದಾನ್ಮ್ಯ |
ಒಳ್ಳೆಯ ರಾವುತನಾಗಿ ನಮರಂಗ |
ಡೊಳ್ಳ ಹೊಟ್ಟೆಯು ಮ್ಯಾಲೆ ಒದ್ದಾನ್ಮ್ಯ ||

ಡೋಳಿನ ಮೇಲ್ಕಯ್ಯ ಭರಮಪ್ಪ ಹಾಕ್ಯಾನು |
ತಾಳವ ಶಿವನಪ್ಪ ತಟ್ಟ್ಯಾನ್ಮ್ಯ |
ಒಳ್ಳೆಯ ಪದಗಳ ಹನುಮಪ್ಪ ಹಾಡ್ಯಾನು |
ಚೆಲುವ ಕನಕಪ್ಪ ಕುಣಿದಾನ್ಮ್ಯ ||

೪. ದಾಸರಲ್ಲಿ ರಹಸ್ಯೋಪದೇಶದ ಪದಗಳೂ ಉಂಟು. ಕೆಳಗಿನದು ಅಂತಹದೊಂದು.

ರಾಗ—ಕಾಂಬೋಧಿ ಝಂಪೆತಾಳ.

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ || ಪ ||
ನೀ ದೇಹದೊಳಗೊ ನಿನ್ನೊಳು ದೇಹವೊ || ಅ ||

ಬಯಲು ಆಲಯದೊಳಗೊ ಆಲಯವು ಬಯಲೊಳಗೊ ।
ಬಯಲು ಆಲಯವೆರಡು ನಯನದೊಳಗೊ ।
ನಯನ ಬುದ್ಧಿಯೊಳಗೆ ಬುದ್ಧಿ ನಯನದೊಳಗೊ ।
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥

ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ ।
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ ।
ಜಿಹ್ವೆ ಮನಸಿನೊಳಗೊ ಮನಸು ಜಿಹ್ವೆಯೊಳಗೊ ।
ಜಿಹ್ವೆ ಮನಸುಗಳೆರಡು ನಿನ್ನೊಳಗೊ ಹರಿಯೆ ॥

ಕುಸುಮದೊಳು ಗಂಧವೊ ಗಂಧದೊಳು ಕುಸುಮವೊ ।
ಕುಸುಮ ಗಂಧಗಳೆರಡು ಪ್ರಾಣದೊಳಗೊ ।
ಅಸಮಭವ ಕಾಗಿನೆಲೆಯಾದಿಕೇಶವರಾಯ ।
ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೊ ॥

೫. ಕನಕದಾಸರು ದೇವರ ದಾಸಾನುದಾಸರು. ತಮ್ಮಲ್ಲಿ ಯಾವ ಅಹಂಕಾರವೂ ಇಲ್ಲವೆಂದು ಅವರು ಸಾರಿ ಹೇಳಿರುವರು.

ರಾಗ—ಕಾಂಬೋಧಿ ಝಂಪೆತಾಳ.

ದಾಸದಾಸರ ಮನೆಯ ದಾಸಿಯರ ಮಗನಾನು ।
ಸಾಸಿರ ನಾಮದೊಡೆಯ ರಂಗಯ್ಯನ ಮನೆಯ ॥ ಪ ॥

ಶಂಕುದಾಸರ ಮನೆಯ ಮಂಕುದಾಸನು ನಾನು ।
ಮಂಕುದಾಸನು ನಾನು ಮರುಳು ದಾಸ ।
ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ ।
ಬಿಂಕದಿ ಬಾಗಿಲ ಕಾಯ್ವ ಬಡ ದಾಸನಾನಯ್ಯ ॥

ಕಾಳಿದಾಸರ ಮನೆಯ ಕೀಳುದಾಸ ನಾನಯ್ಯ ।
ಆಳು ದಾಸನು ನಾನು ಮೂಳ ದಾಸ ।
ಫಾಲಾಕ್ಷಸಖ ನಿನ್ನ ಭಜಿಪ ಭಕ್ತರ ಮನೆಯ ।
ಆಳಿನಾಳಿನ ದಾಸ ಅಡಿದಾಸ ನಾನಯ್ಯ ॥

ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ ।
ಕುಲವಿಲ್ಲದ ದಾಸ ಕುರುಬದಾಸ ।
ಛಲದಿ ನಿನ್ನ ಭಜಿಸುವರ ಮನೆಯ ಮಾದಿಗದಾಸ ।
ಸಲೆಮುಕ್ತಿ ಪಾಲಿಸೆನ್ನೊಡೆಯ ಕೇಶವನೆ ॥

ಇಲ್ಲಿ ದಾಸರು ತಮಗೆ 'ಕುರುಬ ದಾಸ' ಎಂದು ಸಂಬೋಧಿಸಿಕೊಂಡಿರುವುದರಿಂದ, ಅವರು, ಕುರುಬರ ಕುಲಕ್ಕೆ ಸೇರಿದವರೆಂದು ತಿಳಿಯಕೂಡದು. ಕುರುಬ ಶಬ್ದವನ್ನು ನಾಗರೀಕತೆಯನ್ನರಿಯದ ಹುಂಬ ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ. ಆದರೆ, ದಾಸರು, ತಾವು ಕಾಳಿದಾಸರ ಮನೆಯ ಕೀಳು ದಾಸರೆಂದು ಅಂದಿರುವುದರಿಂದ, ಕಾಳಿದಾಸನ ಕಬ್ಬಿಗತನವನ್ನರಿತು, ಆವನ ಸೇವೆಯನ್ನು ತಾವು ಮಾಡುತ್ತಿರುವರು, ಎಂದು ಸೂಚಿಸಿರುವರು. ಇದರ ಮೇಲಿಂದ ದಾಸರ ಮೇಲೆ ಕಾಳಿದಾಸನ ಪರಿಣಾಮವು ಎಷ್ಟಾಗಿದ್ದಿತೆಂಬುದನ್ನು ವಿಚಾರಿಸ ತಕ್ಕದ್ದು.

೬. ರಾಗ—ಸಾರಂಗ ಛಾಪುತಾಳ.

ಬಂಟನಾಗಿ ಬಾಗಿಲ ಕಾಯುವೆ ಹರಿಯ ವೈ ।
ಕುಂಠ ದಾಸೋತ್ತಮರ ದಾಸರ ಮನೆಯ ॥ ಪ ॥

ಹೊರಸುತ್ತು ಪ್ರಾಕಾರ ಸುತ್ತಿ ನಾ ಬರುವೆ ।
ಬರುವ ಹೋಗುವರ ವಿಚಾರಿಸಿ ಬಿಡುವೆ ।
ಕರದಾ ಕಂಬಿಯಾ ಪೊತ್ತು ಅಲ್ಲಿ ಬೊಬ್ಬಿಡುವೆ ಶ್ರೀ ।
ಹರಿಯ ಓಲಗದ ಸಮ್ಮುಖದಲ್ಲಿರುವೆ ॥

ವೇಳೆವೇಳೆಗೆ ಊಳಿಗವ ಮಾಡುವೆ ।
ಆಲವಂಟಗೆ ಚಾಮರವ ಬೀಸುವೆ ।
ಕಾಳಿಂದಿ ಅಡಪವ ಹೊತ್ತು ನಿಂದಿರುವೆ ।
ಸಾಲು ಮುತ್ತಿನ ಸತ್ತಿಗೆಯ ಪಿಡಿವೆ ॥

ಎಂಜಲ ಹರಿವಾಣವ ಬೆಳಗುವೆ ।
ಕಂಜನಾಭನ ಪಾದ ಕಮಲವ ತೊಳೆವೆ ।

ರಂಜುಳ್ಳ ಕುಸುಮದ ಮಾಲೆ ತಂದಿಡುವೆ |
ಸಂಜೆಗೆ ಪಂಜಿನ ದಾಸನಾಗಿರುವೆ ||

ತೊತ್ತು ತೊಂಡನಾಗಿ ಬಾಗಿಲು ಕಾಯುವೆ |
ಚಿತ್ರದ ಚಾವಡಿ ರಜವಾ ಬಳಿವೆ |
ಮುತ್ತಿನ ರಂಗವಲ್ಲಿಯನಿಟ್ಟು ಬರೆವೆ |
ರತ್ನಕಂಬಳಿಯ ಹೊತ್ತು ಹಾಸುವೆ ||

ಮೊಸಲ ಊಳಿಗವನು ಮಾಡುವೆ |
ಶೇಷ ಬ್ರಹ್ಮಾದ್ಯಯರಿಗೆ ತೋರಿಸುವೆ |
ಶೇಷಗಿರಿ ಆದಿಕೇಶವರಾಯರ |
ದಾಸರ ದಾಸರ ದಾಸರ ಮನೆಯ ||

ಈ ಹಾಡಿನಲ್ಲಿ, ದಾಸರು, ವೈಕುಂಠದಾಸರ ಮನೆ ಕಾಯುವೆವೆಂದು ಅಂದಿರುವರು. ವೈಕುಂಠದಾಸರು ಬೇಲೂರಿನವರು. ಕನಕದಾಸರು ಅವರ ಶಿಷ್ಯರಾಗಿ ಬೇಲೂರಿನಲ್ಲಿ ಎಷ್ಟೋ ಕಾಲ ಇದ್ದರೆಂದು ಆಖ್ಯಾಯಿಕೆಯಿದೆ. ದಾಸರ ಕಾಲವಾದ ಮೇಲೆ ವೈಕುಂಠದಾಸರ ಉದಯುವಾಯಿತೆಂದು ಕೆಲವರು ಅನ್ನುವರು. ಆದುದರಿಂದ, ಈ ಪದವು, ಕನಕದಾಸರದೇ ನಿಜವಾಗಿದ್ದರೆ, ವೈಕುಂಠದಾಸರೂ ಕನಕದಾಸರೂ ಸಮಕಾಲೀನರೆಂದು ಅನ್ನಬಹುದು.

ಕನಕದಾಸರು ಇಲ್ಲಿ ತಮ್ಮ ದಿನಚರಿಯನ್ನು ವರ್ಣಿಸಿರುವರು. ದಾಸರಾದವರು ಜರುಗಿಸತಕ್ಕ ದೇವರ ಸೇವೆಯನ್ನು, ಕನಕದಾಸರು, ಇಲ್ಲಿ ಹೇಳಿರುವರು.

೭. ಕನಕದಾಸರಿಗಾಗಿಯೆ ಉಡುಪಿಯ ಕೃಷ್ಣನ ದೇವಾಲಯದಲ್ಲಿ 'ಕನಕನ ಕಿಂಡಿಯು' ಏರ್ಪಟ್ಟಿತು. ವಾದಿರಾಜರು ಕೃಷ್ಣನ ಗುಡಿಯಲ್ಲಿ ಮಾಡಿದ ಏರ್ಪಾಟಿನ ವಿಷಯದಲ್ಲಿ ಒಬ್ಬ ಸಂಶೋಧಕರು ಅನ್ನುವುದೇನಂದರೆ,

"ಶ್ರೀಕೃಷ್ಣಮಠವು ಮೊದಲು ಮೂಡಲಾಗಿ ಮಧ್ವಸರೋವರಕ್ಕೆ ಮುಖವಾಗಿ ಇದ್ದಿತು. ದೇಗುಲದ ಹೆಬ್ಬಾಗಿಲಿಗೂ ಗರ್ಭಗುಡಿಯ ಬಾಗಿಲಿಗೂ ನಡುವೆ ತೀರ ಸ್ವಲ್ಪ ಸ್ಥಳವಿದ್ದುದರಿಂದ ಭಕ್ತಜನರಿಗೆ ತೊಂದರೆಯಾಗಿತ್ತು. ಆದರೆ ಹಿಂಬದಿಯಲ್ಲಿ ಸ್ಥಳವಿದ್ದಿತು. ಗರ್ಭಗುಡಿಯ ಹಿಂದಿನ

ಗೋಡೆಯಲ್ಲಿ ಒಂದು ಕಿಟಕಿಯಾಯಿತು. ಅದರಾಚೆಯಲ್ಲಿ ಮುಖಮಂಟಪ ವಾಯಿತು. ಅದರ ಮುಂದೆ ಚಂದ್ರಶಾಲೆಯು ನಿರ್ಮಾಣವಾಯಿತು. ಅದರ ಗೋಡೆಯಲ್ಲಿ ಒಂದು ಕಿಟಕಿಯುಂಟಾಯಿತು. ಈ ಕಿಟಕಿಯೊಳಗಿಂದ ಶ್ರೀಕೃಷ್ಣನ ದೀವಿಗೆಗಳ ಬೆಳಕಷ್ಟೇ ಕಾಣುತ್ತಲಿದ್ದಿತು. ದೇವಾಲಯದೊಳಗಿನ ಪಾಠಪ್ರವಚನಕೀರ್ತನೆಗಳು ಕೃಷ್ಣನ ಹಿಂಬದಿಯಲ್ಲಿಯೇ ಸಾಗುತ್ತಲಿದ್ದುವು. ಒಂದು ದಿನ ಶ್ರೀಕೃಷ್ಣನು ಮುಖಮಂಟಪದ ಕಡೆಗೆ ಮೋರೆ ತಿರುವಿ ನಿಂತನು! ಗುಡಿಯ ಹೊರಬದಿಯಲ್ಲಿ ನಿಲ್ಲುವ ಕನಕದಾಸರಿಗೆ ಅಲ್ಲಿಯ ಕಿಟಕಿಯೊಳಗಿಂದ ದೇವರ ದರ್ಶನವಾಗತೊಡಗಿತು! ಕನಕದಾಸರು ಆ ಕಿಟಕಿಯ ಹತ್ತಿರದಲ್ಲಿಯೇ ನಿಂತು ಶ್ರೀಕೃಷ್ಣನ ಸಂಕೀರ್ತನೆಗೈಯಲಾರಂಭಿಸಿದರು! ಆದಕ್ಕಾಗಿ ಆ ಕಿಟಕಿಗೆ 'ಕನಕನ ಕಿಂಡಿ" ಎಂಬ ಹೆಸರು ಬಿದ್ದಿತು. ಅದರೆದುರು ನಡುಬೀದಿಯಲ್ಲಿ ಅವನಿದ್ದ ಸ್ಥಲವೂ 'ಕನಕನ ಗುಡಿ' ಎಂದು ತಲೆಯೆತ್ತಿತು!"

ರಾಗ—ಮುಖಾರಿ. ಝಂಪೆ ತಾಳ.

ಪೂರ್ವಜನ್ಮದಲಿ ನಾ ಮಾಡಿದ ಕರ್ಮದಿಂ ।
ಉರ್ವಿಯೊಳು ಜನಿಸಿದೆನೊ ಕೃಷ್ಣ ॥ ಪಲ್ಲ ॥
ಕಾರುಣ್ಯನಿಧಿ ಎನ್ನ ಕಾಯಬೇಕಯ್ಯ ಹರಿ ।
ವಾರಿಜನಾಭನೆ ಮುದ್ದು ಕೃಷ್ಣ ॥ ಅ ॥

ಪುಟ್ಟದಂದಿನಾರಭ್ಯ ಸುಖವೆಂಬುವುದನರಿಯೆ ।
ಕಷ್ಟಪಟ್ಟೆನು ಕೇಳೊ ಕೃಷ್ಣ ।
ತೊಟ್ಟಿಲ ಶಿಶು ತಾಯ್ಗೆ ಬಾಯ್ಬಿಟ್ಟ ತೆರನಂತೆ ಕಂ ।
ಗೆಟ್ಟು ಶೋಕಿಪೆನೊ ಕೃಷ್ಣ ।

ಮುಟ್ಟಲಮ್ಮರು ಎನ್ನ ಬಂಧುಗಳು ಕಂಡರೆ ।
ಅಟ್ಟೆ ಬಿಡುವುತಲಿಹರೊ ಕೃಷ್ಣ ।
ದಟ್ಟದಾರಿದ್ರ್ಯವನು ಪರಿಹರಿಸದಿದ್ದರೆ ।
ಮುಟ್ಟುವುದು ದೂರು ನಿನಗೆ ಕೃಷ್ಣ ॥

ಕಾಸಿನ ಆಸೆಯಲಿ ಬಯಸಿ ಬಹುದಿನದಿಂದ |
ಘಾಸಿಪಟ್ಟೆನು ನಾನು ಕೃಷ್ಣ |
ಈ ಶರೀರವನಾಂತು ಕಷ್ಟಪಟ್ಟೆನು ಬಿಡದೆ |
ನೀ ಸಲಹಬೇಕಯ್ಯ ಕೃಷ್ಣ |

ಹೇಸಿಕೆಯಾಗಿರ್ಪ ಸಂಸಾರವನು ಮಾಯೆ |
ಪಾಶಗಳಿಂ ಬಿಗಿವರೆ ಕೃಷ್ಣ |
ಘಾಸಿಯನು ಮಾಡದೆ ದೋಷವನು ಪರಿಹರಿಸೊ |
ಸಾಸಿರನಾಮದ ಮುದ್ದು ಕೃಷ್ಣ ||

ಲೋಕದೊಳು ಎನ್ನಂಥ ಪಾಪಿಗಳು ಉಂಟೆಂದು |
ನೀ ಕೇಳ ಬಲ್ಲೆಯಾ ಕೃಷ್ಣ |
ಸಾಕೇಳು ಎನಗೊಂದು ಗತಿಯ ತೋರಿಸಿ ಸದ್ವಿ ||
ವೇಕಿಯನು ಮಾಡಯ್ಯ ಕೃಷ್ಣ ||

ರಾಕೇಂದುಮುಖಿ ದ್ರೌಪದಿಯ ಮಾನವನು ಕಾಯ್ದು |
ಆಕೆಗಕ್ಷಯವಿತ್ತೆ ಕೃಷ್ಣಪಿ |
ನಾಕಿಯ ಸಖ ಉಡುಪಿಯಾದಿಕೇಶವರಾಯ |
ಸಾಕಾರ ಮೂರುತಿಯೆ ಕೃಷ್ಣ ||

ಇದು ಉಡುಪಿಯಲ್ಲಿ ರಚಿತವಾದ ದಾಸರ ಹಾಡು. ಕನಕದಾಸರು ಯಾವ ಕುಲದವರೆಂಬುದು ಗೊತ್ತಾಗುವುದಿಲ್ಲ. ಆದರೆ, 'ಮುಟ್ಟಲಮ್ಮರು ಎನ್ನ ಬಂಧುಗಳು, ಅಟ್ಟಿಬಿಡುವುತಲಿಹರೊ' ಎಂದು ಅಂದಿರುವುದರಿಂದ ದಾಸರು, ಮುಟ್ಟಿಸಿಕೊಳ್ಳದಂತಹ ಒಂದು ಜಾತಿಯವರಾಗಿದ್ದರೆಂದು ಹೇಳ ಬಹುದು.

೮. ರಾಗಃ—ಮಧ್ಯಮಾವತಿ ಝಂಪೆತಾಳ.

ಕಲಿಯುಗದ ಮಹಿಮೆಯನು ಕಂಡಷ್ಟು ಪೇಳುವೆನು || ಪ ||
ಕಮಲನಾಭನ ಕೃಪೆಯ ಪಡೆದವರು ಕೇಳಿ || ಅ ||

ಸತ್ಯಧರ್ಮಗಳೆಲ್ಲ ಎತ್ತಪೋದವೊ ಕಾಣೆ |
ಉತ್ತಮರ ಜೀವನಕೆ ದಾರಿಯಿಲ್ಲ |

ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲ |
ಅರ್ಥಸಂಪನ್ನರಾಗ್ಯನುಭವಿಸುತಿಹರು ||

ಅತ್ತೆಯೇ ಸೊಸೆಯಾಗಿ ಸೊಸೆಯು ಅತ್ತೆಯು ಆಗಿ |
ಪುತ್ರ ಪಿತನಾಗಿ ಪಿತ ಪುತ್ರನಾಗಿ |
ಮತ್ತೆ ಗಂಡನಿಗೆ ಹೆಂಡತಿಯು ಗಂಡಳು ಆಗಿ |
ವರ್ತಿಸುವರಯ್ಯ ತಮಗೆದುರಿಲ್ಲವೆಂದು ||

ವಾವೆವರಸೆಯು ತಪ್ಪಿ ವೈರಿವರ್ಗವು ಹೆಚ್ಚಿ |
ದೇವ ಬ್ರಾಹ್ಮಣ ಗುರುಹಿರಿಯರನು ಜರಿದು |
ಕೇವಲಾಧಮರೆಲ್ಲ ಸಿರಿಮದದಿ ಸೊಕ್ಕಿದರು |
ಕಾವರಾರೈ ಸಾಧುಸಜ್ಜನರನೀಗ ||

ವೇದ ವಿಪ್ರರು ತಮ್ಮ ವೃತ್ತಿಸ್ವಾಸ್ತ್ಯವ ಕಳೆದು |
ಆಧಾರವಿಲ್ಲದೆ ತಿರಿದು ತಿಂಬುವರು |
ಕಾದುವ ಶೂರರಿಗೆ ಕಾಸುಕೊಡುವವರಿಲ್ಲ |
ಮೇದಿನಿಗೆ ಬೀಳ್ವಮಳೆ ಖಂಡ ಮಂಡಲವು ||

ಅನ್ನ ವಸ್ತ್ರಗಳಿಂದ ಚೆನ್ನಾಗಿ ಬಾಳುವರ |
ಭಿನ್ನ ತಂತ್ರವ ಮಾಡಿ ಕೆಡಿಸುತಿಹರು |
ಗನ್ನಗತಕವ ಮಾಳ್ಪ ಗ್ರಾಮಣ್ಯಗಳ ಕಲಿತು |
ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ ||

ಆಳಿದೊಡೆಯಂಗೆರಡು ಬಗೆಯುವಾತಗೆ ಒಳ್ಳೆ |
ಮಾಳಿಗೆಯು ಮನೆ ತುರುವು ಧನಧಾನ್ಯವು |
ವೇಳೆವೇಳೆಗೆ ಬರುವ ಹೆಂಡತಿಗೆ ಲೆಕ್ಕಿಸದೆ |
ಸೂಳೆಯನು ಮೆಚ್ಚಿ ಕಾಲವ ಕಳೆವರಯ್ಯ ||

ಸೇರಿ ದ್ರೋಹವ ಮಾಳ್ಪ ಕ್ರೂರ ಕರ್ಮಿಗಳ ಮತ |
ಪೂರೈಸಿ ಕೊಡುವರರಸುಗಳೆಲ್ಲರು |
ಧಾರುಣಿಯು ಭಾರವನು ತಾಳಲಾರದೆ ದೇವಿ |
ಶ್ರೀರಾಮ ರಾಮೆಂದು ಶಿರವ ತೂಗುವಳೈ ||

ಉತ್ತಮ ಪತಿವ್ರತೆಯು ಪತಿ ನೀನೆ ಗತಿಯೆನಲು ।
ಮುತ್ತೈದೆಗುಡುವುದಕೆ ವಸ್ತ್ರವಿಲ್ಲ ॥
ಮತ್ತೆ ವ್ಯಭಿಚಾರಿಣಿಗೆ ತೊಡಿಗೆ ಬಂಗಾರಗಳು ।
ವರ್ತನೆಯಿದೇನಯ್ಯ ಕಲಿಯುಗದ ಮಹಿಮೆ ॥

ಪತಿವ್ರತೆಯರೆಂಬುವರು ಶತಸಹಸ್ರಕೆ ಬಂದು ।
ಮಿತಿಮೀರಿಯಿಹರಯ್ಯ ಇತರ ಜನರು ॥
ಮತಿಗೆಟ್ಟು ಮನಸೋತು ಅನ್ಯಪುರುಷರ ಕೂಡಿ ।
ಗತಿಗೆಟ್ಟು ಪೋಗುವರು ಪರಲೋಕ ತೊರೆದು ॥

ಹರಿಹರರ ಪೂಜೆಗಳು ಹಗರಣಗಳಾದುವು ।
ಉರಿಮಾರಿ ಚಾಮುಂಡಿ ಶಕ್ತಿಗಳಿಗೆ ।
ಕುರಿ ಕೋಣ ನೈವೇದ್ಯ ಧೂಪದೀಪಗಳಿಂದ ।
ಪರಮ ಭಕ್ತಿಯ ಮಾಡಿ ಪೂಜಿಸುವರಯ್ಯ ॥

ನಡೆವ ಕಾರ್ಯಗಳೆಲ್ಲ ನುಡಿಯಲೆನ್ನಳವಲ್ಲ ।
ಒಡೆದು ನೀನೇ ಬಲ್ಲೆ ಕಲಿಯುಗದ ಮಹಿಮೆ ।
ತಡವ ಮಾಡಲಿ ಬೇಡ ತಾಳಲಾರೆನು ಲೋಕ ।
ಮೃಡನ ವೈರಿಯ ವೆತ್ತ ಆದಿಕೇಶವನೆ ॥

ಕಲಿಯುಗದ ಮಹಿಮೆಯನ್ನು ಹೇಳುವಾಗ್ಗೆ ದಾಸರು ಎರಡು ಮಹತ್ವದ ವಿಷಯಗಳನ್ನು ವಿವರಿಸಿರುವರು; ೧ ಆಳಿದೊಡೆಯಂಗೆರಡು ಬಗೆವಾತಗೆ ಒಳ್ಳೆ ಮಾಳಿಗೆಯ ಮನೆ. ತುರುವು, ಧನಧಾನ್ಯವು. ೨. ಸೇರಿ ದ್ರೋಹವ ಮಾಳ್ಪ ಕ್ರೂರ ಕರ್ಮಿಗಳ ಮತ ಪೂರೈಸಿ ಕೊಡುವರರಸುಗಳೆಲ್ಲರು. ದಾಸರು ಈ ಪದವನ್ನು ರಾಕ್ಷಸದಂಗಡಿಯ ನಂತರ ರಚಿಸಿರಬೇಕಾಗಿ ತೋರುತ್ತದೆ. ಆ ಕಾಳಗವಾದೊಡನೆ ಆದಿಲಶಹನು, ತೊರಗಲ್ಲ ಕೋಟೆಯನ್ನು ವಿಟ್ಟ ಗೌಡನ ಕಡೆಯಿಂದ ಸೆಳೆದು ಕೊಂಡನು. ಈ ವಿಟ್ಟಗೌಡನು ಸಿರಸಂಗಿಯ ದೇಸಾಯರ ಪೂರ್ವಜನು. ಆ ಮೇಲೆ ಆದಿಲಶಹನು ಬಂಕಾಪುರದ ಮೇಲೆ ಸಾಗಿಬಂದನು. ಬಂಕಾಪುರವು ವಿಜಯನಗರದವರ ಆಯುಕಟ್ಟಿನ ಕೋಟೆಯು. ಅಲ್ಲಿ ವಿಜಯನಗರದ ಮಾಂಡಲಿಕನಾದ ವೆಲ್ಲಪನಾಯಕನು ಇರುತ್ತಿದ್ದನು.

ರಾಕ್ಷಸದಂಗಡಿಯ ನಂತರ ವೆಲ್ಲಪನಾಯಕನು ವಿಜಯನಗರದವರಿಂದ ಸ್ವತಂತ್ರನಾಗಿ ಬಂಕಾಪುರದ ಕೋಟೆಯನ್ನು ಹಿಡಿದುಕೊಂಡನು. ಆದಿಲ ಶಹನು ವೆಲ್ಲಪನಾಯಕನನ್ನು ಸೋಲಿಸಿದನು. ವೆಲ್ಲಪನಾಯಕನು ಆದಿಲ ಶಹನ ಮಾಂಡಲಿಕನಾಗಿ ಇರತೊಡಗಿದನು. ಬಂಕಾಪುರವು ಮುಸಲ್ಮಾನರ ಮುಖ್ಯಸ್ಥಳವಾಯಿತು. ಈಗ್ಗೆಯೂ ಬಂಕಾಪುರದಲ್ಲಿ ಮುಸಲ್ಮಾನರ ಸಂಖ್ಯೆಯು ಹೆಚ್ಚಾಗಿರುವುದು. ಬಾಡದಲ್ಲಿಯೂ ಮುಸಲ್ಮಾನರು ವಿಶೇಷವಾಗಿರುವರು. ಕಾಗಿನೆಲೆಯಲ್ಲಿರುವ ೧೫೦೦ ಜನಸಂಖ್ಯೆಯಲ್ಲಿ ಸುಮಾರು ೧೧೦೦ ಜನರು ಮುಸಲ್ಮಾನರಿರುವರು. ದಾಸರ ಕಾಲದಲ್ಲಿ ಬಂಕಾಪುರ ಪ್ರಾಂತದಲ್ಲಿ ಮುಸಲ್ಮಾನರ ಹಾವಳಿಯು ಹೆಚ್ಚಾಗಿರಬಹುದು. ಕಾಗಿನೆಲೆಯ ಹಾಳಾದ ಊರು, ಬಿದ್ದ ಗುಡಿಗಳು, ಒಡೆದ ಮೂರ್ತಿಗಳು, ಈ ಜಳವನ್ನೇ ಸೂಚಿಸುತ್ತಿವೆ. ವಿಜಯನಗರದ ಪುಂಡನಾಯಕರು ರಾಕ್ಷಸದಂಗಡಿಯ ನಂತರ ವಿಸ್ಖಳಿತವಾದ ಆ ಸಾಮ್ರಾಜ್ಯದಲ್ಲಿ ಕೊಲೆ ಸುಲಿಗೆಗಳನ್ನು ಕೈಕೊಂಡಿರಬಹುದೆಂದು ದಾಸರ ಈ ಪದದಿಂದ ತಿಳಿಯುತ್ತದೆ. ಮೋಹನತರಂಗಿಣಿಯನ್ನು ಬಿಟ್ಟು ಉಳಿದ ರಾಮಧಾನ್ಯಚರಿತ್ರೆ, ನಳಚರಿತ್ರೆ, ಭಕ್ತಿಸಾರಗಳು ಮೈಸೂರ ಸೀಮೆಯಲ್ಲಿ ರಚಿತವಾದುವು. ಸುತ್ತಲು ನಡೆಯುತ್ತಿರುವ ಪುಂಡಾಟಕ್ಕೂ ನಾಯಕರ ಭಂಡತನಕ್ಕೂ ಬಿರಿನುಡಿಗಳನ್ನಾಡುತ್ತಿರುವ ದಾಸರಿಗೆ ಕಾಗಿನೆಲೆಯಲ್ಲಿ ತೊಂದರೆಯಾಗಿರಬಹುದು. ಇಲ್ಲವೆ ದಾಸರೆ ಹೇಸಿ ಕೆಲಕಾಲ ಕಾಗಿನೆಲೆಯನ್ನು ತೊರೆದಿರಬಹುದು.

ರಾಕ್ಷಸದಂಗಡಿಯ ನಂತರದ ವಿಜಯನಗರವನ್ನು ಕುರಿತು ಚೆನ್ನಬಸವ ಪುರಾಣದಲ್ಲಿ ಬರೆದಿರುವುದು,

ಪಟ್ಟಣಂಕೆಟ್ಟು ತದ್ರಾಜ್ಯದೊಳಗೆಲ್ಲಿಯುಂ ।
ಹಟ್ಟಿಕೊಟ್ಟಿಗಳಾಗಿ ದೇಶದೊಳಗಲ್ಲಲ್ಲಿ ।
ಸೆಟ್ಟಿ ಸುಪ್ರಜೆಗಳಂ ಕಟ್ಟಿಕೊಂಡುಳ್ಳ ಧನಮಂಕೊಂಡು ಬಾಧಿಸುವರು ||
ನೆಟ್ಟನೆ ಸುಜಂಗಮಂ ಭಕ್ತರಾಚಾರಮಂ ।
ಬಿಟ್ಟು ಮನಬಂದಂತೆ ತಮತಮಗೆ ಭೂಮಿಯೊಳ್ ।
ಕೆಟ್ಟು ಧರ್ಮವನು ವರ್ಜಿಸುವರೆಲೆ ಸಿದ್ಧರಾಮೇಶ ಕೇಳೆಂದನು ||

ಎಲೆ ರಾಮ ಕೇಳಿನ್ನು ದುರ್ಗಿಮಾರಿಯರಿ ಭೂ ।
ತಳದಲ್ಲಿ ನರಬೇಂಟೆಯಾಡುವರ್ ಮತ್ತವರೊ ।
ಳುಳಿವರಲ್ಲಲ್ಲಿ ಕುಲಕೊಬ್ಬೊಬ್ಬ ಸತ್ಯರೇ ಮಿಕ್ಕವರ್ ಲಯವಪ್ಪರು ॥
ಅಳಿದಳಿಯನನುಜನಂದುಳಿದೋಡಿ ಪೊಗಿರ್ದು ।
ಬಳಿಕ ತುರುಕರ್ ಪೋಗೆ ತಾನಾಗಲಂದು ತ ।
ನ್ನಿಳೆಯನೊಲಿದಾಳ್ವನಾದೇಶದೊಳಗಲ್ಲಲ್ಲಿ ಕೊಟ್ಟಂಗಳಾಗಿರ್ಪುವು ॥

೯ ರಾಗಃ—ಪಂತು ವರಾಳಿ ಆದಿತಾಳ.

ಕಣಿಯ ಹೇಳಬಂದೆ ನಾರಾಯಣನಲ್ಲದಿಲ್ಲವೆಂದು ಸಿಕ್ಕ ।
ಬಣಗುದೈವದ ಗೊಡವೆ ಬೇಡ ನರಕ ತಪ್ಪದು ॥ ಪ ॥

ಎಕ್ಕನಾತಿಯರು ಕಾಟ ಜಕ್ಕಿಯರು ಕನ್ಯೆಯರು ।
ಸೊಕ್ಕಿನಿಂದ ಸೊಂಟ ಮುರುಕ ಭೈರೆದೇವರು ।
ಮಿಕ್ಕಮಾರಿ ಮಸಣಿ ಚೌಡಿ ಮೈಲಾರಿ ಮೊದಲಾದ । ಇಂಥ ।
ಠಕ್ಕುದೇವರ ಗೊಡವೆ ಬೇಡ ನರಕ ತಪ್ಪದು ॥

ಸುತ್ತಣವರ ಮಾತಕೇಳಿ ಗುತ್ತಿಯ ಯಲ್ಲಮ್ಮಗೊಲಿದು ।
ಬತ್ತಲೆ ದೇವರಮುಂದೆ ಬಲಿಯ ನೋಡಿರೊ ।
ಮತ್ತೆ ಬೇವಿನುಡಿಗೆಯನ್ನು ಆರ್ಥಿಯಿಂದ ಉಟ್ಟುಕೊಂಡು ।
ಮುಕ್ತಿ ಕಾಂಬೆವೆಂಬ ಆಸಕ್ತಿ ಬೇಡಿರೊ ॥

ತೂಳದವರ ಮಾತಕೇಳಿ ಖೂಳರೆಲ್ಲರು ಕೂಡಿಕೊಂಡು ।
ಹಾಳು ಮಾಡಿ ಕೈಯಲ್ಲಿದ್ದ ಹೊನ್ನುಹಣಗಳ ।
ಬಾಳುತಿಪ್ಪ ಕೋಣಕುರಿಯು ಏಳ ಬೀಳ ಕೊರಳ ಕೊಯಿದು ।
ಬೀಳಬೇಡಿ ನರಕಕೆಂದು ಹೇಳ ಬಂದೆನೊ ॥

ಹೊಳ್ಳದ ಬಿಚ್ಚೇರು ತಾವು ಸುಳ್ಳರೆಲ್ಲರು ಕೂಡಿಕೊಂಡು ।
ಬೆಳ್ಳನೆ ಬೆಳತನಕ ನೀರ ತಡಿಯಲ್ಲಿ ಕುಳಿತು ।
ಗುಳ್ಳ ಗೊರಜೆ ಕೂಡಿತಿಂದು ಕಳ್ಳುಕೊಡನ ಬರಿದುಮಾಡಿ । ಇಂಥ ।
ಪೊಳ್ಳುದೈವರ ಗೊಡವೆ ಬೇಡ ನರಕ ತಪ್ಪದು ॥

ಪೊಡವಿಗಧಿಕ ವಿಜಯನಗರದೊಡೆಯ ಕಟ್ಟಿವೆಂಕಟೇಶ ।
ಕಡುಚಲ್ವ ಸತ್ಯದಧೀರ ಕನಕನೊಡೆಯನ ।
ಬಡದಾದಿ ಕೇಶವನ ಪಾದ ಬಿಡದೆ ಭಜಿಸಿರೋ । ಇಂಥ ।
ಜಡದೈವರ ಗೊಡವೆ ಬೇಡ ನರಕ ತಪ್ಪದು ॥

ಈ ಪದದಲ್ಲಿ, ಬಣಗು ದೈವಗಳ ವೈಯರ್ಥ್ಯವನ್ನು ಸೂಚಿಸಿ ಜನರಲ್ಲಿ ರೂಢವಾಗಿರುವ ಅನೇಕ ದುರಾಚಾರಗಳನ್ನು ಖಂಡಿಸಿರುವರು. ದೇವರ ಮುಂದೆ ಪ್ರಾಣಿಗಳನ್ನು ಬಲಿಕೊಡುತ್ತಿರುವ ಪದ್ಧತಿಯನ್ನು ನಿಂದಿಸಿರುವರು. ಮತ್ತೊಂದು ವಿಷಯವೆಂದರೆ, ದಾಸರು, ಇಲ್ಲಿ " ಎಕ್ಕನಾತಿಯರು " ಎಂಬ ಪದವನ್ನು ಉಪಯೋಗಿಸುವರು. ಎಕ್ಕನಾತಿಯರೆಂದರೆ, ಏಕನಾಥೀ ಪಂಥದ ಹೆಸರಿನಿಂದ ಕೆಲಜನರು ದಾಸರ ಕಾಲದಲ್ಲಿ ದುರಾಚಾರವನ್ನು ಕೈಕೊಂಡಿರಬಹುದು. ಅಂಥವರನ್ನು ದಾಸರು ಹೀಯಾಳಿಸಿರುವರು.

೧೦ ರಾಗಃ—ಮಧ್ಯಮಾವತಿ ಅಟತಾಳ.

ಕುಲ ಕುಲ ಕುಲವೆನ್ನುತಿಹರು ।
ಕುಲವ್ಯಾವುದುಂ ಸತ್ಯಸುಖವುಳ್ಳ ಜನರಿಗೆ ॥ ಪ ॥

ಕೆಸರೊಳು ತಾವರೆ ಪುಟ್ಟಲು ಅದ ತಂದು ।
ಬಿಸಜನಾಭನಿಗರ್ಪಿಸಲಿಲ್ಲವೆ ।
ಹಸುವಿನ ಮಾಂಸದೊಳುತ್ಪತ್ತಿಕ್ಷೀರವು ।
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ ॥

ಮೃಗಗಳ ಮೈಯಲ್ಲಿ ಪುಟ್ಟಲು ಕಸ್ತೂರಿ ।
ತೆಗೆದು ಪೂಸುವರು ದ್ವಿಜರೆಲ್ಲರು ।
ಬಗೆಯಿಂದ ನಾರಾಯಣನಾವ ಕುಲವಯ್ಯ ।
ಜಗವಲ್ಲಭನಾವ ಕುಲ ಪೇಳಿರಯ್ಯ ॥

ಆತ್ಮ ಯಾವ ಕುಲ ಜೀವ ಯಾವ ಕುಲ ।
ತತ್ವೇಂದ್ರಿಯಗಳ ಕುಲ ಪೇಳಿರಯ್ಯ ।
ಆತ ಮಹಾತ್ಮನು ನೆಲೆಯಾದಿಕೇಶವ ।
ಯಾತರ ಕುಲವಯ್ಯ ಆತನೊಲಿದ ಮೇಲೆ ॥

ಸಮಾಜದೊಳಗಿರುವ ಕುಲಕುಲಗಳ ಮೂದಲಿಕೆಯು ದಾಸರಿಗೆ ಸರಿದೋರಲಿಲ್ಲ. "ಯಾತರ ಕುಲವಯ್ಯ ಆತನೊಲಿದ ಮೇಲೆ," ಎಂದು ಹಾಡಿ, ಹರಿಭಕ್ತರ ಜಾತಿಗೊತ್ತುಗಳನ್ನು ಎಣಿಸಬಾರದೆಂದು ಹೇಳಿರುವರು.

೯೧. ರಾಗಃ—ಎರಕಲ ಕಾಂಬೋಧಿ ತ್ರಿಪುಟತಾಳ.

ನಾನೇನು ಬಲ್ಲೆ ನಿನ್ನ ನಾಮದ ಮಹಿಮೆಯ।
ಏನೆಂದು ಕೊಂಡಾಡಿಸ್ತುತಿಸಲೊ ದೇವ ॥ ಪ ॥

ಹರಿಮುಕುಂದನು ನೀನು ನರಜನ್ಮಹುಳು ನಾನು।
ಪರಮಪಾವನ ನೀನು ಪಾಪಿ ನಾನು।
ಪರಂಜ್ಯೋತಿಯು ನೀನು ದುರುಳತರಳನು ನಾನು।
ಪರತರನು ನೀನು ಪಾಮರನು ನಾನು॥

ಅಣುರೇಣುತೃಣಕಾಷ್ಟದಲ್ಲಿ ಪೂರ್ಣನು ನೀನು।
ತನು ನಿತ್ಯವಲ್ಲದ ಬೊಂಬೆ ನಾನು।
ವನಜಭವನನ ಪೆತ್ತ ವೈಕುಂಠಪತಿ ನೀನು।
ಕ್ಷಣಕ್ಷಣಕೆ ಅವಗುಣದ ಪ್ರತಿಮೆ ನಾನು॥

ತಿರುಪತಿವಾಸ ಶ್ರೀವೆಂಕಟೇಶನೆ ನಿನ್ನ।
ಚರಣಸೇವಕರ ಸೇವಕನು ನಾನು।
ಗರುಡ ಗಮನನು ನೀನು ನೆರೆನಂಬಿದವ ನಾನು।
ಸಿರಿಕಾಗಿನೆಲೆಯಾದಿಕೇಶವನು ನೀನು॥

ಇಲ್ಲಿ, ದಾಸರು ಪರಮಾತ್ಮ ಹಾಗೂ ಜೀವರುಗಳಲ್ಲಿರುವ ಮಹದಂತರವನ್ನು ಸ್ವಾರಸ್ಯಮಯವಾಗಿ ಹೇಳುವರು. ಜೀವಾತ್ಮ ಪರಮಾತ್ಮರನ್ನು ತುಲನೆ ಮಾಡುವುದರಲ್ಲಿ ದಾಸರು ತೋರಿಸಿರುವ ಯಾಥಾರ್ಥ್ಯವನ್ನು ಮನಗೊಳ್ಳಬೇಕು.

೯೨ ರಾಗಃ—ಕೇತಾರಗೌಳ ಅಟತಾಳ.

ತನು ನಿನ್ನದು ಜೀವ ನಿನ್ನದು। ಸ್ವಾಮಿ।
ಅನುದಿನದಲಿ ಬಾಹ ಸುಖದುಃಖ ನಿನ್ನದಯ್ಯ॥ ಪ ॥

ಸವಿನುಡಿ ವೇದ ಪುರಾಣ ಶಾಸ್ತ್ರಗಳೆಲ್ಲ ।
ಕಿವಿಗೊಟ್ಟು ಕೇಳುವ ಸ್ಥಿತಿನಿನ್ನದು ।
ನವಯೌವನಮೋಹನಾಂಗೇರ ರೂಪವ ।
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ ॥

ಒಡಗೂಡಿ ಗಂಧ ಕಸ್ತೂರಿ ಪರಿಮಳವೆಲ್ಲ ।
ಬಿಡದೆ ಲೇಪಿಸುವುದು ನಿನ್ನದು ।
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ ।
ಕಡುರುಚಿಗೊಂಬುವ ಸವಿ ನಿನ್ನದಯ್ಯ ॥

ಮಾಯಪಾಶದ ಬಲೆಯೊಳು ಸಿಕ್ಕಿ ತೊಳಲುವ ।
ಕಾಯ ಪಂಚೇಂದ್ರಿಯ ಗತಿ ನಿನ್ನದು ।
ಕಾಯಜಪಿತ ಕಾಗಿನೆಲೆಯಾದಿಕೇಶವ ।
ರಾಯ ನೀನಲ್ಲದೆ ನರರು ಸ್ವತಂತ್ರರೆ ॥

ಇದುವೆ, ದಾಸರ ಕೃಷ್ಣಾರ್ಪಣಬುದ್ಧಿ ! ಮೇಲೆ ಹೇಳಿದ ಪಾಪಗಳನ್ನು ಕನಕದಾಸರು ಮಾಡುತ್ತಿದ್ದರೆಂದು ಮಾತ್ರ ತಿಳಿಯಕೂಡದು. ಸರ್ವಸಾಧಾರಣ ಜನರು ತಮ್ಮಲ್ಲಿಯ ಕುಂದುಕೊರತೆಗಳನ್ನರಿಯಬೇಕೆಂದು ದಾಸರು ಕೆಲ ಪಾಪಗಳನ್ನು ವಿವರಿಸಿರುವರು. ದಾಸರಾದರೊ, ಕೆಡಕು ಚೆಲೊ ಎಲ್ಲವನ್ನೂ ಆದಿಕೇಶವನಿಗೆ ಅರ್ಪಿಸಿದವರು !

### ೧೩. ಸೌರಾಷ್ಟ್ರ ಏಕತಾಳ.

ಎಲ್ಲರು ಮಾಡುವುದು ಹೊಟ್ಟೆಗಾಗಿ ।
ಗೇಣು ಬಟ್ಟೆಗಾಗಿ ॥　|| ಪ ||

ನೆಲ್ಲುಗಳ ಕಟ್ಟಿಕೊಂಡು ಬಿದ್ರುಗಳ ಹೊತ್ತುಕೊಂಡು ।
ಕೂಲಿಗಳ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥

ನಾಲ್ಕುವೇದ ಪುರಾಣಶಾಸ್ತ್ರ ಪಂಚಾಂಗಗಳ ಹೇಳಿ ।
ಕಾಲಕಳೆವುದೆಲ್ಲ ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ॥

ಬಡಿದು ಬಡಿದು ಕಬ್ಬಿಣವ ಕಾಶಿ ತುಬಾಕಿ ಮಾಡಿ ।
ಗುಂಡು ಮದ್ದು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥

ಮುಂದೆ ಮುಂದೆ ಬಂಟರೆಲ್ಲ ಕತ್ತಿಢಾಲವನ್ನೆ ಪಿಡಿದು |
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ||
ದೊಡ್ಡದೊಡ್ಡ ಕುದುರೆಯೇರಿ ಸ್ಯಾಜಹೊತ್ತು ರಾವುತರಾಗಿ |
ಹೊಡೆದಾಡಿ ಸಾಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ||
ತುಂಟ ತುರಗಿಯನೆ ಹೆಂಟೆ ಮಣ್ಣು ಹದ ಮಾಡಿ |
ಕಷ್ಟ ಮಾಡುವುದು ನಮ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ||
ಕಂಟಕತನದಿಂದ ಕಳ್ಳತನವನ್ನೆ ಮಾಡಿ |
ಕಟ್ಟೆ ಹೊಡಿಸಿಕೊಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ||
ಸನ್ಯಾಸಿ ಜಂಗಮ ಜೋಗಿ ಜಟ್ಟಿಮೂಢಬೈರಾಗಿ |
ನಾನಾ ವೇಷಕೊಂಬೊದ್ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ||
ಉನ್ನತ ಕಾಗಿನೆಲೆಯಾದಿಕೇಶವನ |
ಅನುದಿನ ನೆನೆವೋದು ಭಕ್ತಿಗಾಗಿ ಪರ ಮುಕ್ತಿಗಾಗಿ ||

ಎಲ್ಲರು ಬೇರೆ ಬೇರೆ ವ್ಯವಸಾಯಗಳನ್ನು ಕೈಕೊಂಡು ಹೊಟ್ಟೆತುಂಬಿಕೊಳ್ಳುವುದರಲ್ಲಿ ತೊಡಗಿರುವರೆಂದು ದಾಸರು ಅನ್ನುತ್ತಾರೆ. ದೇವರ ಭಕ್ತಿಯೊಂದೇ ಮುಕ್ತಿಗೆ ಸಾಧನ. ದಾಸರ ಕಾಲದಲ್ಲಿ ತುಬಾಕಿಗಳು ಸಿದ್ಧವಾಗುತ್ತಿದ್ದುವೆನ್ನಬಹುದು.

೧೪ ರಾಗಃ—ಶಂಕರಾಭರಣ ಆದಿತಾಳ.

ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೇ | ಜನ್ಮ |
ಸಾರ್ಥಕವಿಲ್ಲದವರೆಲ್ಲ ಭಾಗವತರೇ || ಪ ||

ಮೂಗ್ಹಿಡಿದು ನಿರೊಳಗೆ ಮುಳುಗಿ ಜಪತಪವ ಮಾಡಿ |
ವೇದಶಾಸ್ತ್ರಪುರಾಣಗಳನೋದಿ ತಿಳಿದು |
ಬಾಗಿ ಪರಸ್ತ್ರೀಯರಿಗೆ ಭ್ರಮಿಸಿ ಕಣ್ಣಿಡುವಂಥ |
ನೀತಿ ತಪ್ಪಿದವರೆಲ್ಲ ದೇವಬ್ರಾಹ್ಮಣರೇ ಕೃಷ್ಣ ||

ಪಟ್ಟೆನಾಮವ ಬಡಿದು ಪಾತ್ರೆಕೈಯಲಿ ಪಿಡಿದು |
ಗುಟ್ಟಿನಲಿ ರಹಸ್ಯದ ಗುರುತರಿಯದೆ |
ಕೆಟ್ಟ ಕೂಗನು ಕೂಗಿ ಬಗುಳಿ ಬಾಯಾರುವಂಥ |
ಹೊಟ್ಟೆಗುಡ ಮೃಗಗಳೆಲ್ಲ ಶ್ರೀವೈಷ್ಣವರೆ ಕೃಷ್ಣ ||

ಅಂಗಲಿಂಗದೊಳಗಿರುವ ಚಿನ್ಮಯನ ತಿಳಿಯದೆ ।
ಲಿಂಗಾಂಗದ-ನೆಲೆಯ ಗುರುತರಿಯದೆ ।
ಜಂಗಮಸ್ಥಾವರ ಭಾವವನು ತಿಳಿಯದೆ ।
ಭಂಗಿ ಮುಕ್ಕಗಳೆಲ್ಲ ಲಿಂಗವಂತರಹರೆ ॥

ಅಲ್ಲ ಖುದಾ ಎಂದು ಆತ್ಮದಲಿ ತಿಳಿಯದೆ ।
ಮುಲ್ಲ ಶಾಸ್ತ್ರದ ನೆಲೆಯ ಗುರುತರಿಯದೆ ।
ಜಳ್ಳು ಕೂಗನು ಕೂಗಿ ಬಗುಳಿ ಬಾಯಾರುವಂಥ ।
ಕಳ್ಳ ತುರುಕರಿಗೆಲ್ಲ ಏರ ಸ್ವರ್ಗವುಂಟೆ ಕೃಷ್ಣ ॥

ಹಾಸ್ಯಗಳನು ಕಲಿತು ಘೋಷ ವಸ್ತ್ರಗಳ್ಹಾಕಿ ।
ಆಸೆಗಳ ತೊರೆದೆವೆಂದು ತಪಸು ಕುಳಿತು ।
ವಾಸುವೆಯ ಗರು ಕೃಪಾ ಗುರುತರಿಯದಂಥ ।
ವೇಷಧಾರಿಗಳೆಲ್ಲ ಸನ್ಯಾಸಿಗಳೇ ಕೃಷ್ಣ ॥

ಆರು ಚಕ್ರದ ನೆಲೆಯ ಅಷ್ಟಾಂಗಯೋಗದಲಿ ।
ಮೂರು ಮೂರ್ತಿಯ ಮೂರುಕಡೆಯೊಳಿರಿಸಿ ।
ಮಾರನಯ್ಯ ನೆಲೆಯಾದಿಕೇಶವನ ।
ಸಾರಿ ಭಜಿಸಿದವರಿಗೆ ಮನದ ಕೊರತೆಯುಂಟೆ ॥

೧೫. ಹುಟ್ಟಿಸಿದ ದೇವರು ಹುಲ್ಲ ಮೇಯಿಸುವುದಿಲ್ಲ. ಈ ವಿಷಯವನ್ನರಿತು ಪ್ರತಿಯೊಬ್ಬನು ನಿಶ್ಚಿಂತನಾಗಿರಬೇಕೆಂದು ದಾಸರ ಮತ. ದಾಸರ ವಿಶ್ವಾಸವು ಅಗಾಧವಾದುದು !

ರಾಗಃ—ಬಿಲಹರಿ ಅಟತಾಳ.

ತಲ್ಲಣಿಸದಿರು ಕಂಡ್ಯ ತಾಳು ಮನವೆ ॥ ಪ ॥
ಎಲ್ಲರನು ಸಲಹುವನು ಇದಕೆ ಸಂದೇಹ ಬೇಡ ॥ ಅ ॥

ಬೆಟ್ಟದ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ ।
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ ।
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ ।
ಘಟ್ಯಾಗಿ ಸಲಹುವನು ಇದಕೆ ಸಂದೇಹ ಬೇಡ ॥

ಅಡವಿಯೊಳಗಾಡುವ ಮೃಗಪಕ್ಷಿಗಳಿಗೆಲ್ಲ |
ಅಡಿಗಡಿಗೆ ಆಹಾರವಿತ್ತವರು ಯಾರೊ।
ಪಡೆದ ಜನನಿಯ ತೆರದೆ ಸ್ವಾಮಿ ಹೊಣೆಗಾರನಾಗಿ |
ಬಿಡದೆ ರಕ್ಷಿಪನಿದಕೆ ಸಂದೇಹ ಬೇಡ ||

ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ |
ಅಲ್ಲಲ್ಲಿಗಾಹಾರ ವಿತ್ತವರು ಯಾರೊ ।
ಬಲ್ಲಿದನು ಕಾಗಿನೆಲೆಯಾದಿ ಕೇಶವರಾಯ |
ಎಲ್ಲರನು ಸಲಹುವನಿದಕೆ ಸಂದೇಹ ಬೇಡ ||

೧೬ ನಾರಾಯಣನ ಹೆಸರನ್ನು ಒಂದು ಬೀಜಕ್ಕೆ ಹೋಲಿಸಿ, ಅದರ ಪೈರನ್ನು ಹೇಗೆ ಬೆಳೆಯ ಬೇಕೆಂಬುದನ್ನು ಕ್ರಮವಾಗಿ ದಾಸರು ಹೇಳುವರು.

ರಾಗ—ಕಾಂಬೋಧಿ ಝಂಪೆತಾಳ.

ನಾರಾಯಣ ಎಂಬ ನಾಮದ ಬೀಜವನು ನಾಲಗೆಯ |
ಕೂರಿಗೆಯ ಮಾಡಿ ಬಿತ್ತಿರಯ್ಯ || ಪ ||

ಹೃದಯ ಹೊಲವನು ಮಾಡಿ ತನುವ ನೇಗಿಲ ಮಾಡಿ।
ತನ್ನಿವರಾ ಎಂಬ ಎರಡೆತ್ತು ಹೂಡಿ |
ಜ್ಞಾನವೆಂಬೊ ಮಿಣಿಯ ಕಣ್ಣಿ ಹಗ್ಗವ ಮಾಡಿ।
ಮನವೆಂಬ ಧಾನ್ಯವ ನೋಡಿ ಬಿತ್ತಿರಯ್ಯ ||

ಕಾಮ ಕ್ರೋಧಗಳೆಂಬ ಗಿಡಗಳನು ತರಿರಯ್ಯ।
ಮದ ಮತ್ಸರವೆಂಬ ಪೊದೆಯ ಇರಿಯಿರಯ್ಯ ||
ಪಂಚೇಂದ್ರಿಯಗಳೆಂಬ ಮಂಚಿಗೆಯ ಹಾಕಿರಯ್ಯ |
ಚಂಚಲವೆಂಬ ಹಕ್ಕಿಯ ಓಡಿಸಿರಯ್ಯ ||

ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ ಆಯು ।
ಷ್ಯದ ರಾಸಿಯನು ಅಳೆಯಿರಯ್ಯ ||
ಇದು ಕಾರಣ ಕಾಗಿನೆಲೆಯಾದಿ ಕೇಶವನ |
ಮುದದಿಂದ ನೆನೆನೆನೆದು ಸುಖಿಯಾಗಿರಯ್ಯ ||

೧೭. ಮೇಲಿನ ಪದದಂತೆ ಈ ಪದದಲ್ಲಿ ಮನುಜರನ್ನು ಕುರಿಹಿಂಡಿಗೆ ಹೋಲಿಸಿ ದಾಸರು ಹಾಡಿದ್ದಾರೆ. ಇದರಿಂದ ದಾಸರು ಕುರುಬರೆಂದು

ಅನ್ನಲಾಗದು. ಬಾಯುಬಲ್ಲಿನಲ್ಲಿ ಭಕ್ತರಿಗೆ ಕುರಿಗಳೆಂದು ಕರೆದು ಪಾದ್ರಿಗಳಿಗೆ ಕುರಿ ಕಾಯುವವರೆಂದು ಅನ್ನುವುದುಂಟು. ಅದರಂತೆ ಇಲ್ಲಿಯೂ ದಾಸರು ದೇವರನ್ನು ಕುರಿಕಾಯುವವನೆಂದು ಆರೋಪಿಸಿ ಜನರು ಕುರಿಗಳೆಂದು ಅನ್ವಯಿಸಿರುವರು.

ರಾಗ—ಮುಖಾರಿ ಝಂಪೆತಾಳ.

ನಾವು ಕುರುಬರು ನಮ್ಮ ದೇವರೊ ಬೀರಯ್ಯ ।
ಕಾವ ನಮ್ಮಜ್ಜ ನರಕುರಿ ಹಿಂಡುಗಳ ॥ ಪ ॥

ಅಷ್ಟಮದಮತ್ಸರಗಳೆಂತೆಂಬ ತಗರುಗಳು ।
ದೃಷ್ಟಿ ಜೀವಾತ್ಮನೆಂಬೊ ಆಡು ।
ಸೃಷ್ಟಿಪ್ರಸಿದ್ಧವೆಂತೆಂಬುವ ಹೋತುಗಳು ।
ಕಟ್ಟಿ ಕೋಲಿನಲಿ ಇರುತಿರುವ ನಮ್ಮಜ್ಜ ॥

ವೇದಶಾಸ್ತ್ರಪುರಾಣವೆಂತೆಂಬ ಶ್ವಾನಗಳು ।
ಕಾದಿದ್ದು ನಮ್ಮಜ್ಜ ಹಿಂಡಿನೊಳಗೆ ।
ಹಾದಿ ಕಾಣದೆ ಕೂಗಿ ಬಾಯಾರಿ ಕಾಲ್ಗೆರಗಲು ।
ಆದರಿಸಿ ಅಂಬಲಿಯನೆರೆವ ನಮ್ಮಜ್ಜ ॥

ಅರಿಯೆಂಬ ಮರಿಗಳು ಹಿಂಡಿನೊಳಗೆ ಬಂದು ।
ಮಾರಿವ್ಯಾಘ್ರವೆಂತೆಂಬ ತೋಳ ಹೊಕ್ಕು ।
ಕುರುಬ ಹಿಂಜಾವದಲಿ ಕುರಿಯು ಮುರಿವುದ ಕಂಡು ।
ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ ॥

ಹುಟ್ಟೋದಕೆ ಮೊದಲಿಲ್ಲ ಸಾಯೋದಕೆ ಕೊನೆಯಿಲ್ಲ ।
ಹುಟ್ಟು ಸಾವಿನ ಹೊಲಬು ಬಲ್ಲ ನಮ್ಮಜ್ಜ ।
ಅಷ್ಟು ಪ್ರಾಣಿಗಳಿಗೆ ಇಷ್ಟು ಅಂಬಲಿ ಮಾಡಿ ।
ಹೊಟ್ಟೆ ತುಂಬಿದ ಹಾಗೆ ಕರೆವ ನಮ್ಮಜ್ಜ ॥

ಕಲಿಯುಗಕೆ ಗೌಡನಿವ ಸಂಗಾತಿ ಮಂತ್ರಿಸುತ ।
ಕಲಿಯುಗಂಗಳನೆಲ್ಲ ಮರೆತನೀತ ।
ಜಲಜಾಕ್ಷ ಕಾಗಿನೆಲೆಯಾದಿಕೇಶವನ ಮನ ।
ಒಲಿಸಿ ಭಜಿಸದವನು ಹುಚ್ಚ ಕುರುಬಾ ॥

೧೮. ಕೆಳಗಣ ಪದ್ಯವು ತಿರುಪತಿಯಲ್ಲಿ ರಚಿತವಾದುದು. ಭೂಕಂಪ ವಾದೊಡನೆ, ದಾಸರು ಈ ಹಾಡು ಹಾಡಿರಬಹುದಾಗಿ ತೋರುತ್ತದೆ. ಧರಣೀ ಕಂಪ ಮುಂತಾದ ಕ್ಷೋಭಗಳು ಜನರ ಪಾಪದಿಂದ ಆಗುತ್ತವೆಂದು ಆ ಕಾಲದ ಜನರ ನಂಬಿಗೆ. ಈಗ್ಗೆಯೂ ಹಾಗೆ ತಿಳಿದುಕೊಳ್ಳುವ ಅನೇಕ ಭಾವಿಕ ಜನರಿರುವರು.

ರಾಗಃ—ಮುಖಾರಿ ಝಂಪೆತಾಳ.

ನಡುಗಿದೆ ಯಾಕೆ ತಾಯಿ ಭೂಮಿ । ನಡು ರಾತ್ರಿಯೊಳು ।
ಪೊಡವಿಗೊಡೆಯನ ರಾಣಿ । ಪರಮ ಕಲ್ಯಾಣಿ ॥ ಪ ॥
ಗುರುಹಿರಿಯರನು ಕಂಡು । ಮುರುಕಿಸುವ ಮೋರೆಯನು ।
ಅರಿಮತಿಗೆ ಬಂದ್ಹಂಗೆ ಭಾಷೆಗಳ ಮಾಡಿ ।
ಚರಣಕೆರಗದ ಮನುಜರೆನಿಸಬಾರದೆಂದೆನುತ ।
ಮರಮುರಿದು ಒರಗಿ ಸಾಯಲಿ ಎಂದು ನಡುಗಿದೆಯಾ ॥
ಉತ್ತಮರ ಹೊಟ್ಟೆಯೊಳು ಬಗುಳೊ ಶ್ವಾನನು ಹುಟ್ಟಿ ।
ಹೆತ್ತವರ ನಿರ್ಬಂಧಕೊಳಗುಮಾಡಿ ।
ಅತ್ತೆ ಮಾವನ ಕೀರ್ತಿಯನು ಕೊಂಡಾಡದಧಮರ ।
ಹೊತ್ತು ಇರಲಾರೆನೆಂದು ಮತ್ತೆ ನಡುಗಿದೆಯಾ ॥
ಕಳ್ಳತನವನು ಕಲಿತು ಕಾಲೋಚಿತವ ಕೇಳದೆ ।
ಸುಳ್ಳುಮಾತುಗಳಾಡಿ ಒಡಲ ಪೊರೆವುದ ತಾಳಿ ।
ಕೊಳ್ಳೆನಿನ್ನವರವಗುಣಂಗಳ ಇಷ್ಟು ಇಂಥ ।
ಸುಳ್ಳು ಮನುಜರ ಹೊರಲಾರೆನೆಂದು ನಡುಗಿದೆಯಾ ॥
ಮುರಹರನ ಸ್ಮರಣೆಯನು ಮಾಡದೆ ಕಲಿಯುಗದಿ ।
ಸಲೆ ಭಕ್ತಿಯಿಂ ಶಾಸ್ತ್ರವನೋದದೆ ।
ಲಲನೆಯರ ಮೇಲೆ ದೃಷ್ಟಿಯು ಬಿಡುವ ಹೊಲೆಯರನು ।
ಹೊರಲಾರೆನೆಂದು ನೀನೊಲಿದು ನಡುಗಿದೆಯಾ ॥
ಧರೆಯೊಳಗೆ ಕರ್ವಿಗಳು ಹೆಚ್ಚಿ ಕವಿತ್ವವ ಕಲಿತು ।
ನರಕುರಿಗಳೆಲ್ಲ ನಡೆಗೆಟ್ಟರೆಂದು ।
ಗುರುವೆ ಕೇಳಯ್ಯ ಕನಕಪ್ರಿಯ ತಿರುಪತಿಯ ।
ಗಿರಿಯಾದಿ ಕೇಶವನೆ ಒಲಿದು ನಿಲ್ಲಿಸಿದಾ ॥

೧೯. ಭಕ್ತಿಪರ ಪದಗಳಲ್ಲಿ ಶೃಂಗಾರರಸಕ್ಕೂ ಸ್ಥಾನವಿದೆ. ದಾಸ ವಾಙ್ಮಯದಲ್ಲಿ ಶೃಂಗಾರದ ಹಾಡುಗಳನ್ನೂ ಕಾಣಬಹುದು. ರಾಧಾಕೃಷ್ಣರ ಶೃಂಗಾರವನ್ನು ಕವಿಗಳೂ ಸಾಧುಗಳೂ ದಾಸರೂ ಹಾಡಿದುದುಂಟು. ಗೀತ ಗೋವಿಂದ ಕಾವ್ಯವಂತೂ ಶೃಂಗಾರಮಯ ಭಕ್ತಿಪರ ಕಾವ್ಯವಾಗಿದೆ. ಅಷ್ಟೇಕೆ, ಕನಕದಾಸರ ಗುರುಗಳಾದ ವಾದಿರಾಜರು ಯತಿಗಳಾದರೂ ರಾಧಾಕೃಷ್ಣರ ಹಾಗೂ ಗೋಪಿಯರ ಶೃಂಗಾರಪರ ಭಕ್ತಿಯನ್ನು ತಮ್ಮ ರುಕ್ಮಿಣೀಶ ವಿಜಯದಲ್ಲಿ ಮುಕ್ತಕಂಠವಾಗಿ ಹಾಡಿದ್ದಾರೆ. ಕನಕದಾಸರ ಪದಗಳಲ್ಲಿ ಅಂತಹ ಎಷ್ಟೋ ಉದಾಹರಣೆಗಳಿವೆ. ಕೆಳಗೆ ಅಂತಹ ಎರಡು ಪದಗಳನ್ನು ಉದ್ಧರಿಸಿದೆ.

ರಾಗ:—ಆನಂದಭೈರವಿ ಅಟತಾಳ.

ರಂಗಯ್ಯ ಮುಟ್ಟದಿರು ಎನ್ನಗಳಕಿಸಿ |
ಮುತ್ತೆಲ್ಲ ಸಡಿಲ್ಯಾವೊ |
ಹೇ ಮುದ್ದು ರಂಗ || ಪ ||
ಎರಳೆಕಂಗಳ ಬಾಲೆ ಕೆರೆಯ ಮಳಲು ಚೆಲ್ಲಿ |
ಗೆಳತೇರ ಕೂಡ್ಯಾಡಿ ಕಲಿತೆಲ್ಲ್ಯೋ ಬೆಡಗ ||
ಸೊಕ್ಕಿನ್ಹುಡಗಾ |
ಮೇಲ್ವರಗಾ |
ಬಿಡು ಎನ್ನ ಸೆರಗಾ ||
ಅತ್ತಲೊಬ್ಬಳ ಕೂಡ್ಯಾಡುತ್ತಲೆ ಬಂದು |
ಸತ್ಯವ ಮಾಡದಿರೊ ಹೇ ಸರಿನಂಟಾ ||
ಬಣ್ಣದ ಬಂಟಾ |
ನೂರೆಂಟಾ |
ಬಿಡು ಎನ್ನ ಗಂಟಾ ||
ಅಂಗಯ್ಯ ಅರಗಿಣಿ ಮುಂಗಯ್ಯ ಮುರಹರಿ |
ಶೃಂಗಾರವಾಗಿದ್ದೆ ನಾಕಂಡೆ ಕಲೆಯಾ ||
ಕಾಗಿನೆಲೆಯಾ |
ಆದಿನಿಲಯಾ |
ಕನಕಪ್ಪಗೊಲಿಯಾ ||

ರಾಗಃ—ಶಂಕರಾಭರಣ ಛಾಪುತಾಳ.

ಸೈಯವ್ವ ಇದು ಸೈಯೆ ಗೋಪಿ |
ಸೈಯವ್ವ ಇದು ಸೈಯೆ ‖ ಪ ‖
ಸೈಯೆ ಗೋಪಿ ನಿನ್ನ ಮಗನಿಗೆ ಒಳ್ಳೆ ಬುದ್ಧಿ ಕಲಿಸಿದೆ ನೋಡು ‖ ಅ ‖

ಸಂಜೆಯು ವೇಳೆಗೆ ಬಂದು ಸಡೆಯಿಲ್ಲದೆ ಮನೆಯೊಳು ನಿಂದು |
ಕುಂಜರಗಮನೆ ಬಾರೆಂದು ಕುರುಳು ತಿದ್ದಿದ |
ಗಂಜಿಯು ಶಲ್ಯವ ಎನಗೆ ಮುಸುಕ ನಿಟ್ಟು ಮುದ್ದಾಡಿ |
ಕಂಜ ಲೋಚನೆ ಕುಚದ ಗಂಟು ಕಡೆಗೆ ಬಿಚ್ಚಿಂದ ನೋಡು ‖

ಅಡವಿ ಜಟ್ಟಣ್ಣನ ಮಾಡಲಿಕೆ ಸಡಗರ ಸಂಪತ್ತಿನಿಂದ |
ಹೆಡಿಗೆ ತುಂಬ ಹೋಳಿಗೆ ತುಂಬಿ ಕೊಡನೀರಿಗೆ ಹೋದೇವೆ |
ಕಡೆಗೊಂದಿನಗೆ ಹೋಳಿಗೆಯಿಲ್ಲ ಕೊಡತುಪ್ಪ ಹಾಲು ಮೊಸರು ಪಾಯಸ|
ತಡಗು ತಂದು ಮೀಸಲಳಿದು ಎಡೆಗೆಡಿಸಿ ಸುರಿದ ನೋಡು ‖

ಊರೊಳಿಂಥದಾಯಿತೆಂದು ಸಾರಿದೇವೆ ನಾರೇರು ಬಂದು |
ಆರಣ್ಯದಲ್ಲಿ ನಿಂತೇವೆ ಹಲವು ಹೆಂಗಳರು |
ನೂರಾರು ಹೆಂಗಳರು ಕೂಡಿ ಕ್ಷೀರಾಮಾರಿಕೊಂಡು ನಾವು |
ದಾರಿಹಿಡಿದು ಬರುತಾಲೊಂದು ಕೊಳನ ಕಂಡೇವೆ ನೋಡು ‖

ಓರಿಗೆ ಹೆಂಗಳರು ನಾವು ನೀರಾಟವಾಡಲಿಕೆ ಪೋಗಿ |
ಸೀರೆ ಬಿಚ್ಚಿ ದಡೆಯಲ್ಲಿಟ್ಟು ಸರೋವರ ಧುಮುಕಿದೇವೆ |
ಚೋರ ನಿನ್ನ ಕಂದ ಬಂದು ಸೀರೆಯು ತಕ್ಕೊಂಡು ಪೋಗಿ ;
ತೋರ ಉಚ್ಚದ ಕಡಹದ ಮರನೇರಿ ನೋಡುತ ನಿಂತಿದ್ದಾನೆ ‖

ನೆಟ್ಟನೆ ನೀರಾಟವನಾಡಿ ನಾಲ್ಕು ದಿಕ್ಕು ಅಡರಿದೇವೆ |
ಇಟ್ಟಲ್ಲಿ ಸೀರಿಲ್ಲದಿರೆ ಕೆಟ್ಟೆವಯ್ಯಯ್ಯೊ |
ಕೃಷ್ಣನಲ್ಲದಿಲ್ಲವೆಂದು ಅಷ್ಟದಿಕ್ಕು ಅಡರಿದೇವೆ |
ತುಟ್ಟ ತುದಿಯ ವೃಕ್ಷದಿ ನಿನ್ನ ಪುತ್ರನ ಕಂಡೇವೆ ‖

ಹಿಂದೆ ಮುಂದೆ ಹಸ್ತವ ಮುಚ್ಚಿ ತಲೆಬಾಗಿ ಕೇಳಲು ಕೃಷ್ಣನ ।
ವಂದನೆ ಮಾಡಿ, ನಿಮಗೆ ವಸ್ತ್ರವ ಕೊಡುವೆನೆಂದ ।
ಒಂದು ಕರದಿ ಮುಗಿವೆವೆಂದರೆ, ಎರಡು ಕರದಿ ಮುಗಿ, ನೀವೆಂದ ।
ಬಂಧನಕ್ಕೊಳಗಾದೇವೆಂದು ಹಾಗೆ ಮುಗಿದೇವೆ ।

ಪುಷ್ಪಕ ಗಂಧಿಯರೆ ಒಪ್ಪಿತವಾಗಲಿಲ್ಲ ।
ಚಪ್ಪಳೆಯಿಕ್ಕುತ ಮರದ ಸುತ್ತತಿರಿಗಿರೆಂದ ।
ತಪ್ಪದು ಎಷ್ಟೊಂತ್ತಾದರು ತಡದೇವೆ ಜಯ ಜಯವೆನುತ ।
ಚಪ್ಪಳೆನಿಕ್ಕುತ ಮರದ ಸುತ್ತು ತಿರುಗಿದೇವೆ ॥

ಪಗಡೆಕಾಯಿಕುಚ ಬಾಲೇರೆ ಪಗಡಿ ಹಾಕೀರೆನ್ನ ಮುಂದೆ ।
ತೆಗೆದು ಕೊಡುವೆ ವಸ್ತ್ರವ ನಿಮಗೆ ಬಗೆಬಗೆಯಿಂದ ।
ನಗೆಗೇಡು ಆದೇವು ಜಗದೊಳು ನಾವಿನ್ನೆಂಥ ಫಲವಿದೆಂದು ।
ಪಗಡಿ ಹಾಕಿದೇವೆ ನಾವು ಛೀ ಛೀಯೆನ್ನುತ ॥

ಬಿಟ್ಟ ಮಂಡೆಯಲ್ಲಿ ಪುರುಷ ವ್ಯೈಮುರೆತು ಮಲಗಿರಲು ಕಂಡು ।
ಜುಟ್ಟು ಮಂಚದ ಕಾಲಿಗೆ ಬಿಗಿಸಿ ಕಟ್ಟಿದಾ ।
ಕೊಟ್ಟಿಗೆ ಸುಡುತಿದೇಳೆಂದು ನೆಟ್ಟನೆ ಬೊಬ್ಬಿಡಲು ಕೇಳಿ ।
ಥಟ್ಟನೆ ಯೇಳಲು ಗಂಡನ ಜುಟ್ಟು ಕಿತ್ತು ಹೋಯಿತಮ್ಮ ॥

ಕಡೆಯಾಟ ಕಮಲ ನೇತ್ರೇರೆ ಎಡೆಯಾಗಿ ನಿಲ್ಲಿಸಿ ಇವರೊಳು ।
ಹಿಡದೊಂಟಾಲೆಗೆ ಒಬ್ಬೊಬ್ಬರ ನಾ ನೋಡದೆ ಕೊಡೆನೆಂದಾ ।
ಕೋಡಗ ಕೊರವಂಗೆ ಶಿಲುಕಿ ಆಡಿದಂತೆ ನಾವಾದೇವೆ ।
ಓಡ್ಯೋಡಿ ಬಂದವರಿಗೆ ಒಂದೊಂದು ವಸ್ತ್ರವ ಕೊಡುವೆನೆಂದ ॥

ತಂಡ ತಂಡದಲ್ಲಿ ನಮಗೆ ಸಣ್ಣ ಬಣ್ಣ ಬಳೆಯನಿಟ್ಟು ।
ಮಂಡೆ ಬಾಚಿ ಕುರುಳ ತಿದ್ದಿ ಕುಂಕುಮನಿಟ್ಟನೆ ।
ಪುಂಡ ನಿನ್ನ ಅಣುಗ ಆದಿಕೇಶವರಾಯ ।
ಬಂಡು ಮಾಡಿ ನಮ್ಮನು ಹೀಗೆ ಬಳಲಿಸಿ ಪೋದನೆ ॥

೨೦. ಚಿಕ್ಕದೊಂದು ಕತೆ ಹೇಳಿ ಅದರಿಂದ ನೀತಿ ತತ್ವವನ್ನು ಹೇಳ ಬೇಕೆಂದು ದಾಸರು ಈ ಕವಿತೆಯನ್ನು ರಚಿಸಿರಬಹುದು. ಇದು ಪದವಲ್ಲ.

ಪದದಂತೆ ಅನ್ನಲಿಕ್ಕೆ ಬರುವುದೆಂದು ಅದನ್ನು ಪದಗಳಲ್ಲಿ ಗ್ರಂಥಕಾರರು ಸೇರಿಸಿರಬಹುದು. ಇದು ಭೋಗ ಷಟ್ಪದಿಯಲ್ಲಿದೆ. ಚಿಕ್ಕಮಕ್ಕಳಿಗೂ ತಟ್ಟನೆ ತಿಳಿಯುವಂತೆ ದಾಸರು ಈ ಕತೆಯನ್ನು ಹೇಳಿರುವರು.

ರಾಗಃ—ನಾದನಾಮಕ್ರಿಯೆ ರೂಪತಾಳ.

ಧರೆಯ ಭೋಗವನ್ನು ನೋಡಿ।
ಹರಿಯ ಮರೆದು ಕೆಡಲಿ ಬೇಡ।
ಧರೆಯ ಭೋಗ ಕನಸಿನಂತೆ ಕೇಳು ಮಾನವ ॥

ತಿರುಕನೋರ್ವ ನೂರ ಮುಂದೆ।
ಮುರುಕು ಧರ್ಮಶಾಲೆಯಲ್ಲಿ।
ಒರಗಿರುತ್ತಲಿರಲು ಒಂದು ಕನಸು ಕಂಡನೆಂತೆನೆ ॥
ಪುರದ ಅರಸು ಸತ್ತನವಗೆ।
ವರಕುಮಾರರಿಲ್ಲದಿರಲು।
ಕರಿಯ ಕೈಗೆ ಕುಸುಮಮಾಲೆಯಿತ್ತು ಪುರದೊಳು ॥

ಬಿಡಲದಾರ ಕೊರಳಿನಲ್ಲಿ।
ತೊಡರಿಸಲ್ಕೆಯವರ ಪಟ್ಟ।
ದೊಡಯರನ್ನು ಮಾಳ್ಪೆವೆಂದು ಬಿಟ್ಟರಲ್ಲಿಗೆ ॥
ಒಡನೆ ತನ್ನ ಕೊರಳಿನಲ್ಲಿ।
ತೊಡರಿಸುವುದ ಕಂಡುತಿರುಕ।
ಪೊಡವಿಯಾಣ್ಮನಾದೆನೆಂದು ಹಿಗ್ಗುತಿದ್ದನು ॥

ಪಟ್ಟಗಟ್ಟಲಾಗ ನೃಪರು।
ಕೊಟ್ಟರವಗೆ ಕಪ್ಪಗಳನು।
ನೆಟ್ಟನವನು ರಾಜ್ಯವಾಳ್ದ ಕನಸಿನಲ್ಲಿಯೆ ॥
ಪಟ್ಟದರಸಿಯೊಳಗೆ ಸುಖವ।
ಪಟ್ಟು ಮನದಿ ಹರುಷಪಡಲು।
ಪುಟ್ಟಿದುವು ಹೆಣ್ಣು ಗಂಡು ಮಕ್ಕಳಾಗಲೆ ॥

ಓಲಗದಲಿರುತ ತೊಡೆಯ ।
ಮೇಲೆ ಮಕ್ಕಳಾಡುತಿರಲು ।
ಲೀಲೆಯಿಂದ ಚಾತುರಂಗ ಬಲವ ನೋಡುತ ॥
ಲೋಲನಾಗಿ ನೆನೆದು ಮನದಿ ।
ಪೇಳೆ ಮಂತ್ರಿಗಳಿಗೆ ಆಗ ।
ಬಾಲೆಯರನು ನೋಡಿ ಮದುವೆ ಮಾಳ್ಪೆನೆಂದನು ॥

ನೋಡಿ ವರರನೆನುತ ಕಳುಹೆ ।
ನೋಡಿ ಬಂದೆವೆನಲು ಜೀಯ ।
ಮಾಡಿ ಮದುವೆ ಮಂಟಪವನು ರಚಿಸಿರೆಂದನು ॥
ಗಾಢ ಸಂಭ್ರಮದಿಂದ ಕೂಡಿ ।
ಮಾಡಿದನು ಮದುವೆಗಳನು ।
ರೂಢಿಪಾಲರೆಲ್ಲ ಕೇಳಿ ಮೆಚ್ಚುವಂದದಿ ॥

ಧನದ ಮದವು ರಾಜ್ಯಮದವು ।
ವನಿತೆ ಮದವು ಸುತರ ಮದವು ।
ಕನಸಿನಲ್ಲಿ ಕಂಡು ತಿರಿಕ ಹಿಗ್ಗುತಿದ್ದನು ॥
ಇನಿತರೊಳಗೆ ನೃಪರ ದಂಡು ।
ಮನೆಯ ಮುತ್ತಿದಂತೆ ಇರಲು ।
ಕನಸಿನಲ್ಲಿ ಕಂಡು ಭಯದಿ ಕಣ್ಣು ತೆರೆದನು ॥

ಮೆರೆಯುತಿದ್ದ ಭಾಗ್ಯವೆಲ್ಲ ।
ಹರಿದು ಹೋಯಿತೆಂದು ತಿರಿಕ ।
ತಿರಿವುದಕೆ ನಾಚುತಿದ್ದ ಮರುಳನಂದದಿ ॥
ಸಿರಿಯು ಕನಸಿನಂತೆ ಕೇಳು ।
ಅರಿತು ಆದಿಕೇಶವನ್ನ ।
ಹರುಷದಿಂದ ಭಜಿಸೆ ನಿತ್ಯ ಸುಖವನೀವನು ॥

೨೧. 'ಕನಕದಾಸರ ಮುಂಡಿಗೆಗಳು' ಎಂದು ಪ್ರಸಿದ್ಧಿ ಪಡೆದ ದಾಸರ ಅನೇಕ ಒಗಟಗಳುಂಟು. ಅವುಗಳೊಳಗಿನಿಂದ ಒಂದು ಬರೆಯಲಿದೆ. ಆ ಒಗಟವನ್ನು ಓದುಗರೇ ಒಡೆಯಬೇಕು.

ರಾಗಃ—ಬೇಹಾಗ ಅಟತಾಳ.

ಮರವನು ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ ॥ ಪ ॥

ಒಂಟಿಕೊಂಬಿನ ಪಕ್ಷಿ ಒಡಲೊಳಗೆ ಕರುಳಿಲ್ಲ ।
ಗಂಟಲು ಮೂರುಂಟು ಮೂಗು ಇಲ್ಲ ।
ಕುಂಟ ಮನುಜನಂತೆ ಕುಳಿತಿಹುದು ಮನೆಯೊಳಗೆ ।
ಎಂಟು ಹತ್ತರ ಭಕ್ಷ್ಯ ಭಕ್ಷಿಸುವುದು ॥

ನಡುವೆ ಕಲಿಯುಂಬುವದು ನಡುನೆತ್ತಿಯಲಿ ಬಾಯಿ ॥
ಕಡು ಸ್ವರಗಳಿಂದ ಗಾನ ಮಾಡುವುದು ।
ಅಡವಿಯಲಿ ಹುಟ್ಟುವುದು ಅಂಗ ಎರಡಾಗುವುದು ।
ಬಡತನ ಬಂದರೆ ಬಹಳ ರಕ್ಷಿಪುದು ॥

ಕಂಜವದನೆಯರ ಕರದಲ್ಲಿ ನಲಿದಾಡುವುದು ।
ಎಂಜಲನುಣಿಸುವುದು ಮೂರ್ಜಗಕೆ ।
ರಂಜಿಪ ಶಿಖಾಮಣಿ ಸಿಂಹಾಸನದ ಮೇಲಿಪ್ಪ ।
ಸಂಜೀವಪಿತ ಆದಿಕೇಶವನೆ ಬಲ್ಲ ॥





ಸೋದೆಯ ತ್ರಿವಿಕ್ರಮನ ಗುಡಿ.

( ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ. )

| | | |
|---|---|---|
| ಪಾಯದಳ | पायदळ | ಕಾಲಾಳು |
| ಪಾರಿಯ | पाहरा | ಗಸ್ತಿಯು |
| ಪೌಜಿಕ್ಕ | फौज | ದಂಡುಗಟ್ಟು |
| ಪೆಂಡೆ | पेंडे | ಗೆಜ್ಜೆ |
| ಬಂಡಣ | भांडण | ಬಡಿದಾಟ |
| ಬಾಜಿಸು | बाजा | ಬಾರಿಸು |
| ಬಿಡಿಯ | भीड | ದಾಕ್ಷಿಣ್ಯ |
| ಮಂಜರ | मांजर | ಬೆಕ್ಕು |
| ಮೋರ | मोर | ನವಿಲು |
| ಮೋಹರ | माहेर | ದಂಡು |
| ರಿಣ | रीण | ಋಣ, ಸಾಲ |
| ಲೂಟ | लूट | ಎತ್ತಿಕೊಂಡ ಹೋದ ವಿಷಯ |
| ವಿಟಾಳಿಸು | विटाळणे | ತಟ್ಟು |
| ವೇಢೆ | वेढा | ಮುತ್ತಿಗೆ |
| ಸಂಭಾಳಿಸು | सांभाळणे | ರಕ್ಷಿಸು |
| ಹಾಣಾಹಾಣಿ | हाणाहाणी | ಹೊಡೆದಾಟ |

ಸೋಳಸಾಸಿರ ಹೆಂಡರು, ಬತ್ತೀಸಾಯುಧಗಳು, ತೆತ್ತೀಸ ಕೋಟಿ ನಿರ್ಜರರು, ಚಪ್ಪನ್ನ ದೇಶಗಳು, ಚೌಷಷ್ಟಿ ಕಲೆಗಳು, ಬಾಹತ್ತ ನಿಯೋಗಗಳು, ಚೌಶೀತಿ ಬಂಧಗಳು, ಎಂಬ ಸಂಖ್ಯಾವಾಚಕಗಳೂ ಉಪಯೋಗವಾಗಿವೆ.

## ಪರಿಶಿಷ್ಟ ಇ.

## ಕನಕದಾಸರ ಕಾವ್ಯದೊಳಗಿನ ಛಂದಸ್ಸು.

ಕನಕದಾಸರ ಕಾವ್ಯಗಳಲ್ಲಿ ಸಾಂಗತ್ಯವೂ ಭಾಮಿನೀಷಟ್ಪದಿ ವೃತ್ತವೂ ಉಪಯೋಗವಾಗಿವೆ.

೧. ಸಾಂಗತ್ಯವು ನಾಲ್ಕು ಪಾದವುಳ್ಳದ್ದು. ಅದರ ಒಂದು ಮೂರನೆಯ ಪಾದಗಳಲ್ಲಿ ನಾಲ್ಕು ವಿಷ್ಣುಗಣಗಳೂ ಎರಡು ನಾಲ್ಕನೆಯ ಪಾದಗಳಲ್ಲಿ ಎರಡು ವಿಷ್ಣುಗಣಗಳೂ ಕೊನೆಯಲ್ಲಿ ಒಂದು ಬ್ರಹ್ಮಗಣವೂ ಇರಬೇಕು. ವಿಷ್ಣುಗಣಗಳಿಗೆ ಅಲ್ಲಲ್ಲಿ ಬ್ರಹ್ಮಗಣವೂ ಬರಬಹುದು. ಪಾದದ ದ್ವಿತೀಯಾ

ಕ್ಷರವು ಪ್ರಾಸವುಳ್ಳದ್ದಿರಬೇಕು. ಗಣಗಳು ಮಾತ್ರಾಗಣಕ್ಕೆ ತಿರುಗಿಲ್ಲ. ಕೆಲ ವೆಡೆಯಲ್ಲಿ ಲಘುವನ್ನು ಗುರುಮಾಡಿ, ಗುರುವನ್ನು ಲಘುಮಾಡಿ ಹಾಡ ಬೇಕಾಗುತ್ತದೆ.

ಬ್ರಹ್ಮಗಣವು ನಾಲ್ಕು ಬಗೆಯಾಗಿಯೂ ವಿಷ್ಣುಗಣವು ಎಂಟು ತೆರ ನಾಗಿಯೂ ಇರುವುವು.

| ಬ್ರಹ್ಮಗಣ. | ವಿಷ್ಣುಗಣ. |
|---|---|
| — — ಬ್ರಹ್ಮಂ | — — — ಗೋವಿಂದಂ |
| ∪ ∪ — ಸುರಪಂ | ∪ ∪ — — ಹೃದಯೇಶಂ |
| — ∪ ಧಾತೃ | — ∪ — ನಾಕಿಗಂ |
| ∪ ∪ ∪ ರಜನಿ | ∪ ∪ ∪ — ಪರಹಿತಂ |
| | — — ∪ ಕಂಸಾರಿ |
| | ∪ ∪ — ∪ ನರಕಾರಿ |
| | — ∪ ∪ ಶ್ರೀಪತಿ |
| | ∪ ∪ ∪ ∪ ಮುರಹರ |

ಪ್ರಸ್ತಾರ,

(ಅ) ಹೊಂದಗ । ಡಿನ ಹೊದ । ಕೆಂಪು ಮನೆ। ಬಹಳ ನೇ ।
ರಂದ ವ । ಡೆದ ಪಟ್ಟ । ಶಾಲೆ ॥
ಮುಂದೆಸೆ । ಯಲಿ ತುಳ । ಸಿಯ ಮಂಟ । ಪದಿ ಗೋ ।
ವಿಂದನ । ಕೀರ್ತಿಸು । ತಿಹರು ॥

( ತರಂಗಿಣಿ. )

ಇದನ್ನೇ ಬ್ರಹ್ಮವಿಷ್ಣುಗಳಿಂದ ಹೀಗೆ ಪ್ರಸ್ತಾರಗೈಯಬಹುದು.

ಶ್ರೀಪತಿ । ಮುರಹರ । ಮುರಹರ । ಪರಹಿತಂ ।
ಶ್ರೀಪತಿ । ನರಕಾರಿ । ಧಾತೃ ॥
ಶ್ರೀಪತಿ । ಮುರಹರ । ನರಕಾರಿ । ಸುರಪಂ ।
ಶ್ರೀಪತಿ । ಶ್ರೀಪತಿ । ರಜನಿ ॥

(ಆ) ಕೃತಯುಗ । ದೊಳು ವೇದ । ತ್ರೇತೆಯೊ । ಳಧ್ವರ ।
ವತಿ ದಾನ । ಶೀಲ ದ್ವಾ । ಪರದೆ ॥
ಸ್ತುತಿಪುಣ್ಯ । ಕಲಿಯುಗ । ದೊಳಗೆ ಶ್ರೀ । ಹರಿನಾಮ ।
ಮತಿವಂತೆ । ಕೇಳು ಪೇ । ಳ್ದಪೆನು ॥

(ತರಂಗಿಣಿ)

ಮುರಹರ | ನರಕಾರಿ | ಶ್ರೀಪತಿ | ಶ್ರೀಪತಿ |
ನರಕಾರಿ | ಗೋವಿಂದಂ | ರಜನೆ ||
ನರಕಾರಿ | ಮುರಹರ | ಹೃದಯೇಶಂ | ನರಕಾರಿ |
ನರಕಾರಿ | ನಾಕಿಗಂ | ರಜನೆ ||

ಇದರೊಳಗಿನ ' ಕೃತಯುುಗ ' ಪದದಲ್ಲಿಯ ' ಯುು ' ವನ್ನು ದೀರ್ಘವಾಗಿ ಉಚ್ಚರಿಸಬೇಕಾಗುತ್ತದೆ.

೨. ಮೂರು ಮಾತ್ರೆಯ ಗಣದ ಮುಂದೆ ನಾಲ್ಕು ಮಾತ್ರೆಯ ಗಣವು ಬರುವಹಾಗೆ ಈ ಗಣಗಳು ಒಂದೆರಡು ನಾಲ್ಕೈದನೆಯ ಪಾದಗಳಲ್ಲಿ ಎರಡೆರಡೂ, ಮೂರಾರನೆಯ ಪಾದಗಳಲ್ಲಿ ಮೂರು ಮೂರೂ ಒಂದು ಗುರುವೂ ಇರುವುದು ಭಾಮಿನೀಷಟ್ಪದಿಯೆನಿಸುವುದು. ಇದರಲ್ಲಿ ⏑ —, ⏑ — ⏑ ಈ ಗಣಗಳು ಬರಲಾಗದು. ಪಾದಾಂತದ ಲಘು ವಿಕಲ್ಪದಿಂದ ಗುರುವೆನಿಸುವುದು.

ಪ್ರಸ್ತಾರ,

(ಅ) ಶ್ರೀರ | ಮಣ ಸರ | ಸಿಜದ | ಳಾಕ್ಷ ಮು |
ರಾರಿ | ಸಚರಾ | ಚರಭ | ರಿತ ದುರಿ |
ತಾರಿ | ನಿತ್ಯಾ | ನಂದ | ನಿರ್ಜರ | ನಿಕರ | ದಾತಾ | ರ ||
ವಾರಿ | ಜಾಂಬಕ | ವರಗು | ಣತ್ರಯ |
ಮಾರ | ಪಿತ ವೇ | ದಾಂತ | ನುತ ವರ |
ಪೌರ | ಚೆನ್ನಿಗ | ರಾಯ | ಪಾಲಿಸು | ಸತ್ಕೃಪೆ | ಯ || ( ನಳ ಚರಿತ್ರೆ ).

(ಆ) ಶ್ರೀಯ | ರಸ ಗಾಂ | ಗೇಯ | ನುತ ಕೌಂ |
ತೇಯ | ವಂದಿತ | ಚರಣ | ಕಮಲ ದ |
ಛಾಯ | ತಾಂಬಕ | ರೂಪ | ಚಿನ್ಮಯ | ದೇವ | ಕೀತನ | ಯ ||
ರಾಯ | ರಘುಕುಲ | ವರ್ಯ | ಭೂಸುರ |
ಪ್ರಿಯ | ಸುರಪುರ | ನಿಲಯ | ಚೆನ್ನಿಗ |
ರಾಯ | ಚತುರೋ | ಪಾಯ | ರಕ್ಷಿಸು | ನಮ್ಮ | ನನವರ | ತ ||
(ಭಕ್ತಿಸಾರ)

೩. ಕನಕದಾಸರ ಪದಗಳು ದ್ವಿಪದಿ, ಚೌಪದಿ, ಷಟ್ಪದಿಗಳಲ್ಲಿವೆ. ಪದಗಳೆಲ್ಲ ಮಾತ್ರಾವೃತ್ತಕ್ಕೆ ಸೇರಿಕೊಂಡಿವೆ. ಪ್ರತಿಪಾದದಲ್ಲಿ ದ್ವಿತೀಯಾಕ್ಷರದ ಪ್ರಾಸವಿದ್ದುದೂ ಕಂಡು ಬರುತ್ತದೆ.

## ಪರಿಶಿಷ್ಟ ಈ.

## ಸೋದೆಯೊಳಗಿನ ತೇರುಬೀದಿಯ ಶಿಲಾಲೇಖ.

ಸ್ವಸ್ತಿಶ್ರೀಜಯಾಭ್ಯುದಯನೃಪಶಾಲಿವಾಹನ ಶಕವರ್ಷ ೧೫೧೫ನೇ ವಿಜಯ ಸಂ। ರದ ಕಾರ್ತಿಕ ಶುದ್ಧ ೧೫ ಲ್ಲಿ ಶ್ರಿಮದ್ರಾಜಾಧಿರಾಜ ಪರಮೇಶ್ವರ ಶ್ರೀವೀರಪ್ರತಾಪ ಶ್ರೀವೆಂಕಟಪತಿಮಹಾರಾಯರು ಸಮಸ್ತರಾಜ್ಯವನ್ನು ಸದ್ಧರ್ಮದಿಂದ ಪ್ರತಿಪಾಲಿಸುತ್ತಿದ್ದ ಸಮಯದಲ್ಲಿ ಅವರ ಅಜ್ಞಾಧಾರಕರಾದ ಸೋದೆಯ ಅರಸಪ್ಪನಾಯಕರು ಸೋದೆಯ ರಾಜ್ಯವನ್ನು ಸದ್ಧರ್ಮದಿಂ ಪ್ರತಿಪಾಲಿಸಿಕೊಂಡು ಬಹ ಕಾಲದಲ್ಲಿ ಅವರ ಗುರುಗಳು ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣ ಶ್ರೀಮದ್ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಶ್ರೀಮದ್ವಾಗೀಶತೀರ್ಥ ಶ್ರೀಪಾದಒಡೆಯರ ಕರಕಮಲ ಸಂಜಾತರಾದ ಶ್ರೀಮದ್ವಾದಿರಾಜತೀರ್ಥ ಶ್ರೀಪಾದಂಗಳವರು ತಮಗೆ ಪ್ರಸನ್ನರಾಗಿ ಕಾಶಿದೇಶದಿಂದ ಬಂದ ಶ್ರೀತ್ರಿವಿಕ್ರಮದೇವರಿಗೆ ದೇವಸ್ಥಾನವನ್ನು ಕಟ್ಟಿಸಿ, ಅಲ್ಲಿ ಸ್ವಾಮಿಯ ಪ್ರತಿಷ್ಠೆಯನ್ನು ಮಾಡಿಸುತ್ತ ಬ್ರಾಹ್ಮಣರ ಮನೆಯನ್ನು ಕಟ್ಟಿಸಿ ದೇವರ ಸೇವೆಗೆ ಶ್ರೀತ್ರಿವಿಕ್ರಮಪುರದಲ್ಲಿ ಇರಿಸಿ ದೇವರ ಅಮೃತಪಡಿನಂದಾದೀಪ್ತಿ ತ್ರಿಬಲಿ ಪಂಚಪರ್ವರಥೋತ್ಸವ ಅಂಗೋಪಾಂಗ ವೈಭವ ಮೊದಲಾದ ಸೇವೆಗಳು ಅಚಂದ್ರಾರ್ಕವಾಗಿ ನಡೆಯುವ ಅಷ್ಟಾಂಗದಲ್ಲಿ ಕಟ್ಟುಮಾಡಿ ತಾವು ತಮ್ಮ ವಿದ್ಯಾಬಲದಿಂದ ಕಡಿಸಿದ ಗ್ರಾಮಶೀಮೆಗಳ ಶಿಲಾಶಾಸನ ಪೂರ್ವಕವಾಗಿ ಶ್ರೀತ್ರಿವಿಕ್ರಮದೇವರ ಚರಣಾರವಿಂದದಲ್ಲಿ ಧಾರಾಪೂರ್ವಕವಾಗಿ ಸಮರ್ಪಿಸಿದ ಶಿಲಾಶಾಸನದ ಕ್ರಮವೆಂತೆಂದರೆ..

ಇಂತಿಗ್ರಾಮಗಳಿಗೆ ಪ್ರಾಕ್ಕು ಪ್ರಮಾಣಸಲ್ಲುವ ಛಪ್ಪನ್ನಶೀಮೆ ಒಳಗುಳ್ಳ ಗದ್ದೆಮನೆತೋಟಗಳಿಗೆ ಏನುಬಂಧ ಅಷ್ಟು ಅಷ್ಟಭೋಗ ತೇಜಸಾಮ್ಯವನ್ನು ತಾವು ಪ್ರತಿಷ್ಠೆಮಾಡಿದ ಶ್ರೀತ್ರಿವಿಕ್ರಮದೇವರು ಲಕ್ಷ್ಮೀನಾರಾಯಣ ದೇವರು ಮಠದ ಹಯಗ್ರೀವದೇವರು ತಿರುಮಲ್ಲದೇವರು ಉತ್ಸವಮೂರ್ತಿ ಧವಳಗಂಗೆ ಹನುಮಂತದೇವರು ಚಿನ್ನದ ವೃಂದಾವನ ಮೊದಲಾದ ದೇವರುಗಳ ಅಮೃತಪಡಿನಂದಾದೀಪ್ತಿ ನಿತ್ಯತ್ರಿಬಲಿ ಪಂಚಪರ್ವ ಕಾರ್ತಿಕ ಪೂಜೆ ರಥೋತ್ಸವ ಮೊದಲಾದ ಸೇವೆಗೆ ಅನುಕೂಲಮಾಡಿಕೊಂಡು ಅಚಂದ್ರಾರ್ಕವಾಗಿ ನಡೆಯುವಂತೆ ವಾದಿರಾಜತೀರ್ಥ ಶ್ರೀಪಾದಂಗಳವರು ತಮ್ಮ ಶಿಷ್ಯ ಪರಂಪರೆಯಾಗಿ ದೇವರ ಸೇವೆಯು ನಡಿಸಿಕೊಂಡು ಇಹದು. ಎಂದು ಕಟ್ಟುಮಾಡಿದ ಶಿಲಾಶಾಸನ...ಅರಸಪ್ಪನಾಯಕರು ತ್ರಿವಿಕ್ರಮದೇವರಿಗೆ ಕಾಲಂಪ್ರತಿಯಲ್ಲಿ ಕೊಡುವ ಕಾಣಿಕೆಗೆ ೧೫೦ ವರಹ ಹಣವನ್ನು ರಥೋತ್ಸವ ಸೇವೆಗೆ ಸಮರ್ಪಿಸಿದೆವು. ಈಧರ್ಮಗಳನ್ನು (ಆ ಚಂದ್ರಾರ್ಕವಾಗಿ ವಾದಿರಾಜತೀರ್ಥ ಶ್ರೀಪಾದಂಗಳವರು ತಮ್ಮ ಶಿಷ್ಯ) ಪರಂಪರೆಯಾಗಿನಡಿಸುವುದು...ಶಾಲಿ. ಶ. ೧೫೦೪ ಚಿತ್ರಭಾನುಸಂ। ದ ವೈಶಾಖ ಶು. ೧೫ಯು ಬುಧವಾರದಲ್ಲು ಶ್ರೀತ್ರಿವಿಕ್ರಮದೇವರ ಪ್ರತಿಷ್ಠೆ ಮಾಡಿದ ಮುಹೂರ್ತ.

# ಪರಿಶಿಷ್ಟ ಉ.

## ವಿಜಯನಗರದವರ ಪೆಟಲಂಬಿನ ಪಥಕದ ಪ್ರಥಮ ಉಪಯೋಗ.

## ರಾಯಚೂರ ಕಾಳಗ.

# CHRONICLE OF FERNAO NUNIZ.

## CHAPTER X ( Sewell pp. 343 ).

## OF THE SPOIL TAKEN FROM THE MOORS, OF HOW THE KING BURNT ALL THE DEAD, AND OF WHAT CHRISTOVAO DE FIGUEIREDO DID.

During this return of the king there came to meet him Christovao de Figueiredo, who was at the time in the city of Bisnaga with horses, and he took with him twenty Portuguese musqueteers, he also himself having his musquet. The king took much pleasure in his company, glad that he should see the war and his great power; and he ordered some tents to be given to him of those taken from the *Ydalcao*, and commanded that he should be lodged close to his own quarters. One day *Christovao De Figueiredo* told the king that he wanted to go and see the city, but the king said that he should not set his heart upon that because he did not want disaster to befall him. But *Christovao De Figueiredo* replied that the whole business of the Portuguese was war, and that this would be the greatest favour that he could do him, namely that *His Highness* should permit him to go and see the Moors. So the king gave him leave and sent some people with him *Christovao De Figueiredo* went close to the trench before the walls, keeping himself as much concealed as possible, and seeing how fearlessly the Moors exposed themselves on the wall, began, with the musqueteers whom he had brought, to open fire on them in such a way that he slew many, the Moors being careless and free from fear, who up to then had never seen men killed with firearms nor with such other weapons. So they began to forsake the wall ( at this point ), and the king's troops found an opportunity of coming in safety to it, and they began to destroy much of the masonry; aud so many people collected

on this side that all the camp was put in commotion, saying that *Christovao De Figueiredo* had entered the city with his Portuguese. This was told to the king Those in the city could not understand what was going on, nor how these people came to be in the King's service, until they recollected how on the day of the other fight the Portuguese had come, and then they cosidered themselves lost. For by the aid of those men the king's people came without fear to the wall, where already it was damaged in many places, because the city had its cannon so high up that these could do no injury to the men who were at the foot of the wall. The wall also was filled up inside with earth, and there were no cannon in the breaches. The people of the city whom up to that time they had killed had been supplied with stones which they had flung on the besiegers from the top of the wall, and with musquets and arrows, so that even if the king's men were able to reach the wall at all they were at least wounded; but as *Christovao De Figueiredo* with the Portuguese prevented the enemy from appearing at all on the wall, the Hindus were enabled to reach it at their ease.

## ಪರಿಶಿಷ್ಟ ಊ.

## ಕೃಷ್ಣದೇವರಾಯನ ಪಾಳಯ.

## ರಾಯಚೂರ ಕಾಳಗ.

# CHRONICLE OF FERNAO NUNIZ.

CHAPTER VIII. ( Sewell pp. 332 ).

Of the manner in which the king had his camp...etc......

The tent of the king was surrounded by a great hedge of thorns with only one entrance, and with a gate at which stood his guards. Inside this hedge lodged the Brahman who washes him and has charge of the idol that he always carries about him, and also other persons who hold offices about the king's person, and eunuchs who are always to be found in

his chamber. And outside this circle all around are his guards, who watch all night at fixed spots; with this guard quartered the officers of the househould; and from thence to the front were all the other captains in their appointed posts, according as each one was entrusted and ordered. Outside of all these people, in a camp by themselves, were the scouts of whom I have already spoken, whose duty it is to patrol all night through the camp and watch to see if they can catch any spies On the other side the washermen, (who are those that wash clothes) were in a camp by themselves. and they were near to the place where they could best wash their clothes.

All the cāmp was divided into regular streets Each captain's division has its market, where you found all kinds of meat, such as sheep, goats, pigs, fowls, hares, partridges and other birds, and this in great abundance; so much so that it would seem as if you were in the city of Bisnaga. And you found many endless kinds of rice, grains, Indian-corn vetches ( minguo ) † and other seeds that they eat. Beside these things, which are necessaries, they had another ( market ) where you could find in great abundance everything that you wanted; for in these markets they sell things that in our part are sold by professional hucksters. $ There were craftsmen, also, working in their streets, so that you saw made there golden jewels, and gewgaws, and you will find all kinds of rubies and diamonds and pearls, with every

† Minguo probably moong or green grain ( " Hobson-Jobson " Ibn Batuts calls it munj, others mungo.

$ Regato d arte.

other kind of precious stone for sale. There also were to be seen sellers of cloths, and these were without number as that is a thing so many want, they being of cotton. There were also to be seen grass and straw in infinite abundance I do not know who could describe it so as to be believed, so barren a country is this Rachol and so sandy. It is a mystery how there should be an abundance of everything therein. Any one can imagine what straw and grass would be required each day for the consumption of thirtytwo thousand four hundred horses and five hundred and fiftyone elephants* to say nothing of the sumpter-mules and asses, and the great number of oxen which carry all the supplies and many other burdens, such as tents and other things. Indeed no one who did not understand the meaning of what he saw would ever dream that a war was going on, but would think that he was in a prosperous city. Then to see the number of drums and trumpets, and other musical instruments that they use. When they strike up their music as sign that they are about to give battle it would seem as if heavens must fall; and if it happened that a bird came flying along at the time when they made such a terrific noise, it used to come down through terror of not being able to get clear of the camp, and so they would catch it in their hands; principally kites, of which they caought many.

But I cese to speak more of this because I should never finish; and so I turn to tell of the battle.

* The total cavalry and elephants of the different columns enumerated above comes to 32, 600 and 551 respectively.

## ಶಬ್ದಾರ್ಥ.

ಅಗಿ=ತಿನ್ನು
ಅಗ್ಗದ=ಮಹತ್ವದ
ಅಚ್ಚು=ಪ್ರೀತಿ
ಅರೆಯಟ್ಟು=ಹಿಂದಕ್ಕಟ್ಟು
ಅಲರಿಸು=ಅರಳಿಸು
ಅಳವುಳ್ಳ=ಕಸವು ಉಳ್ಳ
ಅಳ್ತಿ=ಅಕ್ಕರತೆ
ಆಣೆಮುತ್ತು=ಬೆಲೆಯುಳ್ಳ ಮುತ್ತು
ಆಲಿಕಲ್=ಆಣೆಕಲ್ಲು
ಆರೋಗಣೆ=ಊಟ
ಆರಂಭ=ಸಾಗುಮಾಡುವಿಕೆ
ಇಟ್ಟಣಿಸು=ಗುಂಪಾಗು
ಇರ್ಕುಳಿಗೊಳ್ಳು=ಮೋಹಿಸು
ಇರುಕು=ಹತ್ತಿಕ್ಕು
ಉಗಿ=ಹುಂಗಿ
ಉಬ್ಬಟೆ=ಉನ್ನತಿಕೆ
ಉರವಣೆ=ಗರ್ವ
ಉರುಗು=ಸಂಕುಚಿತವಾಗು
ಊಟೆ=ಝುರಿ
ಊಡು=ಊಟಮಾಡು, ಹೂಡು
ಎಡೆಯಾಡು=ಸಂಚರಿಸು
ಎಸಕ=ಕಾಂತಿ
ಒಗ್ಗು=ಸಮೂಹ
ಒದವು=ಒದಗು
ಒಪ್ಪಿಡಿ=ಒಂದುಹಿಡಿ
ಒಸಗೆ=ಸುದ್ದಿ, ಸಂದೇಶ, ಸಮಾರಂಭ
ಓರಂತೆ=ಮೊದಲಿನಂತೆ, ಕ್ರಮವಾಗಿ.
ಓಸರಿಸು=ಓರೆಯಾಗು
ಔಡು=ತುಟಿ
ಕಡಲನಾಲಗೆ=ನೀರಿನಬುರಗು
ಕಡಿತ=ಅರಿವೆಯ ಮೇಲೆ ಮಡಿಚು ವಂತೆ ಬರೆದಿಟ್ಟ ಗ್ರಂಥ
ಕನ್ನಡಕ=ಉಪನೇತ್ರ, ಚಾಳೀಸು
ಕಸೆಗೋಲು=ಚಬಕ, ಬೆತ್ತ
ಕ್ರಮುಕ=ಅಡಕೆ
ಕಾದಲ=ಪ್ರಿಯ
ಕಾಲ್ಸಿಗಳ=ಸರಪಣಿ
ಕಾಳಾಂಜಿ=ಪನ್ನೀರು ಸಿಡಿಸುವ ಪಾತ್ರೆ
ಕುಂಚ=ಚೌರಿ
ಕುಸ್ತರಿಸು=ಬೋಳೈಸು
ಕೂಟಕೊಳ್ಳು=ಬೇರೆಯಾಗಿರು
ಕೇಣವಿಲ್ಲದ=ದೀರ್ಘವಿಚಾರವಿಲ್ಲದ
ಕೊಟ್ಟಗೆಯುವ=ಕೋಠಿಗೆ ಸಂಬಂಧಿಸಿದವ
ಕೋಟಲೆ=ಅಡ್ಡಿ
ಖಂಡೆ=ಖಡ್ಗ
ಗಟ್ಟಿವಾಳ=ಸುಗಂಧದ ದ್ರವ್ಯದ ವರ್ತಕ
ಗಂಡಭೇರುಂಡ=ಎರಡು ಮುಖವುಳ್ಳ ಗರುಡ
ಗಿಣ್ಣುಗೊಳ್ಳು = ಗಣಿಕೆಯಾಗಿರು
ಘೋಟಕ = ಕುದುರೆ
ಚಡಾಳಿಸು=ವೃದ್ಧಿಹೊಂದು

ಚಪ್ಪರಿ=ಬಾಯಿಸಪ್ಪಳಮಾಡು
ಚಿನ್ನವರದರು=ಚಿನಿವಾಲರು
ಚಿಂಚಿತಿಯರು = ಬೇಡಿಗಿತ್ತಿಯರು
ಚಿಪ್ಪಿಗರು=ಶಿಲ್ಪಿಗರು
ಚಿಮ್ಮುರಿಹಾಕು=ಕಟ್ಟು
ಜುಣುಗು=ಹಿಂಜರಿ
ಝಲ್ಲಿ=ಗೊಂಡೆಗಳ ತೋರಣ
ಡೆಂಕಣಿ=ಧ್ವಜಸ್ತಂಭ
ಡಾಳಿಸು=ಬೀಸು
ಡಿಂಡೀರ=ಬುರುಗು
ತನಿ=ರುಚಿ
ತಿಣ್ಣ=ತೀಕ್ಷ್ಣ
ತೀರ್ಕಣಿಸು=ಕೊನೆಗಣಿಸು
ತಿರಿ=ಕೊಯ್ಯು
ತಿರುಚೂರ್ಣ=ನಾಮದ ನಡುವಿನ ಕೆಂಪು ಗಂಧ
ತುಡುಕು=ಹಿಡಿ
ತುರುಗು=ಗೊಂತಾಗು
ತುರುಗಿವೆ=ದಟ್ಟವಾದ ಎವೆ
ತೇಟಿಗರು=ಸಾಣಿಹಿಡಿಯುವವರು
ದಂಡಿಗೆ=ಮೇಣೆ, ಪಲ್ಲಕ್ಕಿ
ದುಗುಡು=ತೊಂದರೆ
ದೂಸ=ಗೂಡಾರ, ಡೇರೆ
ನಾಣ್ಚು=ನಾಚು
ನಾಲ್ವಗೆ=ನಾಲ್ಕು ಬಗೆ (ಧರ್ಮ, ಅರ್ಥ, ಕಾಮ, ಮೋಕ್ಷ)
ನೇಜಯ=ಭಲ್ಲೆ
ನೇರಂದ=ಬಹಳ ಚಂದವಾದ
ನೇವರಿಸು=ಬೊಟ್ಟಿನಿಂದ ಸರಿಪಡಿಸು
ನೊಸಲು=ಹಣೆ
ಪಚಾರಿಸು=ಹೀಯಾಳಿಸು
ಪತಿಕರಿಸು=ಪ್ರತಿಗ್ರಹಿಸು, ದಯೆ ತೋರಿಸು
ಪರುಠವಿಸು=ವಿಸ್ತರಿಸು
ಪಲ್ಲೈಸು=ಜೀನುಹಾಕು
ಪಸರ=ಅಂಗಡಿ
ಪಂಚಧಾರೆ = ಸಕ್ಕರೆ
ಪಾಟಿ=ಸೋಲು
ಪಾರಿ=ಪಹರೆ
ಪಾಸಟಿ=ಹೋಲಿಕೆ, ಸಾಮ್ಯ
ಪೆಟಲಂಬಿನವರು=ಸೋರುಪ್ಪಿನ ಸಹಾಯದಿಂದ ಎಸೆಯುವ ಬಾಣದವರು, ತುಬಾಕಿಯವರು
ಪೆರೆ=ಚಂದ್ರ
ಪೆರೆಸಾರು = ಹಿಂದಕ್ಕೆ ಸರಿ
ಬಳಿಯಂ=ಅನಂತರ
ಬಂಡಾಗು=ಹಿಂತಿರುಗು
ಬಂಡುಗ=ಹುಡಿ
ಬಂದುಗೆವಾಯ=ಬಂಧೂಕಹೂವಿನಂತಿರುವ ಬಾಯ
ಬಿಂಗಿ=ಬೊಗರಿ
ಬಿತ್ತು=ಬೀಜ, ಬೆಳೆ
ಬಿನ್ನಣ=ಜಾಣತನ
ಬಿಡಯ=ಗುಂಪಾಗು

ಬಡಿಯ=ದಾಕ್ಷಿಣ್ಯ
ಬಿಲ್ಲೋಜರು=ಧನುರ್ವಿದ್ಯಾವಿಶಾರದರು
ಬಿಳುವಳ್ಳಿ=ಹಾಳುಹಳ್ಳಿ
ಬೇಟ=ಆಸೆ
ಬೈತಿಡು=ಬಚ್ಚಿಡು
ಮಂಡೆ=ತಲೆ
ಮರಗಾಲರು=ಹಡಗವನ್ನಿಟ್ಟು ವ್ಯಾಪಾರಮಾಡುವವರು
ಮಾಸಾಳು=ಕಡುಗಲಿ
ಮಿಂದಿ=ಕುಟ್ಟು
ಮಿಸುನಿ=ಹೊಳೆಯುವ
ಮಿಳ್ತು=ಮೃತ್ಯು
ಮೂದಲಿಸು=ಈರ್ಷೆಪಡು
ಮೆಳೆ=ಕಂಟಿ
ಮೇಲುದು=ಮೇಲಿನ ವಸ್ತ್ರ, ಮೇಲ್ದಿ
ಮೊತ್ತ=ಸಮೂಹ
ರಹಿಯಲಿ=ರೀತಿಯಲಿ, ಪದ್ಧತಿಯಲಿ
ಲಗ್ಗೆ=ವಾದ್ಯಗಳ ಮೇಳ, ಮುತ್ತಿಗೆ
ಲಾಗು=ಜಿಗಿತ, ಲಾಘವ
ಲಾಳಿ=ಇಕ್ಕಳಿಯಂತಹ ಆಯುಧ
ವಧೂಟಿ=ಹೆಣ್ಣುಮಗಳು
ವಹಿಲ = ಪ್ರವಾಹ
ವಿಡಾಯ=ಶೋಭೆ, ವೈಭವ
ಸರಿ=ಸುರಿಯುವಿಕೆ, ಪ್ರವಾಹ
ಸಗ್ಗಳೆ=ನೀರಿನಪಾತ್ರೆ, ಪಕಾಲಿ
ಸತ್ತಿಗೆ=ಛತ್ರ
ಸಂಚಿ=ಚಂಚಿ, ಚೌರಿ
ಸಿಂಧ=ಒಂದು ಬಗೆಯ ಪತಾಕೆ
ಸುಟಿವೆತ್ತು=ಕೌಶಲ್ಯದಿಂದ
ಸೂಠಿ=ವೇಗ
ಸೂರಿಯ=ಸೂರ್ಯ
ಸೆಂಡು=ಚೆಂಡು
ಸೆಣಸು=ಎದುರಾಗು
ಸೆಳ್ಳುಗುರು=ಮೊನೆಯಾದ ಉದ್ದ ಉಗುರು
ಸೇನಭಾಗ=ಶಾನುಭೋಗ
ಸೇಸೆ=ಮಂತ್ರಾಕ್ಷತೆ
ಸೈಪು=ಪುಣ್ಯ
ಹಜಾರ=ದಿವಾಣ
ಹಮ್ಮುಗೆ=ಹಗ್ಗ
ಹಮ್ಮೈಸು=ಗರ್ವಪಡು, ಉಬ್ಬು
ಹಲ್ಲಣಿಸು=ಥಡಿಹಾಕು, ಜೀನುಹಾಕು
ಹಂಗಡ=ಹೊಸೆದ ಹಗ್ಗ
ಹುಲಿಮುಖ=ಕೋಟೆಯ ಬಾಗಿಲು
ಹುಲ್ಲೆ=ಚಿಗರಿ
ಹೊದರು=ಕಂಟಿ, ಹೊದರು
ಹೊದರೇರು=ದೊಡ್ಡದಾಗು
ಹೊರಳಿ=ಸಮೂಹ
ಹೊಸಮೆಳೆ=ಬಿದಿರ ಕಳಲು

# ಅನುಕ್ರಮಣಿಕೆ.


ಅಕಬರ ೨೫
ಅಗ್ನಿ ೧೩೧
ಅಚ್ಯುತರಾಯ ೨೦–೨೨, ೪೨
ಆದಿಲಶಹ ೨೨೪–೨೨೫
ಅರಸಪ್ಪನಾಯಕ ೭
ಅರಿಕೇಸರಿ ೨೦೬
ಅಲ್ಬುಕರ್ಕ ೧೯
ಆಂಡಯ್ಯ-ಕನಕದಾಸ ೧೬೮–೧೭೩
ಆದಿಕೇಶವನ ಗುಡಿ ೩೫ ೩೬
ಆದಿಪಂಪ ೨೦೬
ಆನಂದ ಸಂವತ್ಸರ ೩–೪
ಆಳ್ವಾರರು ೯
ಇಂದ್ರ ೧೩೧
ಇರಿವ ಬೆಡಂಗ ೨೦೬
ಉಡುತೊಡುವೊಡವೆಗಳು ೧೮೭–೧೯೧
ಉಡುಪಿ ೧೩, ೨೦, ೧೭೮, ೨೨೨
ಉದಧಿ ೫೮, ೬೦
ಉಪಾಧಿಖಂಡನ ೪೪
ಉಷೆ ಚಿತ್ರಲೇಖೆಯರ ಸಂವಾದ ೧೩೮–೧೩೯
ಊಟಆಡುಗೆಗಳು ೧೮೫
ಎಕ್ಕನಾತಿಯರು ೨೨೭
ಏಕನಾಥ ೧೨, ೨೨೭
ಕನಕನ ಕಿಂಡಿ ೨೨೧
,, ಕೊಳ ೧೭೮
,, ಗುಡಿ ೨೨೧
,, ಮುಂಡಿಗೆ ೨೪೦
ಕನಕನನ್ನು ಕೆಣಕ ಬೇಡ ೧೪೬
ಕಬೀರ ೧೧
ಕಲಬುರ್ಗೆ ೧೮
ಕಲಿ-ಕೈದು-ಕಾಳೆಗಗಳು ೧೯೫–೨೦೧
ಕಳಿಂಗ ೧೮
ಕಾಗಿನೆಲ್ಲಿ ೩೧–೩೬, ೧೮೦
ಕಾದಂಬ ೨೭, ೩೧, ೧೬೯
ಕಾವೇರಿ ೨೬
ಕಾಳಿದಾಸ–ಕನಕದಾಸ ೧೫೯–೧೬೧
ಕುಮಾರ ವಾಲ್ಮೀಕಿ ೧೮೯, ೧೯೪, ೨೦೦
ಕುಮಾರ ವ್ಯಾಸ ೯೪, ೧೫೮
ಕುಮಾರವ್ಯಾಸ–ಕನಕದಾಸ ೧೬೧–೧೬೫
ಕುಮಾರಸಂಭವ ೧೫೯
ಕುಹುಯೋಗ ೪೧
ಕೃಷ್ಣದೇವರಾಯ ೨, ೫, ೧೩, ೧೫–೨೦, ೨೮, ೩೯–೪೨, ೯೪, ೨೦೬–೨೦೮
ಕೃಷ್ಣಚೈತನ್ಯ ೧೧
ಕ್ರಿಯಾಶಕ್ತಿ ಪಂಡಿತ ೨೮
ಕ್ರಿಸ್ತೊವೊ–ಡಿ–ಫಿಗುರೆಡೊ ೨–೩
ಕೋಣನ ತೂಬು ೨೧೩
ಗಜಪತಿ ೧೮

ಗಣಪತಿಯ ಯುದ್ಧ ೧೪೪
ಗದುಗು ೩೦
ಗದಾಧರ ೪೦
ಗದಾಯುದ್ಧ ೨೦೬
ಗರುಡ ನವಿಲುಗಳ ಕಾದಾಟ ೧೪೦
ಗರುಡ ನಂದಿಗಳ ಹೋರಾಟ ೧೪೦
ಗವುರಾಜಿ ೩೩
ಗೋಕುಲ ೧೦
ಗೋವಿಂದ ಒಡೆಯರು ೭, ೪೪
ಗೋವೆ ೧೯, ೨೭
ಗೌರಾಂಗ ೧೧
ಘೂರ್ಜರ ೧೧, ೧೯, ೧೭೬
ಚಪ್ಪನ್ನದೇಶ ೬೩, ೧೭೫–೧೭೮
ಚಂದ್ರಗಿರಿ ೭, ೩೭, ೪೩
ಚಂದ್ರಿಕಾ ೬೪
ಚಂದ್ರಿಕಾಚಾರ್ಯ ೪೪
ಚಾಟುವಿಠಲನಾಥ ೯೪, ೧೫೮
ಚಿತ್ತೂರು ೧೦
ಚೆನ್ನಕೇಶವ ೩೬, ೯೫
ಚೆನ್ನಕೇಶವ ಮರಡಿ ೩೬
ಚೆನ್ನಬಸವ ಪುರಾಣ ೨೩, ೨೨೫
ಜಗನ್ನಾಥ ವಿಜಯ ೧೫೮
ಜಯತೀರ್ಥ ೪೪
ತತ್ವಪ್ರಕಾಶಿಕಾ ೪೪
ತರ್ಕತಾಂಡವ ೪೪
ತಮ್ಮರಾಯ ೩೮
ತಳಕಾಡು ೨೬
ತಾತಾಚಾರ್ಯ, ಕುಮಾರ ೫, ೧೩
ತಾತಾಚಾರ್ಯ, ತಿರುಮಲೈ ೫, ೧೩, ೧೯, ೧೩೦
ತಿಮ್ಮ ೨೧೨
ತಿಮ್ಮಣ್ಣಕವಿ ೯೪, ೧೫೮
ತಿಮ್ಮಕೇಶವ ಮರಡಿ ೩೬
ತಿರುಪತಿ ೩೬, ೩೮, ೧೭೫, ೨೩೪
ತಿರುಮಲರಾಯ, ಆರುವೀಡು ೨೩–೨೪
ತಿರುಮಲರಾಯ, ತುಳುವ ೪೧
ತ್ರಿವಿಕ್ರಮ ೫–೮
ತ್ರಿವಿಕ್ರಮದಾಸ ೧, ೫
ತ್ರಿವಿಕ್ರಮದಾಸಸ್ಯದಾಸ ೧೩೦
ತೀರ್ಥಪ್ರಬಂಧ ೩-೪, ೨೯
ತಂಬಾಕೆ ೧-೩, ೨೦೦, ೨೨೯
ತುಳಸೀದಾಸ ೧೧
ತೆಂಗಲೆಯರು ೯-೧೦
ತೊರಗಲ್ಲು ೨೨೪
ತೊರವೆಯ ರಾಮಾಯಣ ೧೮೯
ದಾಸಕೂಟ ೪೪-೫೦
ದಾಸೋದಿಗಂಬರ ೧೨, ೫೦
ದ್ವಾರಕಾಪುರ ೬೨-೬೩
ದೀವಟಿಗೆ ಸಲಾಂ ೪೧
ದಂಡಯಾತ್ರೆ ೧೯೭
ನವವೃಂದಾವನ ೪೨
ನರಸ ಭೂಪಾಲ ೩೫
ನರಸಿಂಹ. ಇಮ್ಮಡಿ ೩೮
ನರಸಿಂಹಸ್ತವ ೫೦, ೫೩

ನರಹರಿತೀರ್ಥ ೧೨
ನರಿದಲಿಗನ ಮಾತು ೯೩
ನಳಪುಷ್ಕರರ ಕಾಳಗ ೧೪೧
ನಾರಸಿಂಹ ೪೦
ನ್ಯಾಯಾಮೃತ ೪೪
ನ್ಯೂನಿಝು ೨, ೧೯೮-೧೯೯
ನಿಜಗುಣ ೧೭೮
ನಿತ್ಯಸೂರಿ ೧೩೩
ಪಲಾಸಿಕೆ ೨೭
ಪಂಚನಾರಾಯಣರು ೨೬
ಪಂಪಾಪತಿ ೨೮
ಪಕ್ಷಧರ ೪೦
ಪ್ರಸನ್ನಾಮೃತಂ ೨೮
ಪಾಳಯ ೧೯೮-೧೯೯
ಪುರಂದರದಾಸರು ೧೩,೪೫,೪೭-೪೯
ಪೆಟಲಂಬಿನವರು ೧೩,೧೯೮
ಪೆನುಗೊಂಡೆ ೭, ೨೩, ೪೩
ಪೆಂಜ ೨೧
ಪೋರ್ತುಗೀಜರು ೧೯, ೨೫
ಬಚ್ಚಮ್ಮ ೨೧೨
ಬಣ್ಣದಾಟ ೧೮೨
ಬತ್ತೀಸಾಯುಧ ೨೦೦
ಬನ್ನೂರು ೨೬
ಬಲ್ಲಾಳ ೨೭
ಬಂಕಾಪುರ ೨೭,೨೯,೩೨,೨೨೪-೨೨೫
ಬಾಡ ೨೯, ೧೭೮
ಬಾಣಾಸುರನ ಒಡ್ಡೋಲಗ ೧೮೧
ಬಾಣಾಸುರನ ಕೃಷ್ಣಸ್ತವನ ೧೪೯
ಬಾಣಾಸುರನ ಶಿವಸ್ತವನ ೧೪೮
ಬಾರ್ಬೋಸಾ ೨೦
ಬಾಮುನಿ ೧೮, ೧೭೭
ಬಿಟ್ಟಿದೇವ ೨೬-೨೭
ಬೀರೇಗೌಡ ೨೧೨
ಬೇಟೆ ೧೮೪
ಬೇಲೂರು ೧೩,೨೬,೩೬,೯೫,೧೭೮
ಭಟಕಳ ೧೯
ಭಂಡಾರಗಿರಿ ೩೫
ಭರತೇಶವೈಭವ ೮೯-೯೦, ೧೭೫
ಭ್ರಮರಗೀತೆ ೯೭
ಭಾನುದಾಸ ೧೨
ಭಾಸ್ಕರ ೪೦
ಭೀಮನೃಪಾಲನ ಆಸ್ಥಾನ ೧೮೧
ಮತತ್ರಯ ೧೩೧
ಮಥುರೆ ೧೦
ಮಧ್ವಸರೋವರ ೨೨೦
ಮಧ್ವಾಚಾರ್ಯ ೧೦, ೧೨, ೪೪
ಮಂದಾರಮಂಜರಿ ೪೪
ಮಾಯಾವಾದಖಂಡನ ೪೪
ಮರಹಟ್ಟಿ ೧೭೭
ಮರಾಳ ೧೭೪
ಮಹಾಕಾವ್ಯ ೫೮
ಮಹಾಭಾರತ ತಾತ್ಪರ್ಯ ನಿರ್ಣಯ (ಕನ್ನಡ) ೪೭
ಮಹಾರಾಷ್ಟ್ರ ೧೭೭-೧೭೮
ಮಹ್ರಾಟ ೧೭೭
ಮಳೆ ೬೦
ಮಾಯಾವಾದ ಖಂಡನ ೪೪
ಮಾರವಾಡ ೧೦

ಮಾರಾಟ ೧೭೬-೧೭೭
ಮಾರುತ ೧೩೧-೧೩೨
ಮಿಥ್ಯಾತ್ವಾನು ಮಾನಖಂಡನ ೪೪
ಮಿರಾಬಾಯಿ ೧೦
ಮುಳಬಾಗಿಲು ೧೨, ೩೭
ಮೇವಾಡ ೧೦
ಮೈರಾವಣನ ಕಾಳಗ ೧೯೪, ೨೦೦
ಯಮ ೧೩೧
ರಘುಪತಿತೀರ್ಥ ೭, ೪೪
ರತ್ನಾಕರವರ್ಣಿ ೮೯-೯೦, ೧೭೫
ರತಿಪಂಚಮಿ ೪
ರಾಜಧಾನಿ-ರಾಜಾಸ್ಥಾನ ೧೬೦-೧೬೨
ರಾಮಚಂದ್ರತೀರ್ಥ ೪೩
ರಾಮತೀರ್ಥ ೭,೪೪
ರಾಮರಾಯ (ಅಳಿಯ.) ೫, ೨೨, ೨೮
ರಾಮಾನುಜಾಚಾರ್ಯ ೯, ೨೬
ರಾಯಚೂರು ೨, ೧೮, ೧೯೮
ರಾಯಿದಾಸ ೧೦
ರಾಕ್ಷಸದಂಗಡಿ ೭,೨೩,೬೩,೨೦೩, ೨೨೪-೨೨೫
ರುಕ್ಮಿಣಿಯ ಪ್ರಳಾಪ ೧೪೧-೧೪೨
ರುಕ್ಮಿಣೀಶವಿಜಯ ೪೬,೮೭-೮೮,೨೩೫
ರುದ್ರ ೪೦
ರುದ್ರಭಟ್ಟ ೧೫೮
ರಂಗನ ಬೈಲು ೨೯
ಲಕ್ಷ್ಮೀತೀರ್ಥ ೪೩
ಲಕ್ಷ್ಮೀನರಸಿಂಹದೇವಸ್ಥಾನ ೩೫-೩೬
ಲಕ್ಷ್ಮೀಶ-ಕನಕದಾಸ ೧೬೫-೧೬೭
ಲಿಂಗಣ್ಣ ೪೦
ಲೊಕ್ಕಿಗೊಂಡಿ ೨೭
ವಡಗಲೆಯರು ೯-೧೦
ವರುಣ ೧೩೧
ವಲ್ಲಭಾಚಾರ್ಯ ೧೧, ೧೯
ವಾಜಪೇಯ ೪೦
ವಾದ್ಯಗಳು ೨೦೧
ವಾದಿರಾಜ ೫-೮, ೨೯, ೪೭, ೮೭-೮೮, ೧೩೧
ವಾಯು ೧೩೧
ವ್ಯಾಖ್ಯಾನತ್ರಯ ೪೪
ವ್ಯಾಸಕೂಟ ೧೦
ವ್ಯಾಸಯೋಗಿ ಚರಿತಂ ೧೫,೩೭-೪೩
ವ್ಯಾಸರಾಯ ೧೨-೧೩,೨೯,೩೭-೪೭, ೨೧೨
ವ್ಯಾಸರಾಯರಮಠ ೨೯,೪೧,೪೩,೪೪
ವ್ಯಾಸಸಮುದ್ರ ೪-೫,೪೧,೨೧೨
ವಿಕ್ರಮಾರ್ಜುನ ವಿಜಯ ೨೦೬
ವಿಜಯನಗರ ೨,೬,೭,೧೫,೨೫,೨೭, ೨೮,೩೨,೩೭,೪೩,೬೯,೬೪,೧೩೦,೧೩೯, ೧೫೮,೧೯೮,೨೦೨-೨೦೩,೨೦೬-೨೦೮, ೨೨೪-೨೨೫
ವಿಜಯನಗರದವರ ಧ್ವಜ ೧೯೮
ವಿಜಯನಗರದವರ ರಣಗರ್ಜನೆ ೨೦೭-೨೦೮
ವಿಜಯನಗರದವರ ಲಿಪಿ ೩೩
ವಿಜಯಪುರ ೨೬
ವಿಜಯೀಂದ್ರ ೭,೪೪

ವಿದ್ಯಾರಣ್ಯ ೨೮
ವಿದ್ಯಾಶಂಕರ ೨೮
ವಿದ್ಯಾಸಿಂಹಾಸನಾಧಿಪತಿ ೪೧
ವಿರೂಪಾಕ್ಷ ೨೮
ವಿರೂಪಾಕ್ಷಪಂಡಿತ ೨೩,೧೭೬,೧೭೭
ವಿನೋದ ೧೮೨-೧೮೪
ವಿಷ್ಣುಸಮುದ್ರ ೪೩
ವಿಷ್ಣುಪುರಾಣ ೭೦-೭೨
ವಿಷ್ಣುವರ್ಧನ ೨೬-೨೭
ವೀರನರಸಿಂಹ ೩೯
ವೀರನಾರಾಯಣ ೩೦
ವ್ರೀಹಿಯ ಮಾತು ೯೨
ವೃಂದಾವನ ೧೦
ವೆಂಕಟಪತಿ ದೇವರಾಯ ೬,೧೪,೨೪-೨೫,೩೨,೨೦೩
ವೆಲ್ಲಪನಾಯಕ ೨೨೪-೨೨೫
ವೆಲ್ಲೂರು ೪೩
ವೈಕುಂಠದಾಸರು ೧೩
ವೈಕುಂಠವರ್ಣನೆ ೪೭
ಶಾಲಿಗ್ರಾಮ ೨೬
ಶಿವಾಜಿ ೧೭೭
ಶೃಂಗೇರಿ. ೨೮
ಶ್ರೀನಿವಾಸತೀರ್ಥ ೭,೪೩,೪೪
ಶ್ರೀಪತಿತೀರ್ಥ ೪೩
ಶ್ರೀಪಾದರಾಯರು ೧೨, ೩೭
ಶ್ರೀರಂಗರಾಯ ೨೪
ಷಣ್ಮುಖ ಪ್ರದ್ಯುಮ್ನರ ಆಣಕವಾಡು ೧೪೫-೧೪೬
ಸತ್ಯಾಶ್ರಯ ೨೦೬
ಸದಾಶಿವರಾಯ ೨೨-೨೩
ಸಂತವಿಜಯ ೧೨, ೫೦
ಸಂಪ್ರದಾಯಗಳು ೧೯೩-೧೯೫
ಸರಾಯಿ ೬೧
ಸಾಳುವನರಸಿಂಹ ೩೭-೩೮
ಸುಧೀಂದ್ರತೀರ್ಥ ೭, ೪೪
ಸುರೇಂದ್ರತೀರ್ಥ ೭, ೪೪
ಸುಪ್ಪಿಮುಟ್ಟೆ ೧೫೦
ಸೂರ್ಯಾಸ್ತ ೬೦
ಸೂಳೆಗೇರಿ ೧೯೨-೧೯೩
ಸೋದೆ ೫-೭, ೧೩, ೨೯
ಸೋಮನಾಥಕವಿ ೧೫, ೩೫-೪೨
ಸ್ಕಂದಪುರಾಣ ೬೪ ೬೫
ಸ್ವಪ್ನಗದ್ಯ ೪೭
ಹಯವದನ ೪೭, ೨೦೭
ಹರಿವಂಶ ೭೩-೭೬
ಹಂಪೆ ೭, ೨೮
ಹಾನಗಲ್ಲು ೨೭
ಹಿರೇಕೆರೂರು ೩೧
ಹುಲೇಕಲ್ಲು ೨೯